ಕೇಶಿರಾಜ ವಿರಚಿತ

# ಶಬ್ದಮಣಿದರ್ಪಣಂ



ರ್ಣಾಟಕ ಸಾಹಿತ್ಯ ಪರಿಷತ್ತು
ಬೆಂಗಳೂರು
೧೯೨೦



ಲೆ ರೂ. ೨-೮-೦

ಕೇಶಿರಾಜ ವಿರಚಿತ

# ಶಬ್ದಮಣಿದರ್ಪಣಂ

[ನಿಟ್ಟೂರು ನಂಜಯ್ಯನ ವ್ಯಾಖ್ಯಾನ ಸಹಿತವಾದುದು]

ಕರ್ನಾಟಕ ಸಾಹಿತ್ಯ ಪರಿಷತ್ತು
ಬೆಂಗಳೂರು
1920

# ಉಪೋದ್ಘಾತ

ಇದುವರೆಗೆ ದೊರೆತಿರುವ ಕನ್ನಡ ವ್ಯಾಕರಣಗಳಲ್ಲಿ ಕರ್ಣಾಟಕ ಶಬ್ದಶಾಸ್ತ್ರವನ್ನು ವಿಸ್ತಾರವಾಗಿ ಪ್ರತಿಪಾದಿಸುವ ಗ್ರಂಥವು ಶಬ್ದಮಣಿದರ್ಪಣವೊಂದೇ ಎಂದು ಕರ್ಣಾಟಕ ಕವಿಚರಿತೆಯಲ್ಲಿ ಹೇಳಿದೆ.[1] ನಾಗವರ್ಮನ ಕಾವ್ಯಾವಲೋಕನವೂ ಕರ್ಣಾಟಕ ಭಾಷಾಭೂಷಣವೂ ಶಬ್ದಮಣಿದರ್ಪಣಕ್ಕಿಂತಲೂ ಪುರಾತನವಾಗಿದ್ದರೂ—ಎಂದರೆ, ೧೨ ನೆಯ ಶತಮಾನದ ಮಧ್ಯಭಾಗದಲ್ಲಿ ರಚಿತವಾಗಿದ್ದರೂ—ಅಷ್ಟು ವಿಸ್ತಾರವಾಗಿಲ್ಲ. ಶಬ್ದಮಣಿದರ್ಪಣದಿಂದೀಚೆಗೆ ಹುಟ್ಟಿದ ಶಬ್ದಾನುಶಾಸನವು ಸಂಸ್ಕೃತದಲ್ಲಿ ಬರೆಯಲ್ಪಟ್ಟಿರುವುದರಿಂದ ಕನ್ನಡಿಗರಿಗೆ ಅಷ್ಟು ಸುಲಭವಲ್ಲದಿರುವುದು ಮಾತ್ರವಲ್ಲದೆ ಪ್ರಯೋಗಗಳ ವಿಷಯದಲ್ಲಿ ಶಬ್ದಮಣಿದರ್ಪಣಕ್ಕೆ ಸಮಾನವಾಗಲಾರದು.

ಕನ್ನಡ ಭಾಷೆಯು ಬಹಳ ಪ್ರಾಚೀನವಾದುದೆಂಬುದಕ್ಕೆ ಕರ್ಣಾಟಕ ಕವಿಚರಿತೆಯಲ್ಲಿ ಅನೇಕ ಪ್ರಮಾಣಗಳಿವೆ. ಸಮಂತಭದ್ರನೆಂಬ ಕನ್ನಡ ಕವಿಯು ಸುಮಾರು ೧೩೮ ನೆಯ ಇಸವಿಯಲ್ಲಿ ಇದ್ದಿರಬೇಕೆಂದು ಕವಿಚರಿತ್ರಕಾರರಾದ ರಾ. ನರಸಿಂಹಾಚಾರ್ಯರು ಊಹಿಸುತ್ತಾರೆ.[2] ಕನ್ನಡವನ್ನು ಉಚ್ಛ್ರಾಯ ಸ್ಥಿತಿಗೆ ತಂದವರು ಜೈನಮತದವರೆಂದು ನಿಸ್ಸಂಶಯವಾಗಿ ಹೇಳಬಹುದು. ಇದುವರೆಗೆ ದೊರೆತಿರುವ ಕನ್ನಡ ಗ್ರಂಥಗಳಲ್ಲಿ ಅಲಂಕಾರ ಗ್ರಂಥವಾದ ಕವಿರಾಜಮಾರ್ಗವೆಂಬುದು ಅತ್ಯಂತ ಪುರಾತನವಾದುದು. ಇದನ್ನು ಬರೆದ ನೃಪತುಂಗನು ೮೧೪ ನೆಯ ಇಸವಿಯಿಂದ ೮೭೭ರ ವರೆಗೆ ರಾಜ್ಯಭಾರ ಮಾಡಿದ ರಾಷ್ಟ್ರಕೂಟ ವಂಶದ ಜೈನ ದೊರೆ. ಈತನ ರಾಜಧಾನಿ ಮಾನ್ಯಖೇಟಪುರ. ಇದು ಈಗಿನ ಷೋಲಾಪುರದ ಆಗ್ನೇಯಕ್ಕೆ ಸುಮಾರು ೯೦ ಮೈಲುಗಳ ದೂರದಲ್ಲಿ ಹೈದರಾಬಾದು ಸೀಮೆಯಲ್ಲಿರುವ 'ಮಾಲ್‌ಖೇಡ್' ಎಂಬುದು ಆಗಿರಬಹುದೆಂದು ಹೇಳುತ್ತಾರೆ.[3] ನೃಪತುಂಗನು ಕವಿರಾಜಮಾರ್ಗದಲ್ಲಿ ತನ್ನ ಕಾಲಕ್ಕೆ ಹಿಂದೆ ಹಳಗನ್ನಡವಿದ್ದಿತೆಂದು ಹೇಳುವುದರಿಂದಲೂ, ಅವನು ಉದಾಹರಣೆಗಾಗಿ ಕೊಟ್ಟಿರುವ ಪದ್ಯಗಳ ಗಾಂಭೀರ್ಯದಿಂದಲೂ, ಕನ್ನಡಭಾಷೆಯು ನೃಪತುಂಗನ ಕಾಲಕ್ಕೆ ಬಹಳ ಹಿಂದೆಯೇ ಉತ್ತಮಸ್ಥಿತಿಗೆ ಬಂದಿರಬೇಕೆಂದು ತಿಳಿಯಬರುತ್ತದೆ.[4]

ಶಬ್ದಮಣಿದರ್ಪಣವನ್ನು ಬರೆದ ಕೇಶಿರಾಜನು ಸುಮಾರು ೧೨೬೦ ನೆಯ ಇಸವಿಯಲ್ಲಿದ್ದಿರಬೇಕೆಂದು ಕವಿಚರಿತೆಯಲ್ಲಿ ಹೇಳಿದೆ.[5] ಈತನು ಜೈನಮತ

---

1. ಸಂಪುಟ I, ಪುಟ 313. 2. ಕವಿಚರಿತೆ, ಸಂಪುಟ I, ಪುಟ 1. 3. ಕವಿಚರಿತೆ, ಸಂಪುಟ I, ಪುಟ 16. 4. ಕವಿಚರಿತೆ, ಸಂಪುಟ I, ಪುಟ 311. 5. ಸಂಪುಟ I, ಪುಟ 19.

ದವನು; ಸತ್ಕವಿಗಳ ವಂಶದಲ್ಲಿ ಹುಟ್ಟಿದವನು[1]; ಈ ವ್ಯಾಕರಣವಲ್ಲದೆ ಬೇರೆ ಐದು ಗ್ರಂಥಗಳನ್ನು ಬರೆದಿರುವಂತೆ ಹೇಳಿಕೊಂಡಿದ್ದಾನೆ[2]. ತನ್ನ ವ್ಯಾಕರಣಕ್ಕೆ ಗಜಗ, ಗುಣನಂದಿ, ಮನಸಿಜ, ಅಸಗ, ಚಂದ್ರಭಟ್ಟ, ಗುಣವರ್ಮ, ಶ್ರೀವಿಜಯ, ಹೊನ್ನ, ಹಂಪ, ಸುಜನೋತ್ತಂಸ—ಈ ಕವಿಗಳ ಗ್ರಂಥಗಳು ಲಕ್ಷ್ಯವೆಂದು ಹೇಳಿರುವುದಲ್ಲದೆ[3], ರನ್ನ, ನಾಗಚಂದ್ರ, ನಾಗವರ್ಮ, ನೇಮಿಚಂದ್ರ, ಹಂಸರಾಜ, ಬ್ರಹ್ಮಶಿವ—ಈ ಕವಿಗಳ ಗ್ರಂಥಗಳಿಂದಲೂ ಉದಾಹರಣೆಗಾಗಿ ಪದ್ಯಗಳನ್ನು ತೆಗೆದುಕೊಂಡಿದ್ದಾನೆ; ನಾಗವರ್ಮನ ಶಬ್ದಸ್ಮೃತಿಯ ಆನುಪೂರ್ವಿಯನ್ನೇ ಅನುಸರಿಸಿದ್ದರೂ ಶಬ್ದಮಣಿದರ್ಪಣದಲ್ಲಿ ಹೆಚ್ಚು ವಿಷಯಗಳನ್ನು ಸೇರಿಸಿ ವಿಸ್ತಾರವಾಗಿ ಬರೆದಿರುವಂತೆ ತೋರುತ್ತದೆ. ಇದರ ಸೂತ್ರಗಳ ವೃತ್ತಿಯನ್ನು ಗ್ರಂಥಕರ್ತನೇ ಬರೆದಿರುವನು. ಟೀಕೆ ಮತ್ತು ವಿಚಾರ ಮಾತ್ರ ನಿಟ್ಟೂರು ನಂಜಯ್ಯನು ಬರೆದುದು. ಈ ನಂಜಯ್ಯನು ಶಬ್ದಾನುಶಾಸನದಿಂದ ಸೂತ್ರಗಳನ್ನು ಉದಾಹರಣೆಗಾಗಿ ತೆಗೆದುಕೊಂಡಿರುವುದರಿಂದ[4] ಕೇಶಿರಾಜನಿಗಿಂತಲೂ ಬಹಳ ಈಚಿನವನೆಂದು ತೋರುತ್ತದೆ.

ಕೇಶಿರಾಜನ ಕಾಲದಲ್ಲಿಯೇ 'ೞ' ಅಕ್ಷರದ ಪ್ರಯೋಗದ ವಿಷಯವಾಗಿ ಸಂಶಯವು ಹುಟ್ಟಿತ್ತೆಂದು ಕಂಡುಬರುವುದು. ಈ ಅಕ್ಷರವಿರುವ ಪದಗಳ ಪಟ್ಟಿಯನ್ನು ಶಬ್ದಮಣಿದರ್ಪಣದಲ್ಲಿ ಕೊಟ್ಟಿರುವುದು ಈ ಕಾರಣದಿಂದಲೇ ಇರಬೇಕು. 'ಱ' ಅಕ್ಷರದ ಪ್ರಯೋಗದ ವಿಷಯವನ್ನು ಎತ್ತದೆ ಬಿಟ್ಟಿರುವುದರಿಂದ ಅದು ಆಗ ರೂಢಿಯಲ್ಲಿದ್ದಿರಬಹುದು.[5]

ಶಬ್ದಮಣಿದರ್ಪಣದ ಈ ನಮ್ಮ ಪ್ರತಿಯನ್ನು ಮೈಸೂರು 'ಓರಿಯಂಟಲ್ ಲೈಬ್ರೆರಿ' ಯಲ್ಲಿರುವ ಮೂರು ಓಲೆಯ ಪ್ರತಿಗಳ ಆಧಾರದಿಂದಲೂ, ಮಂಗಳೂರಿನಲ್ಲಿ ಅಚ್ಚಾಗಿರುವ ಎರಡು ಪುಸ್ತಕಗಳ ಸಹಾಯದಿಂದಲೂ ಮುದ್ರಿಸಲಾಗಿದೆ. ಒಂದು ಓಲೆಯ ಪ್ರತಿಯಲ್ಲಿ ಮಾತ್ರ ನಿಟ್ಟೂರು ನಂಜಯ್ಯನ ಟೀಕೆಯೂ ಇರುತ್ತದೆ. ಇದಕ್ಕೆ 'ಗ' ಎಂಬ ಸಂಜ್ಞೆಯನ್ನೂ, ಮಿಕ್ಕ ಎರಡಕ್ಕೂ 'ಕ', 'ಖ' ಎಂಬ ಸಂಜ್ಞೆಯನ್ನೂ ನಮ್ಮ ಪ್ರತಿಯಲ್ಲಿ ಕೊಟ್ಟಿದೆ. ಸೂತ್ರಗಳ ಆನುಪೂರ್ವಿಯು ಎಲ್ಲಾ ಪ್ರತಿಗಳಲ್ಲಿಯೂ ಒಂದೇ ವಿಧವಾಗಿಲ್ಲ; ಅಚ್ಚಾದ ಪ್ರತಿಗಳಲ್ಲಿರುವ ಕೆಲವು ಸೂತ್ರಗಳಿಗೆ 'ಅನುಕ್ತ ಸೂತ್ರಂ' ಎಂದು ಸಂಕೇತಮಾಡಿದ್ದಾರೆ.[6] ಈ ಸೂತ್ರಗಳು ಓಲೆಯ ಪ್ರತಿಗಳಲ್ಲಿ ದೊರೆಯುವುದಿಲ್ಲ. ಇಂತಹ ಸೂತ್ರಗಳ ಕಡೆಯಲ್ಲಿ ಸೂತ್ರಸಂಖ್ಯೆಯನ್ನಿಡದೆ ನಕ್ಷತ್ರ ಚಿಹ್ನೆಯನ್ನು ನಮ್ಮ ಪುಸ್ತಕದಲ್ಲಿ ಕೊಟ್ಟಿದೆ. ೧೮೦ ನೆಯ ಸೂತ್ರದ ಪೂರ್ವೋತ್ತರಾರ್ಧಗಳು ಮುದ್ರಿತ ಪ್ರತಿಗಳಲ್ಲಿ ಹಿಂದು

---

1. ಶಬ್ದಮಣಿದರ್ಪಣ, ಪುಟ ೨, ಪದ್ಯ ೨. 2. ಶ. ದ., ಪುಟ ೪೫೩, ಪದ್ಯ ೨. 3. ಶ. ದ., ಪುಟ ೩, ಪದ್ಯ ೫. 4. ಶ. ದ., ಪುಟ ೭೪, ೭೫, ೧೯೬, ೨೦೩... 5. ಕಿಟ್ಟೆಲ್ ಅವರ ಶಬ್ದಮಣಿದರ್ಪಣ (1872), ಪುಟ IX. 6. ಶ. ದ., ಪುಟ ೧೦೬, ೨೧೮.

ಮುಂದಾಗಿದ್ದುದನ್ನು ಓಲೆಯ ಪ್ರತಿಗಳಲ್ಲಿರುವಂತೆ ಸರಿಮಾಡಿದೆ; ಇದೇ ಕ್ರಮವು ಸರಿಯೆಂದು ವೃತ್ತಿ ಟೀಕೆಗಳ ಪರ್ಯಾಲೋಚನೆಯಿಂದಲೂ ನಿರ್ಧರಿಸಬಹುದು. ೨೮೦ ನೆಯ ಸೂತ್ರದ ಮುಂದಕ್ಕಿರುವ "ಕೂರಪ್ರಾಕಾರಂ" ಎಂಬ ಸೂತ್ರವು ಎಲ್ಲಾ ಪ್ರತಿಗಳಲ್ಲಿಯೂ ದೊರೆವುದರಿಂದ ಇದಕ್ಕೆ ಮಾತ್ರ ೨೮೦ (*a*) ಎಂಬ ಸಂಜ್ಞೆಯನ್ನು ಕೊಟ್ಟಿದೆ. ಮೊದಲಲ್ಲಿರುವ ಹತ್ತು ಮೂಲಪದ್ಯಗಳನ್ನೂ ಕೊನೆಯಲ್ಲಿರುವ ಸಮಾಪ್ತಿವಾಕ್ಯಂಗಳೆಂಬ ಐದು ಪದ್ಯಗಳನ್ನೂ, ಸೂತ್ರಲಕ್ಷಣವಿಲ್ಲವಾಗಿ, ಸೂತ್ರ ಸಂಖ್ಯೆಗೆ ಸೇರಿಸಿಲ್ಲ. ಪ್ರಯೋಗಸಾರವೆಂಬ ನಿಘಂಟುವಿನ ಮೊದಲಲ್ಲಿರುವ ಕಂದಕ್ಕೆ ಸೂತ್ರಸಂಖ್ಯೆಯನ್ನು ಕೊಟ್ಟಿದೆ. ಅಂತು, ಸೂತ್ರಸಂಖ್ಯೆಯನ್ನು ಮುದ್ರಿತ ಪ್ರತಿಗಳಲ್ಲಿರುವ ಸಂಖ್ಯೆಗೆ ಹೆಚ್ಚುಕಡಿಮೆ ಮಾಡದೆ, ೩೨೨ನ್ನೇ ಇಡಲಾಗಿದೆ.

ಗ್ರಂಥದ ಭಾಗಗಳಿಗೆ ಅಚ್ಚಿನ ಪ್ರತಿಗಳಲ್ಲಿ 'ಅಧ್ಯಾಯಂ' ಎಂದು ಹೆಸರಿಟ್ಟಿರುತ್ತಾರೆ. ಆದರೆ "ಕ್ರಮದಿಂದೆ ಸಂಧಿನಾಮಂ............ಸಂಧಿ ಶಬ್ದಮಣಿದರ್ಪಣದೊಳ್"[1] ಎಂದು ಕೇಶಿರಾಜನೇ ಸಂಕೇತಮಾಡಿರುವುದರಿಂದ ಈ ನಮ್ಮ ಪ್ರತಿಯಲ್ಲಿ 'ಸಂಧಿ' ಎಂದೇ ಸಂಕೇತಮಾಡಿದೆ. ಅಚ್ಚುಪುಸ್ತಕಗಳಲ್ಲಿ 'ಪ್ರಯೋಗಸಾರವೆಂಬ ಶಬ್ದಾರ್ಥನಿರ್ಣಯಂ' ಎಂಬುದಕ್ಕೆ '೧೦ನೆಯ ಅಧ್ಯಾಯಂ' ಎಂದು ಹೇಳಿದ್ದರೂ, ಓಲೆಯಪ್ರತಿಗಳಲ್ಲಿ ಈ ಸಂಖ್ಯೆಯನ್ನು ಕೊಡದೆ ಕೊನೆಯಲ್ಲಿ "ಪ್ರಯೋಗಸಾರಮೆಂಬ ಶಬ್ದಾರ್ಥನಿರ್ಣಯಂ ಪರಿಸಮಾಪ್ತಂ" ಎಂದುಮಾತ್ರ ಇರುವುದರಿಂದಲೂ, ಗ್ರಂಥದ ಮೊದಲಿನಲ್ಲಿ ಕೊಟ್ಟಿರುವ "ಕ್ರಮದಿಂದೆ ಸಂಧಿನಾಮಂ............"ಎಂಬ ಪ್ರತಿಜ್ಞಾವಾಕ್ಯದಲ್ಲಿ ಈ ವಿಷಯವನ್ನು ಹೇಳದಿರುವುದರಿಂದಲೂ, ಈ ನಮ್ಮ ಪ್ರತಿಯಲ್ಲಿ 'ಪ್ರಯೋಗಸಾರ' ವನ್ನು ೨ ನೆಯ ಪರಿಶಿಷ್ಟವನ್ನಾಗಿ ಕೊಟ್ಟಿದೆ. ೨೩ನೆಯ ಸೂತ್ರಕ್ಕೆ ಸಂಬಂಧಪಟ್ಟ ಜಟಿ ವಿಶಿಷ್ಟ ಶಬ್ದಗಳ ಪಟ್ಟಿಯನ್ನು ೧ನೆಯ ಪರಿಶಿಷ್ಟವಾಗಿಯೂ, ಪಾಠಕರ ಸೌಕರ್ಯಕ್ಕಾಗಿ ಅಕಾರಾದಿ ವರ್ಣಾನುಕ್ರಮದಲ್ಲಿಯೂ ಮುದ್ರಿಸಿದೆ.

ವೃತ್ತಿಯನ್ನು, ಓಲೆಯ ಪ್ರತಿಗಳನ್ನನುಸರಿಸಿ ಸಾಧ್ಯವಾದಮಟ್ಟಿಗೆ ಪರಿಷ್ಕರಿಸಲಾಗಿದೆ. ಕೆಲವು ಸೂತ್ರಗಳಿಗೆ ಯಾವ ಪ್ರತಿಯಲ್ಲಿಯೂ ವೃತ್ತಿಯನ್ನೇ ಕೊಟ್ಟಿಲ್ಲ. ಹೀಗೆ ಬಿಟ್ಟಿರುವುದು, ಸೂತ್ರವು ಸುಲಭವೆಂದಲ್ಲ; ಏಕೆಂದರೆ, ಕೆಲವುಕಡೆ ಇಂತಹವುಗಳಿಗೂ[2] "ಇದರ್ಕ್ಕಿದೆ ವೃತ್ತಿ" ಎಂದು ಬರೆದಿದೆ. ಆದುದರಿಂದ ವೃತ್ತಿಯನ್ನು ಕೊಡದಿರುವ ಸೂತ್ರಗಳಿಗೆ ಹೊಸದಾಗಿ ವೃತ್ತಿಯನ್ನು ಬರೆದು ಅಲ್ಲಲ್ಲಿಯೇ ಸೂಚಿಸಿರುತ್ತದೆ. ಅವ್ಯಯ ಪ್ರಕರಣದಲ್ಲಿ ಒಂದೆರಡಕ್ಕೆ ವಿನಾ ಮಿಕ್ಕ ಸೂತ್ರಗಳಿಗೆ ವೃತ್ತಿಯೇ ದೊರೆತಿಲ್ಲವಾಗಿ ಇವುಗಳ ವೃತ್ತಿಯನ್ನು ಸಮಗ್ರವಾಗಿ ಬರೆದಿದೆ.

---

1. ಶ. ದ, ಪುಟ ೫, ಪದ್ಯ ೧. 2. ಶ. ದ., ಸೂ. ೪೫, ೫೧, ೧೭೧.

ಅಚ್ಚಿನ ಪುಸ್ತಕಗಳಲ್ಲಿ ಕೊಟ್ಟಿರುವ ಹಲವು ಪ್ರಯೋಗಗಳಲ್ಲಿ ಅಶುದ್ಧಗಳು ಕಂಡುಬಂದುದರಿಂದ ಇತರ ಪ್ರತಿಗಳ ಸಾಹಾಯ್ಯದಿಂದ ಅಂತಹವನ್ನು ಸಾಧ್ಯವಾದ ಮಟ್ಟಿಗೆ ಪರಿಷ್ಕರಿಸಿದೆ; ಸಂಶಯವಾದುವುಗಳ ಪಕ್ಕದಲ್ಲಿ ಪ್ರಶ್ನಚಿಹ್ನೆ(?)ಯನ್ನು ಇಟ್ಟಿದೆ. ಕೆಲವು ಉದಾಹರಣ ವಾಕ್ಯಗಳು ಪದ್ಯರೂಪಗಳಾಗಿ ತೋರಿದುದರಿಂದ ಅವನ್ನು ಪದ್ಯರೂಪವಾಗಿಯೇ ಕೊಟ್ಟಿದೆ; ಕೆಲವನ್ನು ಯತ್ನವಿಲ್ಲದೆ ಹಾಗೆಯೇ ಬಿಡಬೇಕಾಯಿತು. ಕೆಲವು ಉದಾಹರಣೆಗಳಿಗೆ ಮಾತ್ರ ಆಕರವು ದೊರೆತರೂ, ಹಲವಕ್ಕೆ ದೊರೆತಿಲ್ಲವಾಗಿ, ಆಕರವನ್ನು ತೋರಿಸಲಾಗಲಿಲ್ಲ. ಧಾತುಪಾಠವನ್ನು, ಮೊದಲಿನಂತೆ ಸ್ವರಾಂತವ್ಯಂಜನಾಂತವಾಗಿಯೇ ಇಟ್ಟಿದ್ದರೂ, ಧಾತುಗಳನ್ನು ಪ್ರತ್ಯೇಕವಾಗಿ ವರ್ಣಾನುಕ್ರಮದಲ್ಲಿ ಕೊಟ್ಟು, ಕೆಲವಕ್ಕೆ ಕನ್ನಡದ ಅರ್ಥವನ್ನು ಬರೆದಿದೆ. ತದ್ಭವ ಪ್ರಕರಣದಲ್ಲಿಯೂ ಆಯಾ ಸೂತ್ರಗಳ ಪ್ರಯೋಗಗಳಲ್ಲಿರುವ ತದ್ಭವಗಳನ್ನು ವರ್ಣಾನುಪೂರ್ವಿಯಾಗಿ ತೋರಿಸಿದೆ.

ಟೀಕೆಯಲ್ಲಿ ಪೌನರುಕ್ತ್ಯಗಳು ಬಹಳವಾಗಿರುವುದರಿಂದಲೂ, ಕೆಲವೆಡೆಗಳಲ್ಲಿ ಅಶುದ್ಧಗಳಿರುವುದರಿಂದಲೂ, ತಕ್ಕಮಟ್ಟಿಗೆ ಪರಿಷ್ಕರಿಸಿ ಬರೆದಿದೆ. ಅಪಭ್ರಂಶ ಮತ್ತು ಅವ್ಯಯ ಪ್ರಕರಣಗಳಲ್ಲಿ ಸೂತ್ರವು ವೃತ್ತಿಯಿಂದಲೇ ಸುಲಭವಾಗಿ ಅರ್ಥವಾಗುವುದರಿಂದ, ಟೀಕೆಯನ್ನು ಕೊಟ್ಟಿಲ್ಲ. ಮುದ್ರಣದ ತಪ್ಪುಗಳು ಬೀಳದಂತೆ ಮಾಡಬೇಕೆಂದು ಎಷ್ಟು ಪ್ರಯತ್ನಮಾಡಿದರೂ ಸಾಧ್ಯವಾಗದೆ, ಕೆಲವು ತಪ್ಪುಗಳು ಬಿದ್ದಿವೆ. ಅವುಗಳಲ್ಲಿ ಕೆಲವನ್ನು ತಿದ್ದಿ, ಮಿಕ್ಕುವನ್ನು ಶುದ್ಧಿಪತ್ರಿಕೆಯಲ್ಲಿ ಕೊಟ್ಟಿದೆ. ವೃತ್ತಿ, ಟೀಕೆ, ಪ್ರಯೋಗ—ಇವುಗಳನ್ನು ಹೆಚ್ಚಾಗಿ ತಿದ್ದಬಾರದೆಂದು ಮೊದಲು ಪ್ರತಿಜ್ಞೆಮಾಡಿಕೊಂಡು ಹೊರಟದ್ದರಿಂದ ಅಲ್ಲಲ್ಲಿ ಕೆಲವು ಅಸಂಬದ್ಧಗಳು ಕಾಣಬರಬಹುದು. 'ಆಗುವದು', 'ಎನಿಸುವದು' ಎಂಬರೂಪಗಳೂ, ಕೆಲವು ಕಡೆ 'ಪಂಣೆಲೆ' 'ಕಂಮುಱಂ' 'ಸಂನಿಧಾನ' ಎಂಬ ರೂಪಗಳೂ, ಮತ್ತೆ ಕೆಲವು ಕಡೆ 'ಱೞ' ಗಳಿಗೆ ಪ್ರತಿಯಾಗಿ 'ರಳ' ಗಳೂ ಬಿದ್ದಿವೆ.

ಪಾಠಕರು ಸೂತ್ರಗಳನ್ನೂ ಪ್ರಯೋಗವಾಕ್ಯಗಳನ್ನೂ ಥಟ್ಟನೆ ಹುಡುಕಿ ತೆಗೆಯಲು ಅನುಕೂಲವಾಗುವಂತೆ ಇವುಗಳ ಸೂಚೀಪತ್ರಗಳನ್ನು ಹೊಸದಾಗಿ ಸೇರಿಸಿದೆ.

ಈ ಪ್ರತಿಯಲ್ಲಿ ಬಿದ್ದಿರಬಹುದಾದ ತಪ್ಪುಗಳನ್ನು ಪ್ರಾಜ್ಞರು ತೋರಿಸಿ ಕೊಟ್ಟಲ್ಲಿ, ಕೃತಜ್ಞತೆಯಿಂದ ಅಂಗೀಕರಿಸಿ, ಅವನ್ನು ಮುಂದಣ ಮುದ್ರಣದಲ್ಲಿ ನೇರ್ಪಡಿಸುವೆವು.

ಕರ್ಣಾಟಕ ಸಾಹಿತ್ಯ ಪರಿಷತ್ತು,
ಬೆಂಗಳೂರು,
ಸಿದ್ಧಾರ್ಥಿ ಸಂ॥ ಪುಷ್ಯ ಬ॥ ೫.

ಸಂಪಾದಕರು.

# ವಿಷಯಸೂಚಿಕೆ

ಶ್ರೀ

# ಶಬ್ದಮಣಿದರ್ಪಣಂ

---

## ಪೀಠಿಕೆ

ಶ್ರೀವಾಗ್ದೇವಿಗೆ ಶಬ್ದದಿ ।
ನಾವಾವಿಂದ್ರಿಯದ ವಿಷಯಮಂ ಶ್ರೋತ್ರದೊಳು ॥
ದ್ಭಾವಿಪ ನಿರ್ಮಲ ಮೂರ್ತಿಗಿ ।
ಳಾವಂದ್ಯೆಗೆ ಶಾಸ್ತ್ರಮುಖದೊಳವನತನಪ್ಪೆಂ ॥ ೧ ॥

**ವೃತ್ತಿ.**— ಕಾಂತಿಯೆಂಬ ಗುಣದೊಳನ್ವಿತೆಯಪ್ಪ ವಾಕ್ಕೆಂಬ ದೇವಿಗೆ ಪಂಚೇಂದ್ರಿಯಂಗಳ ವಿಷಯಮಪ್ಪ ಶಬ್ದ ಸ್ಪರ್ಶ ರೂಪ ರಸ ಗಂಧಂಗಳೊಳ್ಪಂ ಶ್ರೋತ್ರೇಂದ್ರಿಯಮೊಂದಱಲ್ಲಿಯೆ ಶಬ್ದಮುಖದಿನಭಿವ್ಯಕ್ತಿಯಂ ಮಾಳ್ಪ ವಿಮಲ ಸ್ವರೂಪೆಗೆ ಭುವನಸ್ತುತ್ಯೆಗೆ ಯೀ ಶಾಸ್ತ್ರಪ್ರಾರಂಭದಲ್ಲಿ ನಮಸ್ಕರಿಸುವಾತನಪ್ಪೆಂ.

..........................................................................................................

**ಟೀಕೆ.**—ಆವಾವಿಂದ್ರಿಯದ = ಶ್ರೋತ್ರ ತ್ವಙ್ ನೇತ್ರ ಜಿಹ್ವಾ ಘ್ರಾಣಂಗಳೆಂಬ ಸರ್ವೇಂದ್ರಿಯಂಗಳ, ವಿಷಯಮಂ=ಶಬ್ದ ಸ್ಪರ್ಶ ರೂಪ ರಸ ಗಂಧಂಗಳೆಂಬ ಸಮಸ್ತ ವಿಷಯಂಗಳಂ, ಶ್ರೋತ್ರದೊಳ್=ಶ್ರೋತ್ರೇಂದ್ರಿಯಮೊಂದಱಲ್ಲಿಯೆ, ಶಬ್ದದಿಂ=ಶಬ್ದ ದಿಂದೆ ("ಶಬ್ದಾನುವಿದ್ಧಮೇವೇದಂ ಜಗತ್ಸರ್ವಂ ಚರಾಚರಂ"—ಎಂಬ ಆಗಮವಾಕ್ಯ ಮುಂಟಾಗಿ ಸಮಸ್ತವಿಷಯಂಗಳುಂ ಶಬ್ದದಿಂದೆ ಅಱಿಯಲ್ಪಟ್ಟುವಾಗಿ), ಉದ್ಭಾವಿಪ= ಅಭಿವ್ಯಕ್ತಮಾಗಿ ಅಱಿಯಿಸುವ, ನಿರ್ಮಲಮೂರ್ತಿಗೆ=ವಿಮಲಸ್ವರೂಪೆಯಾದ, ಇಳಾ ವಂದ್ಯೆಗೆ= ಮನುಜರಿಂದ ವಂದಿಸಿಕೊಂಬಳಾದ, ಶ್ರೀ= ಐಶ್ವರ್ಯೋಪಲಕ್ಷಿತೆಯಾದ, ವಾಗ್ದೇವಿಗೆ= ವಾಕ್ಕೆಂಬ ದೇವಿಗೆ, ಶಾಸ್ತ್ರಮುಖದೊಳ್ = ಶಬ್ದಶಾಸ್ತ್ರ ಪ್ರಾರಂಭದಲ್ಲಿ, ಅವನತಂ=ನಮಸ್ಕರಿಸುವಾತಂ, ಅಪ್ಪೆಂ=ಆಗುವೆಂ. ॥ ೧ ॥

ಕವಿ ಸುಮನೋಬಾಣನ ಯಾ।
ದವ ಕಟಕಾಚಾರ್ಯನೆಸೆವ ದೌಹಿತ್ರನೆ ನಾಂ॥
ಕವಿ ಕೇಶವನೆಂ ಯೋಗಿ।
ಪ್ರವರ ಚಿದಾನಂದ ಮಲ್ಲಿಕಾರ್ಜುನ ಸುತನೆಂ ॥ ೨ ॥

**ವೃತ್ತಿ.**— ಯಾದವ ಕಟಕೋಪಾಧ್ಯಾಯನಪ್ಪ ಕವಿ ಸುಮನೋಬಾಣನ ಮಗಳ ಮಗನೆಂ, ಯೋಗಿವಲ್ಲಭನಪ್ಪ ಮಲ್ಲಿಕಾರ್ಜುನ ನಂದನನೆಂ, ಕೇಶಿರಾಜ ಕವಿಯೆಂ ಆಂ.

ಗುಣಮಮರೆ ಶಬ್ದಮಣಿದ।
ರ್ಪಣ ನಾಮುವನಿಟ್ಟು ನೆಱೆಯೆ ಕರ್ಣಾಟಕ ಲ॥
ಕ್ಷಣ ಶಬ್ದಶಾಸ್ತ್ರಮುಂ ಲಾ।
ಕ್ಷಣಿಕರ್ಪೇೞ್ದಿಂದು ಬೆಸಸೆ ಬಗೆವುಗೆ ಪೇೞ್ದೆಂ ॥ ೩ ॥

**ವೃತ್ತಿ.**— ಶಬ್ದಸಾಮರ್ಥ್ಯಮಮರೆ, ವಿಸ್ತರದಿಂ ಕರ್ಣಾಟಕ ವ್ಯಾಕರಣಮಂ, ಶಬ್ದಮಣಿದರ್ಪಣಮೆಂಬ ಪೆಸರನಿಟ್ಟು, ಲಕ್ಷಣಾಚಾರ್ಯರ್ ಪೇೞ್ದಿಂದು ಬೆಸಸೆ, ಮನಂಬುಗುವಂತೆ ಪೇೞ್ದೆಂ.

ಅವಧರಿಪುದು ವಿಬುಧರ್ ದೋ।
ಷವಿದಱೊಳೇನಾನುಮುಳ್ಳೊಡಂ ಪ್ರಿಯದಿಂ ತಿ॥
ರ್ದುವುದು ಗುಣಯುಕ್ತಮುಂ ದೋ।
ಷ ವಿದೂರಮುಮಾಗೆ ಮೆಚ್ಚಿ ಕೈಕೊಳ್ವುದಿದಂ ॥ ೪ ॥

---

**ಟೀಕೆ.**—ಆಂ=ಶಾಸ್ತ್ರಕಾರನಾದ ನಾಂ, ಯಾದವ=ಯದುಕುಲದ ಕ್ಷತ್ರಿಯರ, ಕಟಕ=ಸಮೂಹಕ್ಕೆ, ಆಚಾರ್ಯನ=ಗುರುವಾದ, ಕವಿ ಸುಮನೋಬಾಣನ=ಸುಮನೋಬಾಣನೆಂಬ ಕವೀಶ್ವರನ, ಎಸೆವ ದೌಹಿತ್ರನೆಂ= ಶೋಭಿಸುವ ಮಗಳ ಮಗನೆಂ, ಯೋಗಿ=ಯೋಗಿಗಳಲ್ಲಿ, ಪ್ರವರ=ಅತ್ಯಂತ ಶ್ರೇಷ್ಠನಾದ, ಚಿದಾನಂದ ಮಲ್ಲಿಕಾರ್ಜುನ=ಜ್ಞಾನಾನಂದಮುಳ್ಳ ಮಲ್ಲಿಕಾರ್ಜುನನ, ಸುತನೆಂ=ಮಗನೆಂ, ಕವಿ ಕೇಶವನೆಂ= ಕೇಶಿರಾಜ ಕವೀಶ್ವರನೆಂ ॥ ೨ ॥

**ಟೀಕೆ.**— ಗುಣಂ=ಶಬ್ದಸಾಮರ್ಥ್ಯವೆಂಬ ಗುಣಂ, ಅಮರೆ=ಪೊರ್ದುಗೆಯಾಗಲಾಗಿ, ಶಬ್ದಮಣಿದರ್ಪಣ ನಾಮುವಂ= ಶಬ್ದಮಣಿದರ್ಪಣವೆಂಬ ಪೆಸರಂ, ಇಟ್ಟು=ಕೊಟ್ಟು, ನೆಱೆಯೆ=ಪೆರ್ಚುಗೆಯಾಗೆ, ಕರ್ಣಾಟಕ=ಕನ್ನಡಕ್ಕೆ, ಲಕ್ಷಣ—ಸ್ವರೂಪನಿರೂಪಕವಾದ, ಶಬ್ದಶಾಸ್ತ್ರಮುಂ = ವ್ಯಾಕರಣ ಶಾಸ್ತ್ರಮುಂ, ಲಾಕ್ಷಣಿಕರ್=ಲಕ್ಷಣಾಚಾರ್ಯರ್, ಪೇೞ್ದಿಂದು=ಹೇೞ್ದಿಂದು, ಬೆಸಸೆ=ನಿರೂಪಿಸೆ, ಬಗೆವುಗೆ=ಮನಂಬುಗೆ, ಪೇೞ್ದೆಂ=ಹೇೞ್ದೆಂ ॥ ೩ ॥

**ವೃತ್ತಿ.**— ಶಬ್ದಮಣಿದರ್ಪಣದೊಳೇನಾನುಂ ದೋಷಮುಳ್ಳೊಡಂ ವಿದ್ವಾಂಸರವಧರಿಸಿ ಕೇಳ್ವ, ಕರುಣದಿಂ ಮನಃಪ್ರೀತಿವೆರಸಿ ತಿರ್ದುವುದು; ಗುಣಾನ್ವಿತಮುಂ ನಿರ್ದೋಷಮುಮಾಗೆ, ಮೆಚ್ಚಿ ಸ್ವೀಕರಿಪುದು.

ಗಜಗನ ಗುಣನಂದಿಯ ಮನ।
ಸಿಜನಸಗನ ಚಂದ್ರಭಟ್ಟ ಗುಣವರ್ಮ ಶ್ರೀ॥
ವಿಜಯರ ಹೊನ್ನನ ಹಂಪನ।
ಸುಜನೋತ್ತಂಸನ ಸುಮಾರ್ಗಮಿದಱೊಳೆ ಲಕ್ಷ್ಯಂ ॥ ೫ ॥

**ವೃತ್ತಿ.**—ಈ ಕವಿಗಳಾದಿಯಾದ ಮತ್ತಂ ಪಲಂಬರ್ ಪ್ರಸಿದ್ಧಕವಿಗಳುದಾಹರಣಂಗಳಿದಱೊಳೊಳವು.

ಪ್ರಾಸಚ್ಛಂದೋನ್ವಯ ವಿ।
ನ್ಯಾಸದಿನಂತಿಂತು ಶಬ್ದಮಿರ್ಕುಂ ವೃತ್ತಿ ॥
ವ್ಯಾಸಂ ತದ್ವ್ಯಾಕುಳಮೆಂ।
ದಾ ಸೂತ್ರಕ್ಕರ್ಥವೃತ್ತಿ ವರ್ತಿಸೆ ಬರೆದೆಂ ॥ ೬ ॥

**ವೃತ್ತಿ.**--ಪ್ರಾಸದ, ಛಂದದ, ಅನ್ವಯದ ನಿಱುಗೆಯಿಂ ಶಬ್ದಂಗಳ್ ವ್ಯತ್ಯಯಮಾಗಿರ್ಪುವು; ಅವಱವಱ ಬಱಿಯೊಳ್ವೃತ್ತಿಯ ವಿಸ್ತರಂ ವ್ಯಾಕುಲಮಾದಪುದೆಂದಾ ಸೂತ್ರಕ್ಕೆ ತಾತ್ಪರ್ಯಾರ್ಥಂ ಪ್ರವರ್ತಿಸುತ್ತಮಿರೆ ವೃತ್ತಿಯಂ ಬರೆದೆಂ.

---

**ಟೀಕೆ.**—ಇದಂ=ಈ ಶಬ್ದಮಣಿದರ್ಪಣವಂ, ವಿಬುಧರ್=ವಿದ್ವಾಂಸರ್, ಅವಧರಿಪುದು=ಕೇಳ್ವುದು, ಇದಱೊಳ್=ಈ ಶಬ್ದಮಣಿದರ್ಪಣದಲ್ಲಿ, ದೋಷಂ=ಅಷ್ಟಾದಶ ದೋಷಂ, ಏನಾನುಂ = ಏನಾದೊಡಂ, ಉಳ್ಳೊಡಂ= ಉಂಟಾದೊಡೆಯುಂ, ಪ್ರಿಯದಿಂ= ಪ್ರೀತಿಯಿಂದೆ, ತಿರ್ದುವುದು=ನೇರಿತ್ತಂ (ಸರಿ) ಮಾಡುವುದು, ಗುಣಯುಕ್ತಮುಂ= ಶಬ್ದಸಾಮರ್ಥ್ಯವೆಂಬ ಗುಣದೊಡನೆ ಕೂಡಿದುದುಂ, ದೋಷ ವಿದೂರಮುಂ= ದೋಷರಹಿತಮಾಪುದುಂ, ಆಗೆ= ಆಗಲಾಗಿ, ಮೆಚ್ಚಿ= ಒಡಂಬಟ್ಟು, ಕೈಕೊಳ್ವುದು= ಅಂಗೀಕರಿಸುವುದು ॥ ೪ ॥

**ಟೀಕೆ.**—ಗಜಗನ, ಗುಣನಂದಿಯ, ಮನಸಿಜನ, ಅಸಗನ, ಚಂದ್ರಭಟ್ಟ ಗುಣವರ್ಮ ಶ್ರೀವಿಜಯರ, ಹೊನ್ನನ, ಹಂಪನ, ಸುಜನೋತ್ತಂಸನ, ಸುಮಾರ್ಗಂ= ಲೇಸಾದ ಕಾವ್ಯಮಾರ್ಗಂ, ಇದಱೊಳೆ, ಲಕ್ಷ್ಯಂ = ಉದಾಹರಣೆಗಳ್ ॥ ೫ ॥

**ಟೀಕೆ.**— ಪ್ರಾಸ = ಷಟ್ಪ್ರಾಸಂಗಳ, ಛಂದಃ= ಛಂದಸ್ಸಿನ, ಅನ್ವಯ = ಅನ್ವಯದ, ವಿನ್ಯಾಸದಿಂ= ನಿಱುಗೆಯಿಂದೆ, ಶಬ್ದಂ = ಶಬ್ದಂಗಳ್, ಅಂತಿಂತು=ಪಲ್ಲಟವಾಗಿ, ಇರ್ಕುಂ=ಇರ್ಪುವು; ವೃತ್ತಿವ್ಯಾಸಂ=ವೃತ್ತಿವಿಸ್ತರಂ, ತತ್=ಅವುಗಳಿಂ, ವ್ಯಾಕುಳ

ಜನಮುಂಗೀಕರಿಪುದು ನೆ ।
ಟ್ಟನೆ ಸಂಬಂಧಾಭಿಧೇಯ ಶಕ್ಯಾನುಷ್ಠಾ ॥
ನ ನಿಜೇಷ್ಟಸಿದ್ಧಿಗಳ್ ನೆಲ ।
ಸಿ ನಿಂದ ಕಾರಣದೆ ಶಬ್ದಮಣಿದರ್ಪಣಮಂ ॥ ೭ ॥

**ವೃತ್ತಿ.**—ಸಂಬಂಧಮೆಂದು, ಪೊರ್ದುಗೆ; ಅಭಿಧೇಯಮೆಂದರ್ಥಂ; ಶಕ್ಯಾನುಷ್ಠಾನಮೆಂದಾಪದಾರ್ಥಮಂ ಸಾಧಿಸಲ್ತಕ್ಕುದ್ಯೋಗಂ; ಇಷ್ಟಸಿದ್ಧಿಯೆಂದದಱ ಫಲಪ್ರಾಪ್ತಿ—ಇವು ಶಬ್ದಮಣಿದರ್ಪಣದೊಳ್ ನೆಲೆಗೊಂಡಿರ್ಪುದಱಿಂ ಸ್ವೀಕರಿಸದ ಲೋಕಮಿಲ್ಲ.

........................................................................................................................

ಮೆಂಪು=ಸಂದೇಹವಪ್ಪುದೆಂದು, ಆ ಸೂತ್ರಕ್ಕೆ=ಆಯಾಸೂತ್ರಂಗಳ್ಗೆ, ಅರ್ಥವೃತ್ತಿ=ಅರ್ಥದ ವೃತ್ತಿ, ವರ್ತಿಸೆ=ಪ್ರವರ್ತಿಸೆ, ಬರೆದೆಂ=(ವೃತ್ತಿಯಂ) ಲಿಖಿಸಿದೆಂ ॥ ೬ ॥

**ಟೀಕೆ.**—ಸಂಬಂಧ=ಪ್ರಕೃತಿ ಪ್ರತ್ಯಯ ಸಂಬಂಧ, ಲಕ್ಷ್ಯ ಲಕ್ಷಣ ಸಂಬಂಧ, ವಿಶೇಷ್ಯ ವಿಶೇಷಣ ಸಂಬಂಧ, ಕರ್ತೃ ಕರ್ಮ ಕ್ರಿಯಾ ಸಂಬಂಧಮೆಂಬ ಪೊರ್ದುಗೆ, ಅಭಿಧೇಯಂ=ಅರ್ಥಂ, ಶಕ್ಯಾನುಷ್ಠಾನಂ=ಆ ಅರ್ಥವನ್ನು ಸಾಧಿಸಲ್ತಕ್ಕ ಉದ್ಯೋಗಂ, ನಿಜ=ತನ್ನ, ಇಷ್ಟಸಿದ್ಧಿಗಳ್=ಇಷ್ಟಾರ್ಥಸಿದ್ಧಿಗಳ್, ನೆಟ್ಟನೆ=ವ್ಯಕ್ತಮಾಗಿ, ನೆಲಸಿ=ನೆಲೆಗೊಂಡು, ನಿಂದ ಕಾರಣದೆ=ಇರ್ಪ ಕಾರಣದಿಂದೆ, ಶಬ್ದಮಣಿದರ್ಪಣಮಂ=ಶಬ್ದಮಣಿದರ್ಪಣವೆಂಬ ಶಾಸ್ತ್ರಮಂ, ಜನಂ=ವಿದ್ವಜ್ಜನಂ, ಅಂಗೀಕರಿಪುದು=ಸ್ವೀಕರಿಸುವುದು ॥ ೭ ॥

# ವ್ಯಾಕರಣ ಪ್ರಾರಮ್ಭಂ

ಕ್ರಮದಿಂದೆ ಸಂಧಿ ನಾಮಂ ।
ಸಮಾಸಮಾ ತದ್ಧಿತಂ ಪೊದಟ್ಟಾಖ್ಯಾತಂ ॥
ಪ್ರಮುದಿತ ಧಾತುವಪಭ್ರಂ ।
ಶಮವ್ಯಯಂ ಸಂಧಿ ಶಬ್ದಮಣಿದರ್ಪಣದೊಳ್ ॥ ೧ ॥

**ವೃತ್ತಿ.**—ತರುವಾಯಿಂ ಸಂಧಿಯೆಂದುಂ, ನಾಮಮೆಂದುಂ, ಸಮಾಸಮೆಂದುಂ, ತದ್ಧಿತಮೆಂದುಂ, ಆಖ್ಯಾತಮೆಂದುಂ, ಧಾತುವೆಂದುಂ, ಅಪಭ್ರಂಶಮೆಂದುಂ, ಅವ್ಯಯಮೆಂದುಂ, ಈ ಶಬ್ದಮಣಿದರ್ಪಣದೊಳ್ ಸಂಧಿಯೆಂಟಕ್ಕುಂ.

ಅನುಕೂಲ ಪವನನಿಂ ಜೀ ।
ವನಿಷ್ಟದಿಂ ನಾಭಿಮೂಲದೊಳ್ ಕಹಳೆಯ ಪಾಂ ॥
ಗಿನ ವೋಲ್ ಶಬ್ದದ್ರವ್ಯಂ ।
ಜನಿಯಿಸುಗುಂ ಶ್ವೇತಮದಱ ಕಾರ್ಯಂ ಶಬ್ದಂ ॥ ೨ ॥

**ವೃತ್ತಿ.**—ಅನುಕೂಲ ಪವನನ ಬೆಂಬಳಿಯಿಂ ಜೀವನೊಡನೆ ಸಂಬಂಧಮಾಗಿರ್ಪುದಱಿಂ ನಾಭಿಯ ಮೊದಲಲ್ಲಿ ನೆಗಪಿದ ಕಹಳೆಯಾಕಾರದಿಂ *ಶಬ್ದಮೆಂಬ ದ್ರವ್ಯಂ ಧವಳವರ್ಣಮಾಗಿ ಪುಟ್ಟುಗುಂ; ಅದಱ ಕಾರ್ಯಮಂ ಶಬ್ದಮೆಂಬರ್.

---

**ಟೀಕೆ.**—ಶಬ್ದಮಣಿದರ್ಪಣದೊಳ್=ಶಬ್ದಮಣಿದರ್ಪಣದಲ್ಲಿ, ಕ್ರಮದಿಂದೆ=ತರುವಾಯಿಂದೆ, ಸಂಧಿ=ಸಂಧಿ ಪ್ರಕರಣಮೆಂದು, ನಾಮಂ=ನಾಮ ಪ್ರಕರಣಮೆಂದು, ಸಮಾಸಂ=ಸಮಾಸ ಪ್ರಕರಣಮೆಂದು, ಆ ತದ್ಧಿತಂ=ಆ ಪ್ರಸಿದ್ಧವಾದ ತದ್ಧಿತ ಪ್ರಕರಣಮೆಂದು, ಪೊದಟ್ಟ=ಪ್ರಸಿದ್ಧಿವಡೆದ, ಆಖ್ಯಾತಂ=ಆಖ್ಯಾತ ಪ್ರಕರಣಮೆಂದು, ಪ್ರಮುದಿತ ಧಾತು=ವಿಶೇಷವಾಗಿ ಸಂತೋಷಿಸಲ್ಪಟ್ಟ ಧಾತು ಪ್ರಕರಣಮೆಂದು, ಅಪಭ್ರಂಶಂ=ಅಪಭ್ರಂಶ ಪ್ರಕರಣಮೆಂದು, ಅವ್ಯಯಂ= ಅವ್ಯಯ ಪ್ರಕರಣಮೆಂದು, ಸಂಧಿ=ಸಂಧಿಗಳ್ (ಎಂಟು) ॥ ೧ ॥

**ಟೀಕೆ.**—ಜೀವನ=ಜೀವಾತ್ಮನ, ಇಷ್ಟದಿಂ=ಇಚ್ಛೆಯಿಂದೆ, ಅನುಕೂಲ ಪವನನಿಂ=ಜೀವನೊಡನೆ ಅನುಕೂಲವಾದ ಪ್ರಾಣಮಾರುತನಿಂದೆ, ನಾಭಿಮೂಲದೊಳ್ =ನಾಭಿಯ ಮೊದಲಲ್ಲಿ, ಕಹಳೆಯ ಪಾಂಗಿನವೋಲ್=(ನೆಗಪಿದ) ಕಹಳೆಯಾಕಾರದ

* ವಿಚಾರಂ.—ಶಬ್ದದ್ರವ್ಯಮೆಂದೊಡೆ ಘಟಕ್ಕೆ ಮೃತ್ತಿಕೆಯೆಂತಂತೆ ಅಕ್ಷರಾತ್ಮಕವಾದ ಶಬ್ದಂಗಳಪ್ಪುಟ್ಟುವುದರ್ಕೆ ಉಪಾದಾನ ಕಾರಣವಾದ ವಸ್ತುವೆಂದಱುವುದು; ಶಬ್ದಕ್ಕೆ ದ್ರವ್ಯತ್ವಮಂ ಜೈನರ್ ಪೇಳ್ದಪರ್.

ವ್ಯಾಕರಣದಿಂದೆ ಪದಮಾ ।
ವ್ಯಾಕರಣದ ಪದದಿನರ್ಥಮರ್ಥದೆ ತತ್ತ್ವಾ ॥
ಲೋಕಂ ತತ್ತ್ವಾಲೋಕದಿ ।
ನಾಕಾಂಕ್ಷಿಪ ಮುಕ್ತಿಯಕ್ಕುಮದೆ ಬುಧರ್ಗೆ ಫಲಂ ॥ ೩ ॥

**ವೃತ್ತಿ.**—ವ್ಯಾಕರಣದಿಂದೆ ಪದಸಿದ್ಧಿಯಕ್ಕುಂ; ಆ ವ್ಯಾಕರಣದ ಪದಸಿದ್ಧಿಯಿಂದರ್ಥಜ್ಞಾನಮಕ್ಕುಂ; ಆ ಜ್ಞಾನದಿಂ ತತ್ತ್ವವಿಚಾರಮಕ್ಕುಂ; ತತ್ತ್ವವಿಚಾರದಿಂ ಬಯಸುವ ಮುಕ್ತಿ ದೊರೆಕೊಳ್ಗುಂ; ಬುಧರ್ಗದುಕಾರಣದಿಂ ವ್ಯಾಕರಣಮುಪಾದೇಯಂ.

......................................................................

ಹಾಗೆ, ಶಬ್ದದ್ರವ್ಯಂ=ಶಬ್ದವೆಂಬ ದ್ರವ್ಯಂ, ಶ್ವೇತಂ=ಧವಳವರ್ಣವಾಗಿ, ಜನಿಯಿಸುಗುಂ=ಪುಟ್ಟುವುದು; ಅದಜ=ಆ ಶಬ್ದದ್ರವ್ಯದ, ಕಾರ್ಯಂ=ಪ್ರಯೋಜನಂ, ಶಬ್ದಂ=ಶಬ್ದಮಕ್ಕುಂ ॥ ೨ ॥

**ಟೀಕೆ.**—ವ್ಯಾಕರಣದಿಂದೆ=ಶಬ್ದಶಾಸ್ತ್ರದಿಂದೆ, ಪದಂ=ಪದಸಿದ್ಧಿ, ಅಕ್ಕುಂ=ಅಪ್ಪುದು ; ಆ ವ್ಯಾಕರಣದ=ಆ ಶಬ್ದಶಾಸ್ತ್ರದ, ಪದದಿಂ=ಪದಸಿದ್ಧಿಯಿಂದೆ, ಅರ್ಥಂ=ಅರ್ಥವಿಚಾರಂ (ಅಪ್ಪುದು) ; ಅರ್ಥದೆ=ಅರ್ಥವಿಚಾರದಿಂದೆ, ತತ್ತ್ವಾಲೋಕಂ=ತತ್ತ್ವಜ್ಞಾನಂ (ಅಪ್ಪುದು) ; ತತ್ತ್ವಾಲೋಕದಿಂ=ತತ್ತ್ವಜ್ಞಾನದಿಂದೆ, ಆಕಾಂಕ್ಷಿಪ ಮುಕ್ತಿ=ಬಯಸಲ್ಪಡುವ ಮೋಕ್ಷಂ (ಅಪ್ಪುದು) ; ಅದೆ= ಆ ಮೋಕ್ಷವೆ, ಬುಧರ್ಗೆ=ವಿದ್ವಾಂಸರ್ಗೆ, ಫಲಂ=ಸತ್ಫಲಂ (ಅಪ್ಪುದು) ॥ ೩ ॥

# ಮೊದಲನೆಯ ಸಂಧಿ

## I. ಅಕ್ಷರಸಂಜ್ಞಾ ಪ್ರಕರಣಂ

**ಸೂತ್ರಂ** ॥ ಆರಯೆ ತಚ್ಛಾಸ್ತ್ರ ವ್ಯವ ।
ಹಾರ ಜ್ಞಾನಾರ್ಥಮಾಗಿ ಪೇೞಲ್ಪಡುಗುಂ ॥
ಧೀರರಿನಕ್ಷರ ಸಂಜ್ಞಾ ।
ಕಾರಂ ವ್ಯಾಕರಣದಾದಿಯೊಳ್ ಪರಿವಿಡಿಯಿಂ ॥ ೧ ॥

**ವೃತ್ತಿ.**—ಆ ಶಬ್ದಶಾಸ್ತ್ರ ವ್ಯವಹಾರಮಂ ತಿಳಿಯಲ್ಕೆ ಅಕ್ಷರಸಂಜ್ಞಾ ಸ್ವರೂಪಂ ವ್ಯಾಕರಣದ ಮೊದಲೊಳ್ ಕ್ರಮದಿಂ ಪೇೞಲ್ಪಡುಗುಂ.

**ಸೂತ್ರಂ** ॥ ಅಕ್ಕರಮುಂ ವರ್ಣಮುಮೆಂ ।
ದಕ್ಕುಂ ಶುದ್ಧಾಕ್ಷರಕ್ಕೆ ನಾಮಂ ಬರೆಪಂ ॥
ಬೊಕ್ಕುಚ್ಚರಿಸಲ್ ಬಾರದು ।
ವಕ್ಕರಮಲ್ತವು ಘನಸ್ವನಾದಿ ಧ್ವನಿಗಳ್ ॥ ೨ ॥

**ವೃತ್ತಿ.**—ಅಕ್ಕರಮೆಂದುಂ, ವರ್ಣಮೆಂದುಂ, ಶುದ್ಧಾಕ್ಷರಕ್ಕೆ ಪರ್ಯಾಯ ನಾಮಂ; ಬರೆಯಲುಮುಚ್ಚರಿಸಲುಂ ಬಾರದುವಕ್ಷರಂಗಳಲ್ತವು ಮೊೞಗು ಮೊದಲಾದ ಪಲತೆಱದ ಧ್ವನಿಗಳ್.

.........................................................................................

**ಟೀಕೆ.**—ತಚ್ಛಾಸ್ತ್ರ=ಆ ಶಬ್ದಶಾಸ್ತ್ರದ, ವ್ಯವಹಾರ=ವ್ಯವಹಾರದ, ಜ್ಞಾನಾರ್ಥವಾಗಿ=ತಿಳಿವಳಿಕೆಯ ಪ್ರಯೋಜನವಾಗಿ (ತಿಳಿವಳಿಕೆಗಾಗಿ), ಆರಯೆ= ವಿಚಾರಿಸೆ, ವ್ಯಾಕರಣದ=ವ್ಯಾಕರಣಶಾಸ್ತ್ರದ, ಆದಿಯೊಳ್=ಮೊದಲಲ್ಲಿ, ಧೀರರಿಂ=ವಿದ್ವಾಂಸರಿಂದೆ, ಅಕ್ಷರ ಸಂಜ್ಞಾಕಾರಂ=ಅಕ್ಷರಂಗಳ ಸಂಜ್ಞಾಸ್ವರೂಪಂ, ಪರಿವಿಡಿಯಿಂ= ತರುವಾಯಿಂದೆ, ಪೇೞಲ್ಪಡುಗುಂ=ಹೇಳಲ್ಪಡುವುದು ॥ ೧ ॥

**ಟೀಕೆ.**—ಅಕ್ಕರಮುಂ=ಅಕ್ಕರವೆಂದುಂ, ವರ್ಣಮುಂ = ವರ್ಣವೆಂದುಂ, ಶುದ್ಧಾಕ್ಷರಕ್ಕೆ = ಶುದ್ಧವಾದಕ್ಷರಂಗಳ್ಗೆ, ನಾಮಂ = ಪೆಸರ್, ಅಕ್ಕುಂ = ಅಪ್ಪುದು ; ಬರೆಪಂಬೊಕ್ಕು=ಬರೆವುದಂ ಪೊಕ್ಕು, ಉಚ್ಚರಿಸಲ್ ಬಾರದುವು=ಉಚ್ಚಾರಣೆಗೆ ಬಾರದುವು, ಅಕ್ಕರಂಗಳ್=ಅಕ್ಷರಂಗಳ್, ಅಲ್ತು=ಅಲ್ಲ ; ಅವು=ತಾವು, ಘನ=ಮೇಘದ, ಸ್ವನ=ಧ್ವನಿ, ಆದಿ=ಮೊದಲಾದ, ಧ್ವನಿಗಳ್=(ಪಲವು ತೆಱದ) ಧ್ವನಿಗಳ್ (ಅಪ್ಪುವು) ॥ ೨ ॥

ಸೂತ್ರಂ ॥ ವ್ಯವಹರಿಪುವೆರಡು ರೂಪಿಂ ।
ದವಕ್ಕರಂ ಶ್ರಾವಣಂ ಸ್ವನೈಕಾಕಾರಂ ॥
ವಿವಿಧಾಕಾರಂ ಲಿಪಿಭೇ ।
ದ ವೃತ್ತಿಯಿಂ ಚಾಕ್ಷುಷಂ ಪುರಾತನ ಮತದಿಂ ॥ ೩ ॥

ವೃತ್ತಿ.—ಎರಡುತೆಱದಾಕಾರದಿಂದಕ್ಕರಂ ವರ್ತಿಸುಗುಂ; ಶಬ್ದಾಕಾರದಿಂ ಕಿವಿಗೆ ವಿಷಯವಾದಕ್ಷರಂ ಶ್ರಾವಣಮೆಂಬುದು; ಲಿಪಿಭೇದದಿಂ ಪಲವಾಕಾರಮಾಗಿ ಕಣ್ಗೆ ತೋಱುವಕ್ಕರಂ ಚಾಕ್ಷುಷಮೆಂಬುದು; ಇದನಾದಿಮಾರ್ಗದಿನಱಿವುದು.

## ೧. ವರ್ಣಂಗಳ್

ಸೂತ್ರಂ ॥ ವರ್ಣಂಗಳ ಪಾಠಕ್ರಮ ।
ಮರ್ಣವವೃತ ಧಾತ್ರಿಯೊಳ್ ಪ್ರಸಿದ್ಧಂ ನಿಜದಿಂ ॥
ವರ್ಣಂಗಳಕಾರಾದ್ಯಾ ।
ಪೂರ್ಣತೆಯಂ ಪಡೆವುವಾ ಳಕಾರಂ ಬರೆಗಂ ॥ ೪ ॥

ವೃತ್ತಿ.—ಅಕ್ಕರಂಗಳನೋದುವನುಕ್ರಮಂ ಕಡಲುಡಿಗೆಯಾದ ಪೊಡವಿಯೊಳ್ ಪ್ರಸಿದ್ಧಂ; ಅಕ್ಕರಂಗಳಕಾರಂ ಮೊದಲಾಗಿ ಳಕಾರಪರ್ಯಂತಂ ಪರಿಪೂರ್ಣಮಾಗಿರ್ಪುವು: ಅವಾವುವೆಂದೊಡೆ—

ಅ ಆ, ಇ ಈ, ಉ ಊ, ಋ ೠ, ಎ ಏ, ಐ, ಒ ಓ ಔ; ಕ್ ಖ್, ಗ್ ಘ್, ಙ್; ಚ್ ಛ್, ಜ್ ಝ್, ಞ್; ಟ್ ಠ್, ಡ್ ಢ್, ಣ್; ತ್ ಥ್, ದ್ ಧ್, ನ್; ಪ್ ಫ್, ಬ್ ಭ್, ಮ್; ಯ್, ರ್, ಲ್, ವ್, ಶ್, ಷ್, ಸ್, ಹ್, ಳ್.

---

ಟೀಕೆ.—ಪುರಾತನ ಮತದಿಂದೆ=ಪೂರ್ವದ ಕವಿಗಳ ಮತದಿಂದೆ, ಅಕ್ಕರಂಗಳ್, ಅವು=ಅವು ತಾಂ, ಎರಡು ರೂಪಿಂದೆ= ಶ್ರಾವಣ ಚಾಕ್ಷುಷವೆಂಬೆರಡು ತೆಱದಾಕಾರದಿಂದೆ, ವ್ಯವಹರಿಪುವು=ವರ್ತಿಪುವು; ಸ್ವನೈಕಾಕಾರಂ=ಧ್ವನಿಯೊಂದಱಾಕಾರವನುಳ್ಳುದು, ಶ್ರಾವಣಂ=ಶ್ರಾವಣಮೆನಿಪುದು; ಲಿಪಿ=ಲಿಪಿಗಳ, ಭೇದ=ಭೇದದ, ವೃತ್ತಿಯಿಂ=ವರ್ತನೆಯಿಂದೆ, ವಿವಿಧಾಕಾರಂ=ನಾನಾ ಪ್ರಕಾರವಾದ ಆಕಾರವನ್ನುಳ್ಳುದು, ಚಾಕ್ಷುಷಂ=ಚಾಕ್ಷುಷವೆನಿಸುವುದು; ಶ್ರಾವಣಮೆಂದೊಡೆಕಿವಿಯಲ್ಲಿ ಕೇಳ್ಪುದು, ಚಾಕ್ಷುಷಮೆಂದೊಡೆ ಕಣ್ಣೊಳ್ಕಾಣ್ಬುದೆಂದಱಿವುದು. ॥ ೩ ॥

ಟೀಕೆ.—ಅರ್ಣವ=ಸಮುದ್ರದಿಂದೆ, ವೃತ=ಸುತ್ತಲ್ಪಟ್ಟ, ಧಾತ್ರಿಯೊಳ್=ಭೂಮಿಯಲ್ಲಿ, ವರ್ಣಂಗಳ=ಅಕ್ಷರಂಗಳ, ಪಾಠಕ್ರಮಂ=ಓದುವನುಕ್ರಮಂ, ನಿಜದಿಂ=ಸಹಜದಿಂದೆ, ಪ್ರಸಿದ್ಧಂ; ವರ್ಣಂಗಳ್=ಅಕ್ಷರಂಗಳ್, ಅಕಾರ=ಅಕಾರಂ, ಆದಿ=ಮೊದಲಾಗಿ, ಆಪೂರ್ಣತೆಯಂ=ಪರಿಪೂರ್ಣತ್ವಮಂ, ಆ ಳಕಾರಂಬರೆಗಂ=ಆ ಳಕಾರಪರ್ಯಂತಂ, ಪಡೆವುವು. ॥ ೪ ॥

ಸೂತ್ರಂ ॥ ಕುಳದ ನಿಯಾಮದೊಳೆಂದುಂ ।
ಕ್ಷಳಕ್ಕೆ ಲಾಕ್ಷರ ವಿಕಲ್ಪಮಿಲ್ಲ ವಿಕಲ್ಪಂ ॥
ಕ್ಷಳನಿಲ್ಲದಿಲ್ಲ ಸಂಸ್ಕೃತ ।
ದೊಳಾ ಲಕಾರಕ್ಕೆ ಪೇೞ್ದಿನದಱಿಂ ಕ್ಷಳನಂ ॥ ೫ ॥

ವೃತ್ತಿ.—ಕುಳಪ್ರಾಸಮಾಗೆ ಪೇೞ್ದ ಕಬ್ಬಂ ಸೆಱೆಗೆಯ್ವುದಾಗಿ, ಲಕಾರಮಂ ವಿಕಲ್ಪಮಂ ಮಾಡಬಾರದು; ಲಕಾರಪ್ರಾಸಮಾಗೆ ಪೇೞ್ದ ಕನ್ನಡದ ಕಬ್ಬದೊಳ್ ಕ್ಷಳನಂ ವಿಕಲ್ಪದಿನಿರಿಸಬಾರದು, ಇದುವುಮಾಗದು; ಕ್ಷಳನೆಂಬುದಿಲ್ಲದೆ, ಸಂಸ್ಕೃತ ಪದದ ಲಕಾರಕ್ಕೆ ವಿಕಲ್ಪಮಂ ಪೇೞಲ್ಬಾರದಾಗಿ, ಕ್ಷಳನನಿದಱೊಳೆ ಬೆರಸಿ ಪೇೞ್ದಿಂ. *

ಪ್ರಯೋಗಂ.—ಕುಳಕ್ಷಳ ಪ್ರಾಸಕ್ಕೆ—

ಕಂ ॥ ಕಿಳಿಱಿ ಹಯಂಗಳ್ ಗರ್ಜಿಸೆ ।
ಜಳದನಿಭಂಗಳ್ ಗಜಂಗಳ್...... ॥

(ಕಿಲಿಱಿ, ಜಲದ—ಎಂದಾಗದು)

ಲಕಾರಕ್ಕೆ ಕ್ಷಳನನಿರಿಸಬಾರದುದರ್ಕೆ—

ಕಂ ॥ ಓಲಗದೊಳೊರ್ಮೆ ನತ ನರ ।
ಪಾಲಕ ಚೂಡಾಮಣಿ ದ್ಯುತಿಪ್ಲುತ ಚರಣಂ ॥

---

ಟೀಕೆ.—ಕುಳದ=ಕುಳ ಳಕಾರದ, ನಿಯಾಮದೊಳ್=ಪ್ರಾಸಿನಲ್ಲಿ, ಕ್ಷಳಕ್ಕೆ=ಕ್ಷಳ ಳಕಾರಕ್ಕೆ, ಲಾಕ್ಷರ ವಿಕಲ್ಪಂ=ಲಕಾರದ ವಿಕಲ್ಪಂ, ಎಂದುಂ=ಆವಾಗಳುಂ, ಇಲ್ಲ=ಉಂಟಾಗದು; ಕ್ಷಳನಿಲ್ಲದೆ=ಕ್ಷಳಮೆಂಬ ಳಕಾರವಿಲ್ಲದೆ, ವಿಕಲ್ಪಂ=ಲಾಕ್ಷರ ವಿಕಲ್ಪಂ, ಇಲ್ಲ; ಸಂಸ್ಕೃತದೊಳ್ = ಸಂಸ್ಕೃತದಲ್ಲಿ, ಆ ಲಕಾರಕ್ಕೆ= ಆ ಸಂಸ್ಕೃತ ದಲ್ಲಿರ್ದ ಲಕಾರಕ್ಕೆ, ಅದಱಿಂ= ಅದುಕಾರಣದಿಂದೆ, ಕ್ಷಳನಂ=ಕ್ಷಳನೆಂಬ ಳಕಾರ ಮಂ, ಪೇೞ್ದಿಂ=ಹೇೞ್ದಿಂ. ॥ ೫ ॥

* ವಿಚಾರಂ.—ಕುಳಮೆಂದೊಡೆ ಕನ್ನಡ ಶಬ್ದದಲ್ಲಿ ಇರ್ದ ಳಕಾರಂ; ಕ್ಷಳಮೆಂದೊಡೆ ಸಂಸ್ಕೃತ ಶಬ್ದದಲ್ಲಿ "ಲಳಯೋರಭೇದಃ" ಎಂದು ಉಂಟಾಗಿ, ಲಕಾರ ಳಕಾರಂಗಳ್ಗೆ ಭೇದವಿಲ್ಲದ ಳಕಾರ ಮೆಂದಱಿವುದು. (೧೬ ನೆಯ ಸೂತ್ರಮಂ ನೋಡುವುದು.)

## ೨. ಸ್ವರಂಗಳ್

ಸೂತ್ರಂ ॥ ತರದಿನಕಾರಂ ಮೊದಲಾ ।
ಗಿರೆ ಪದಿನಾಲ್ಕುಂ ಸ್ವರಂಗಳಾದಿಯ ಪತ್ತ ॥
ಕ್ಕರಮುಂ ಸಮಾನಮೆನಿಸುಗು ।
ಮೆರಡೆರಡವಱೊಳ್ ಸವರ್ಣಮೆಂತೋದಿದೊಡಂ ॥ ೬ ॥

ವೃತ್ತಿ.—ಕ್ರಮದಿಂದಕಾರಂ ಮೊದಲಾಗಿ ಔಕಾರಪರ್ಯಂತಮಿರ್ದ ಪದಿನಾಲ್ಕಕ್ಕರಂ ಸ್ವರಸಂಜ್ಞೆಯಂ ಪಡೆಗುಂ; ಅಲ್ಲಿ ಮೊದಲ ಪತ್ತಕ್ಕರಂ ಸಮಾನ ಸಂಜ್ಞೆಯಂ ಪಡೆಗುಂ; ಆ ಪತ್ತಕ್ಕರಂಗಳೊಳ್ ಎರಡೆರಡಕ್ಕರಂಗಳ್ ತಮ್ಮೊಳನುಲೋಮದೊಳಿರ್ದೊಡಂ ವಿಲೋಮದೊಳಿರ್ದೊಡಂ ಸವರ್ಣಸಂಜ್ಞೆಯಂ ಪಡೆಗುಂ.

ಪದಿನಾಲ್ಕು ಸ್ವರಂಗಳ್—ಅ ಆ, ಇ ಈ, ಉ ಊ, ಋ ೠ, ಌ ೡ, ಏ ಐ, ಓ ಔ—ಎಂಬೀ ಪದಿನಾಲ್ಕುಂ ಸ್ವರಂಗಳ್.

ಸಮಾನ ಸಂಜ್ಞಾಕ್ಷರಂಗಳ್—ಅ ಆ, ಇ ಈ, ಉ ಊ, ಋ ೠ, ಌ ೡ, ಎಂಬಿವು ಪತ್ತುಂ ಸಮಾನ ಸಂಜ್ಞೆಗಳ್.

ಅನುಲೋಮಕ್ಕೆ—ಅ ಆ, ಇ ಈ—ಎಂಬೀ ಪ್ರಕಾರಮಾಗಿ ಆ ಪತ್ತಕ್ಷರಂಗಳ್ ಅನುಲೋಮದೊಳಿರ್ದೊಡಂ ಸವರ್ಣ ಸಂಜ್ಞೆಯಂ ಪಡೆಗುಂ.

ವಿಲೋಮಕ್ಕೆ—ಆ ಅ, ಈ ಇ—ಎಂಬೀ ಪ್ರಕಾರಮಾಗಿರ್ದೊಡಂ ಸವರ್ಣ ಸಂಜ್ಞೆಯಂ ಪಡೆಗುಂ.

ಸೂತ್ರಂ ॥ ಕ್ರಮದಿಂ ಹ್ರಸ್ವಕ್ಕಂ ಹ್ರ ।
ಸ್ವಮೊದವೆ ದೀರ್ಘಕ್ಕೆ ದೀರ್ಘಮೊದವೆ ತಗುಳ್ಗುಂ ॥
ಸಮಸಂದಾ ಯುಗಳಂಗಳೊ ।
ಳಮಳಿನಮಾಗೆಲ್ಲಿಯುಂ ಸವರ್ಣ ವಿಧಾನಂ ॥ ೭ ॥

---

ಟೀಕೆ.—ತರದಿಂ = ತಱುವಾಯಿಂದೆ, ಅಕಾರಂ = ಅತ್ವಂ, ಮೊದಲಾಗಿ= ಆದಿಯಾಗಿ, ಇರೆ=ಇರಲಾಗಿ, ಪದಿನಾಲ್ಕುಂ=ಹದಿನಾಲ್ಕಕ್ಷರಂಗಳುಂ, ಸ್ವರಂಗಳ್= ಸ್ವರಾಕ್ಷರಂಗಳ್, ಎನಿಸುಗುಂ=ಎನಿಸುವುವು; ಆದಿಯ=ಮೊದಲ, ಪತ್ತಕ್ಕರಮುಂ= ಹತ್ತಕ್ಷರಂಗಳುಂ, ಸಮಾನಂ = ಸಮಾನಂಗಳ್, ಎನಿಸುಗುಂ = ಎನಿಸುವುವು; ಅವಱೊಳ್= ಆ ಸಮಾನಸಂಜ್ಞೆಯಂ ಪಡೆದ ಹತ್ತಕ್ಷರಂಗಳಲ್ಲಿ, ಎರಡೆರಡು=ಎರಡೆರಡಕ್ಷರಂಗಳ್, ಎಂತೋದಿದೊಡಂ= (ಅನುಲೋಮ ವಿಲೋಮಂಗಳಾಗಿ) ಎಂತು ಓದಿದೊಡೆಯುಂ, ಸವರ್ಣಂ=ಸವರ್ಣಂಗಳ್, ಎನಿಸುಗುಂ=ಎನಿಸುವುವು. ॥ ೬ ॥

ವೃತ್ತಿ.—ತಱುವಾಯಿಂದಾ ಯುಗಳಂಗಳೊಳ್ ಹ್ರಸ್ವಕ್ಕೆ ಹ್ರಸ್ವಂ ಪರಮಾದೊಡಂ, ದೀರ್ಘಕ್ಕೆ ದೀರ್ಘಂ ಪರಮಾದೊಡಂ, ನಿರ್ದೋಷಮಾಗಿ ಸವರ್ಣಸಂಜ್ಞೆ ವರ್ತಿಸುಗುಂ. ಎಂತೆಂದೊಡೆ—

ಹ್ರಸ್ವಕ್ಕೆ—ಅ ಅ, ಇ ಇ, ಉ ಉ, ಋ ಋ, ಌ ಌ.
ದೀರ್ಘಕ್ಕೆ—ಆ ಆ, ಈ ಈ, ಊ ಊ, ೠ ೠ, ೡ ೡ.

ಸೂತ್ರಂ ॥ ಸವನಿಸಿದೆ ಏ ಒ ಓ ಎಂ ।
ಬಿವು ಕನ್ನಡದೊಳ್ಸ್ವಭಾವದಿಂದೊಳವು ಸವ ॥
ರ್ಣವುಮಪ್ಪುವು ವರ್ಣಾಂಕಂ ।
ಸವರ್ಣಸಂಜ್ಞೆಯೊಳವೊದವುಗುಂ ವ್ಯಾಕೃತಿಯೊಳ್ ॥ ೮ ॥

ವೃತ್ತಿ.—ಎ ಏ, ಒ ಓ ಎಂಬೀ ಯುಗಳಾಕ್ಷರಂಗಳ್ ವಿಶಂಕಾವಧಾರಣ ನಿಪಾತಂಗಳಲ್ಲದೆ ನಿಜದಿನೊಳವು; ಸವರ್ಣಸಂಜ್ಞೆಯುಮವರ್ಕೆ ದೊರೆಕೊಳ್ವುದು; ವ್ಯಾಕರಣದೊಳ್ ಸವರ್ಣಸಂಜ್ಞೆಗೆ ವರ್ಣಸಂಜ್ಞೆಯುಮುಂಟು.

ಪ್ರಯೋಗಂ.—ಎಲೆ, ಎಲವಂ; ಏರಿ, ಏತಂ; ಒಕ್ಕಲ್, ಒರೆಗಲ್; ಓತಂ, ಓರಗೆ.

(೧) ಎತ್ತುಂಗೋಲುಂ ಬಿರಯಿಗೆ । ಚಿತ್ತಭವಂ... (ಕಂದಭಾಗಂ)
(೨) ಎಡಱಿದರನಟ್ಟಿ ಮೋದುವ । ಪಡಿಯಱಗಟ್ಟಿಗೆಗಳ್...(ಕಂದಭಾಗಂ)
(೩) ಏಳಿದಂ ಗೆಯ್ಯಿವಿಾಗಳ್.
(೪) ಏತಱ ಮಾತೋ ಭೂತಳದೊಳ್.
(೫) ಏಟುಂ ಬೆಸನಮುಮಂ ನರಪಾಲನುಟಿಗೆ.
(೬) ಒತ್ತರಮೊತ್ತಿದಂತೆ ಬೆಱಗಾಗೆ ಕೃಪಾದಿಗಳೊತ್ತೆ.

---

ಟೀಕೆ.—ಸಮಸಂದ = ಸಮಾನವಾಗಿ ಸಂದ, ಆ ಯುಗಳಂಗಳೊಳ್ = ಆ ಎರಡೆರಡಕ್ಷರಂಗಳಲ್ಲಿ, ಕ್ರಮದಿಂ = ತಱುವಾಯಿಂದೆ, ಪ್ರಸ್ವಕ್ಕಂ = ಪ್ರಸ್ವಾಕ್ಷರಕ್ಕೆಯುಂ, ಪ್ರಸ್ವಂ = ಪ್ರಸ್ವಾಕ್ಷರಂ, ಒದವೆ = ಬರಲ್, ದೀರ್ಘಕ್ಕೆ = ದೀರ್ಘಾಕ್ಷರಕ್ಕೆ, ದೀರ್ಘಂ = ದೀರ್ಘಾಕ್ಷರಂ, ಒದವೆ = ಬರಲ್, ಅಮಳಿನಮಾಗಿ = ನಿರ್ದೋಷಮಾಗಿ, ಎಲ್ಲಿಯುಂ = ಅವೆಡೆಯಲ್ಲಿಯುಂ, ಸವರ್ಣವಿಧಾನಂ = ಸವರ್ಣಸಂಜ್ಞಾವಿಧಾನಂ, ತಗುಳ್ಗುಂ = ಎಯ್ದುವುದು ॥ ೭ ॥

ಟೀಕೆ.—ಕನ್ನಡದೊಳ್ = ಕನ್ನಡ ಭಾಷೆಯಲ್ಲಿ, ಸವನಿಸಿದ = ಬಂದ, ಎ ಏ ಒ ಓ ಎಂಬಿವು = ಈ ಯುಗಳಾಕ್ಷರಂಗಳ್, ಸ್ವಭಾವದಿಂದೆ = ಸಹಜದಿಂದೆ, ಒಳವು = ಉಂಟು; ಸವರ್ಣವುಂ = ಸವರ್ಣಂಗಳುಂ, ಅಪ್ಪುವು = ಆಗುವುವು; ವ್ಯಾಕೃತಿಯೊಳ್ = ವ್ಯಾಕರಣದಲ್ಲಿ, ಸವರ್ಣಸಂಜ್ಞೆಯೊಳಂ = ಸವರ್ಣವೆಂಬ ಸಂಜ್ಞೆಯಲ್ಲಿಯುಂ, ವರ್ಣಾಂಕಂ = ವರ್ಣವೆಂಬ ಸಂಜ್ಞೆ, ಒದವುಗುಂ = ಬರ್ಪುದು ॥ ೮ ॥

(೭) ಓಸರಿಸಿದ ಜವನಿಕೆಯೊಡ। ನೋಸರಿಸಿದನಲ್ತೆ ಕಂತು ಪುಷ್ಪಾಂಜ
ಲಿಯಂ ॥ (ಕಂದಾರ್ಧಂ)

ಸೂತ್ರಂ ॥ ವಿದಿತ ಸಮಾನಂಗಳ ಪೂ।
ರ್ವದಕ್ಕರಂ ಹ್ರಸ್ವಮದಱ ಪರದಕ್ಕರಮಂ ॥
ತದು ದೀರ್ಘಮವರ್ಣಂ ಪಿಂ।
ಗಿದಾ ಸ್ವರಂ ನಾಮಿಯೆಂದು ಪೇೞಲ್ಪಡುಗುಂ ॥ ೯ ॥

ವೃತ್ತಿ.—ಸಮಾನಸಂಜ್ಞೆಯಂ ಪಡೆದ ಪತ್ತಕ್ಕರಂಗಳ ಮೊದಲಕ್ಕರಂಗಳ್ ಹ್ರಸ್ವಂಗಳ್; ಅವಾವುವೆಂದೊಡೆ—ಅ, ಇ, ಉ, ಋ, ಌ ಎಂಬಿವು; ಎ, ಒ ಎಂಬಿವುಮಂತೆ ಸಲ್ಬುವು. ಅವಱ ಮುಂದಣಕ್ಕರಂಗಳ್ ದೀರ್ಘಂ; ಅವಾವುವೆಂದೊಡೆ—ಆ, ಈ, ಊ, ೠ, ೡ, ಏ, ಓ. ಅ ಆ ಎಂಬ * ವರ್ಣಂ ಪಿಂಗಿದಾ ಪನ್ನೆರಡು ಸ್ವರಂಗಳ್ ನಾಮಿ ಸಂಜ್ಞೆಯಂ ಪಡೆವುವು; ಅವಾವುವೆಂದೊಡೆ—ಇ ಈ, ಉ ಊ, ಋ ೠ, ಌ ೡ, ಏ ಐ, ಓ ಔ, ಎಂಬಿವು.

ಉ॥ ವ॥ ಅವರ್ಣವಾದಕ್ಕೆಡೆಯಾಗದೊಳ್ಪಿಂ।
ದವರ್ಣಿಕಾಮರ್ ಗುಣವೃದ್ಧಿಧಾಮರ್ ॥
ದಿವಾಕರರ್ ವ್ಯಾಕೃತಿನಾಮಿಗಳ್ ಪೋಲ್।
ದಿವಕ್ಕೆ ಪನ್ನೀರ್ವರೆ ಮುಖ್ಯರಾದರ್ ॥

ಸೂತ್ರಂ ॥ ಕ್ರಮದೆ ಗುರುದೀರ್ಘಮೇಕಾ।
ರಮುಖ್ಯಸಂಧ್ಯಕ್ಷರಂಗಳವು ನಿಜದಿಂ ಹ್ರ ॥
ಸ್ವಮದೇಕಮಾತ್ರಕಂ ದೀ।
ರ್ಘಮುಭಯಮಾತ್ರಂ ತ್ರಿಮಾತ್ರಕಂ ಪ್ಲುತಮಕ್ಕುಂ ॥ ೧೦ ॥

---

ಟೀಕೆ.—ವಿದಿತ=ಪ್ರಸಿದ್ಧವಾದ, ಸಮಾನಂಗಳ=ಸಮಾನಸಂಜ್ಞೆಯಂ ಪಡೆದ ಪತ್ತಕ್ಕರಂಗಳ, ಪೂರ್ವದ = ಮೊದಲ, ಅಕ್ಕರಂ= ಅಕ್ಷರಂ, ಹ್ರಸ್ವಂ = ಹ್ರಸ್ವಾಕ್ಷರಂ; ಅದಱ = ಆ ಹ್ರಸ್ವಾಕ್ಷರದ, ಪರದ = ಮುಂದಣ, ಅಕ್ಕರಂ = ಅಕ್ಷರಂ, ಅಂತು=ಹಾಗೆ, ಅದು = ತಾಂ, ದೀರ್ಘಂ=ದೀರ್ಘಾಕ್ಷರಂ; ಅವರ್ಣಂ = ಅ ಆ ಎಂಬ ವರ್ಣಂ, ಪಿಂಗಿದ= ತೊಲಗಿದ, ಆ ಸ್ವರಂ=ಆ ಹನ್ನೆರಡು ಸ್ವರಾಕ್ಷರಂಗಳ್, ನಾಮಿಯೆಂದು= ನಾಮಿಗಳೆಂದು, ಪೇೞಲ್ಪಡುಗುಂ = ಪೇಳಲ್ಪಡುವುವು. ॥ ೯ ॥

* ವಿಚಾರಂ.—ವರ್ಣಸಂಜ್ಞೆ ಎಂತೆಂದೊಡೆ, ಅವರ್ಣಂ ಇವರ್ಣಂ ಉವರ್ಣಂ ಎಂಬಂತೆ ಇವಂ ತಿಳಿವುದು.

* ವಿಶೇಷ.—ವರ್ಣಗ್ರಹಣೇ ಸವರ್ಣಗ್ರಹಣಂ, ಕಾರಗ್ರಹಣೇ ಕೇವಲಗ್ರಹಣಮಿತಿ ವಿವೇಕಃ.

**ವೃತ್ತಿ.**— ತಜುವಾಯಿಂ ಗುರುವುಂ ದೀರ್ಘಮುಂ ಗೂಢಸಂಧಿಯುಮಾಗಿ ಸ್ವಭಾವದಿಂದೇಕಾರಂ ಮೊದಲಾದ ಸಂಧ್ಯಕ್ಷರಂಗಳಪ್ಪುವು; ಅವಾವುವೆಂದೊಡೆ—ಏ ಐ, ಓ ಔ. *

ಕಂದ ॥ ವರಸಂಧ್ಯಕ್ಷರವಂತಿರೆ।
ಗುರು ದೀರ್ಘಂ ಗೂಢಸಂಧಿಯೆನೆ ತೋಳ್ ನಾಲ್ಕುಂ॥
ಕರಮೆಸೆದಿರ್ಕುಂ ಪದ್ಮೋ।
ಪರಂಗೆ ಚಕ್ರಾಸಿ ಶಂಖ ಶಾರ್ಙ್ಗ ಸಮೇತಂ ॥

ಎರಡು ವ್ಯಂಜನಮನುಚ್ಚರಿಸುವನಿತು ಕಾಲಂ ಮಾತ್ರೆಯೆಂಬುದು, ಅದು ಹ್ರಸ್ವಮೆನಿಪುದು, ಲಘುವೆನಿಪುದು; ಸ್ವರವ್ಯಂಜನದಿನೇಕ ಮಾತ್ರಮಾದೊಡೆ ಹ್ರಸ್ವಂ, ದ್ವಿಮಾತ್ರಮಾದೊಡೆ ದೀರ್ಘಂ, ತ್ರಿಮಾತ್ರಮಾದೊಡೆ ಪ್ಲುತಂ.

**ಪ್ರಯೋಗಂ.**— ಹ್ರಸ್ವ ದೀರ್ಘ ಪ್ಲುತಕ್ಕೆ—ಭು ಭೂ ಭೂ೩ ಎಂದು ಪೂರಯಿಸಿದುದು ಶಂಖಂ; ಕು ಕೂ ಕೂ೩ ಎಂದು ಕೋಟಿ ಕೂಗಿದುವಾಗಳ್.

..................................................

**ಟೀಕೆ.**—ಕ್ರಮದೆ = ತಜುವಾಯಿಂದೆ, ಏಕಾರ= ಏಕಾರಂ, ಮುಖ್ಯ=ಮೊದಲಾದ, ಸಂಧ್ಯಕ್ಷರಂಗಳ್= ಏ ಐ, ಓ ಔ ಎಂಬ ಸಂಧ್ಯಕ್ಷರಂಗಳ್, ಅವು= ಅವು ತಾಂ, ನಿಜದಿಂ=ಸ್ವಭಾವದಿಂದೆ, ಗುರು=ಗುರುಗಳುಂ, ದೀರ್ಘಂ=ದೀರ್ಘಂಗಳುಂ, ಅಕ್ಕುಂ=ಅಪ್ಪುವು; ಏಕಮಾತ್ರಕಂ=ಒಂದು ಮಾತ್ರೆಯನುಳ್ಳುದು, ಅದು=ಅದು ತಾಂ, ಹ್ರಸ್ವಂ=ಹ್ರಸ್ವಾಕ್ಷರಂ (ಅಪ್ಪುದು) ; ಉಭಯಮಾತ್ರಂ=ಎರಡು ಮಾತ್ರೆಯನುಳ್ಳುದು, ದೀರ್ಘಂ=ದೀರ್ಘಾಕ್ಷರಂ (ಅಪ್ಪುದು); ತ್ರಿಮಾತ್ರಕಂ=ಮೂಱು ಮಾತ್ರೆಯನುಳ್ಳುದು, ಪ್ಲುತಂ= ಪ್ಲುತಾಕ್ಷರಂ (ಅಪ್ಪುದು). ॥ ೧೦ ॥

* ವಿಚಾರಂ.—ಸಂಧ್ಯಕ್ಷರಂಗಳೆಂದೊಡೆ ಸಂಸ್ಕೃತ ವ್ಯವಹಾರದಲ್ಲಿ ಸಂಧಿಯಾದಕ್ಷರಂಗಳೆಂಬುವುದು;ಅದೆಂತೆಂದೊಡೆ— ಅಕಾರಮುಂ ಇಕಾರಮುಂ ಕೂಡಿ ಸಂಧಿಯಾಗೆ, ಏಕಾರಂ ಪುಟ್ಟುಗುಂ; ಅಕಾರಮುಂ ಏಕಾರಮುಂ ಕೂಡಿ ಸಂಧಿಯಾಗೆ, ಐಕಾರಂ ಪುಟ್ಟುಗುಂ; ಅಕಾರಮುಂ ಉಕಾರಮುಂ ಕೂಡಿ ಸಂಧಿಯಾಗೆ, ಓಕಾರಂ ಪುಟ್ಟುಗುಂ; ಅಕಾರಮುಂ ಓಕಾರಮುಂ ಕೂಡಿ ಸಂಧಿಯಾಗೆ, ಔಕಾರಂ ಪುಟ್ಟುಗುಂ. ಇದರ್ಕುದಾಹರಣೆಗಳ್—

ಅಕಾರಂ ಇಕಾರಂ ಕೂಡಿ ಏಕಾರಮಾದುದರ್ಕೆ—ನಿಜ+ಇಷ್ಟಸಿದ್ಧಿಗಳ್=ನಿಜೇಷ್ಟಸಿದ್ಧಿಗಳ್.

ಐಕಾರಕ್ಕೆ—ಜ್ಯಾದಿಸಮಸ್ತ+ಏಕಾಕ್ಷರಂ=ಜ್ಯಾದಿಸಮಸ್ತೈಕಾಕ್ಷರಂ.

ಓಕಾರಕ್ಕೆ—ವಿದಿತ+ಉಭಯಕರ್ತೃಕಂ=ವಿದಿತೋಭಯಕರ್ತೃಕಂ.

ಔಕಾರಕ್ಕೆ—ವಿದಿತ+ಓಕಾರಂ=ವಿದಿತೌಕಾರಂ—ಎಂಬಂತೆ.

ಸೂತ್ರಂ ॥ ಬಿಂದುವನುಸ್ವಾರಂ ತಾ ।
ನೆಂದಕ್ಕುಂ ಸೊನ್ನೆ ಮುತ್ತುವೋಲ್ ವೃತ್ತತೆಯಿಂ ॥
ಸಂದಿರ್ಪುದಂತದಡಕಿ ।
ಲ್ವೊಂದಿರೆಮಣಿಗೊಪ್ಪುವೋಲ್ ವಿಸರ್ಗಮೆನಿಕ್ಕುಂ ॥ ೧೧ ॥

ವೃತ್ತಿ.— ಬಿಂದುವೆಂದುಮನುಸ್ವಾರಮೆಂದುಂ ಸೊನ್ನೆಗೆ ಪೆಸರಕ್ಕುಂ; ಬಿಂದು ಮುತ್ತಂ ಪೋಲ್ತು ಸೊನ್ನೆಯಂತೆ ಬಟ್ಟಿತ್ತಾಗಿರ್ಪುದಱಿಂ ಶೂನ್ಯಶಬ್ದಂ; ಇದಪಭ್ರಂಶಮಾಗಿ ಕನ್ನಡದೊಳ್ ಸೊನ್ನೆಯೆಂದಾಯ್ತು; ಬಿಂದುವಿನಂತಿರ್ಪುದಱಿಂ ಬಿಂದುವೆಂದಾಯ್ತು; ಬಿಂದುಸ್ವರೂಪಂ (ಂ). ಮಣಿಗೊಪ್ಪುವಿನಂತಿರೆ, ಎರಡು ಸೊನ್ನೆಯುಮಡಕಿಲಾಗಿ ನಿಲೆ, ವಿಸರ್ಗಮೆನಿಸುಗುಂ; ವಿಸರ್ಜನೀಯ ಮೆಂದುಂ ವಿಸರ್ಗಕ್ಕೆ ಪೆಸರ್; ವಿಸರ್ಗಸ್ವರೂಪಂ (ಃ).

ಪ್ರಯೋಗಂ.–ಬಿಂದುವಿಂಗೆ:—ಆಂದೋಳಂ, ಅಂದುಗೆ, ಅಂಬಿಕೆ, ಬೆರ್ಚಿ
ಬೆಳ್ಪಳಿಸಿ ಬಂದಂ ಫಲ್ಗುಣನಲ್ಲಿ, ಸಂದೆಯ
ಮಣಂ ತಾನಿಲ್ಲ.

ವಿಸರ್ಗಕ್ಕೆ:—ಅಃ! ಸಂದೆಯಮಿಲ್ಲ, ಮೆಚ್ಚಿದೆಂ.

ಸೂತ್ರಂ ॥ ಸ್ವರ ಪರದೊಳಿರ್ಪ [1]ತೆಱದಿಂ ।
ದುರುಮುಖ್ಯೋಚ್ಚಾರಣಕ್ಕೆ ಬಾರದ ಕತದಿಂ ॥
ಪರಿಕಿಸೆ ಬಿಂದು ವಿಸರ್ಗಂ ।
ಸ್ವರಾಂಗಮುಂ ವ್ಯಂಜನಾಂಗಮುಂ ತಾವೆಂಬರ್ ॥ ೧೨ ॥

ವೃತ್ತಿ.—ಸ್ವರಂಗಳ ಪರದೊಳಿರ್ಪ ದೂಸಱಿಂ ಸ್ವತಂತ್ರಮಾಗುಚ್ಚರಿಸಲ್ ಬಾರದುದಱಿಂ ಬಿಂದು ವಿಸರ್ಗಂಗಳ್ ಸ್ವರಾಂಗಮುಂ ವ್ಯಂಜನಾಂಗಮುಮಪ್ಪುವು. *

.....................................................................................................

ಟೀಕೆ.—ಬಿಂದು=ಬಿಂದುವೆಂದುಂ, ಅನುಸ್ವಾರಂ = ಅನುಸ್ವಾರವೆಂದುಂ, ಸೊನ್ನೆ, ತಾಂ, ಅಕ್ಕುಂ=ಅಪ್ಪುದು; ವೃತ್ತತೆಯಿಂ=ಬಟ್ಟಿತ್ತಾಗಿರ್ಪುದಱಿಂದೆ, ಮುತ್ತುವೋಲ್= ಮುತ್ತಿನ ಮಣಿಯ ಹಾಗೆ, ಸಂದಿರ್ಪುದು = ಸಲುವಳಿಯಾಗಿರ್ಪುದು ; ಅಂತು= ಹಾಗೆ, ಅದು= ಆ ಸೊನ್ನೆ, ಅಡಕಿಲ್ವೊಂದಿರೆ = ಒಂದಱ ಮೇಲೊಂದಿರೆ, ಮಣಿಗೊಪ್ಪುವೋಲ್=ಮಣಿಗೊಪ್ಪಿನ(ರತ್ನದ ಬುಗುಡಿಯ) ಹಾಗೆ, ವಿಸರ್ಗಂ=ವಿಸರ್ಜನೀಯಂ, ಎನಿಕ್ಕುಂ= ಎನಿಸುವುದು. ॥ ೧೧ ॥

---

1. ಕತದಿಂ 2. ಪಾಣಿನಿಸೂತ್ರಂ 8, 3, 23.

## ೩. ವ್ಯಂಜನಂಗಳ್

**ಸೂತ್ರಂ ॥** ಪ್ರಕಟತರ ವ್ಯಂಜನ ಸಂ।
ಜ್ಞೆ ಕಕಾರದಿನಾ ಳಕಾರಪರ್ಯಂತಂ ಪಂ ॥
ಚಕ ಪಂಚಕಂಗಳಿಂ ಪಂ।
ಚಕಮಕ್ಕುಂ ವರ್ಗಮಂತ್ಯವರ್ಣಮವರ್ಗಂ ॥ ೧೩ ॥

**ವೃತ್ತಿ.**—ಕಕಾರಂ ಮೊದಲಾಗಿ ಳಕಾರಪರ್ಯಂತಂ ವರ್ತಿಪ ವರ್ಣಂಗಳ್ ವ್ಯಂಜನಸಂಜ್ಞೆಯಂ ಪ್ರತ್ಯೇಕಂ ಪಡೆಗುಂ. ಕ್ ಖ್ ಗ್ ಘ್ ಙ್, ಚ್ ಛ್ ಜ್ ಝ್ ಞ್, ಟ್ ಠ್ ಡ್ ಢ್ ಣ್, ತ್ ಥ್ ದ್ ಧ್ ನ್, ಪ್ ಫ್ ಬ್ ಭ್ ಮ್; ಯ್ ರ್ ಲ್ ವ್ ಶ್ ಷ್ ಸ್ ಹ್ ಳ್ ಎಂಬಿವು ೩೪ ವ್ಯಂಜನಂಗಳ್. ಅವಱೊಳ್ ಕಕಾರಂ ಮೊದಲಾಗಿ ಮಕಾರಪರ್ಯಂತಮೈದೈದು ವರ್ಣಂಗಳೊಂದೊಂದು ವರ್ಗಮಾಗಿ, ವರ್ಗಮೈದಕ್ಕುಂ; ಆ ವರ್ಗಾಕ್ಷರಂಗಳಿರ್ಪತ್ತೈದಱ ಕಡೆಯಕ್ಕರಂಗಳವರ್ಗಂಗಳ್: ಯ್ ರ್ ಲ್ ವ್ ಶ್ ಷ್ ಸ್ ಹ್ ಳ್—ಎಂಬಿವು.

---

**ಟೀಕೆ.**—ಸ್ವರ=ಸ್ವರಾಕ್ಷರಂಗಳ, ಪರದೊಳ್=ಮುಂದುಗಡೆಯಲ್ಲಿ, ಇರ್ಪ ತೆಱದಿಂದೆ= ಇರ್ಪ ರೀತಿಯಿಂದೆ, ಉರು= ವಿಶೇಷವಾಗಿ, ಮುಖ್ಯೋಚ್ಚಾರಣಕ್ಕೆ = ಮುಖ್ಯವಾಗಿ ಉಚ್ಚರಿಪುದಕ್ಕೆ, ಬಾರದ ಕತದಿಂ= ಬಾರದ ಕಾರಣದಿಂದೆ, ಪರಿಕಿಸೆ= ವಿಚಾರಿಸೆ, ಬಿಂದು=ಸೊನ್ನೆ, ವಿಸರ್ಗಂ=ವಿಸರ್ಜನೀಯಂ, ಸ್ವರಾಂಗಮುಂ=ಸ್ವರಾಂಗಮೆಂದುಂ, ವ್ಯಂಜನಾಂಗಮುಂ= ವ್ಯಂಜನಾಂಗಮೆಂದುಂ, ತಾಂ= ವಿದ್ವಾಂಸರ್ತಾಂ, ಎಂಬರ್= ಪೇಳ್ವರ್. ॥ ೧೨ ॥

**ಟೀಕೆ.**—ಕಕಾರದಿಂ= ಕಕಾರದಿಂದೆ, ಆ ಳಕಾರಪರ್ಯಂತಂ= ಆ ಳಕಾರಪರ್ಯಂತವಾಗಿ, ಪ್ರಕಟತರ= ಪ್ರಸಿದ್ಧಮಾದ, ವ್ಯಂಜನಸಂಜ್ಞೆ = ವ್ಯಂಜನಾಕ್ಷರಂಗಳೆಂಬ ಸಂಜ್ಞೆ (ಅಪ್ಪುದು); ಪಂಚಕ ಪಂಚಕಂಗಳಿಂ= ಐದೈದಕ್ಷರಂಗಳಿಂದೆ, ವರ್ಗಂ= ವರ್ಗಂಗಳ್, ಪಂಚಕಂ= ಐದು, ಅಕ್ಕುಂ= ಅಪ್ಪುವು; ಅಂತ್ಯವರ್ಣಂ= ಕಡೆಯೊಂಬತ್ತಕ್ಷರಂಗಳ್, ಅವರ್ಗಂ= ಅವರ್ಗಾಕ್ಷರಂಗಳ್ ಅಪ್ಪುವು. ॥ ೧೩ ॥

* ವಿಚಾರಂ.—ಸ್ವರಂಗಳ ಪರದೊಳಿರ್ಪುದಱಿಂ ಸ್ವರಾಂಗಮೆಂದುಂ, ಸಂಸ್ಕೃತದೊಳ್ "ಮೋನುಸ್ವಾರಃ" "ಸ್ರೋರ್ವಿಸರ್ಗಃ" ಎಂಬ ಸೂತ್ರಂಗಳಿಂದೆ ಮಕಾರಮನುಸ್ವಾರಮೆಂದುಂ, ರೇಫಸಕಾರಂಗಳ್ ವಿಸರ್ಗಮೆಂದುಂ ಪೇಳ್ಪುದಱಿಂ ವ್ಯಂಜನಾಂಗಮೆಂದುಂ ಪೇಳ್ವರ್. ಅದಱಿಂ ಕೆಲಂಬರ್ ವ್ಯಾಕರಣಕಾರರ್ ಸ್ವರಸಂಜ್ಞೆಯಲ್ಲಿ ಪೇಳ್ವರ್; ಕೆಲಂಬರ್ ಜಿಹ್ವಾಮೂಲೀಯೋಪಧ್ಮಾನೀಯ ಬಿಂದು ವಿಸರ್ಗಂಗಳಂ ವ್ಯಂಜನಸಂಜ್ಞೆಯಲ್ಲಿ ಯೋಗವಾಹಂಗಳೆಂದು ಪೇಳ್ವರ್.

**ಸೂತ್ರಂ** ॥ ವರ್ಗದ್ವಿತೀಯ ವರ್ಣಂ ।
ವರ್ಗ ಚತುರ್ಥಾಕ್ಷರಂ ಮಹಾಪ್ರಾಣಮವಂ ॥
ಮಾರ್ಗವಿದರ್ಸಂಖ್ಯೆಯೊಳಂ ।
ಭೋರ್ಗರೆವನುಕೃತಿಯೊಳಂ ಪ್ರಯೋಗಿಸುತಿರ್ಪರ್ ॥ ೧೪ ॥

**ವೃತ್ತಿ.**—ವರ್ಗದೆರಡನೆಯಕ್ಕರಂಗಳುಂ ನಾಲ್ಕನೆಯಕ್ಕರಂಗಳುಂ ಮಹಾಪ್ರಾಣಂಗಳೆನಿಸುಗುಂ; ಇವಂ ಸಂಖ್ಯೆಯೊಳಮನುಕರಣದೊಳಂ ಮಾರ್ಗವಿದರ್ ಪ್ರಯೋಗಿಸುವರ್.

**ಪ್ರಯೋಗಂ.**—ಸಂಖ್ಯೆಗೆ—ಇರ್ಚ್ಛಾಸಿರಂ, ಎಣ್ಭಾಸಿರಂ, ನೂರ್ಚ್ಛಾಸಿರಂ, ಪದಿನೆಣ್ಭಾಸಿರಂ, ಲೋಹವಕ್ಕರೆಯ ಜಾತ್ಯಶ್ವಂಗಳಿರ್ಚ್ಛಾಸಿರಂ.

ಅನುಕರಣಕ್ಕೆ—ಖಣಿಲ್ಲನೆ, ಖಱಿಲನೆ, ಛಮ್ಮನೆ, ಧುಮ್ಮನೆ, ಝುಲುಮ್ಮನೆ, ಪಠಿಲ್ಲನೆ, ಢಮ್ಮನೆ, ಘೊಪ್ಪನೆ, ಧಣಮ್ಮನೆ, ಫೊಟ್ಟನೆ, ಘಱಿಲನೆ. ಝುಲ್ಲನೆ, ದುಢುಮ್ಮನೆ, ಧಟಿಮ್ಮನೆ, ಭೋರನೆ ಎಂಬಿವಾದಿಯಾಗಱಿವುದು.

**ಸೂತ್ರಂ** ॥ ಒಳವು ಮಹಾಪ್ರಾಣಂಗ ।
ಳ್ವಿಳಸತ್ಕರ್ಣಾಟಭಾಷೆಯೊಳ್ ಕೆಲವು ನಿಜೋ ॥
ಜ್ಜ್ವಳಮಾಗಿ ವರ್ಗದಂತ್ಯಂ ।
ಗಳನಱಿಯನುನಾಸಿಕಾಖ್ಯೆಯಂ ತಳೆದಿರ್ಕುಂ ॥ ೧೫ ॥

.................................................................................................

**ಟೀಕೆ.**—ವರ್ಗ= ವರ್ಗಂಗಳ, ದ್ವಿತೀಯವರ್ಣಂ= ಖ್ ಛ್ ಠ್ ಥ್ ಫ್ ಎಂಬೆರಡನೆಯ ಅಕ್ಕರಂಗಳುಂ, ವರ್ಗ= ವರ್ಗಂಗಳ, ಚತುರ್ಥಾಕ್ಷರಂ=ಘ್ ಝ್ ಢ್ ಧ್ ಭ್ ಎಂಬ ನಾಲ್ಕನೆಯ ಅಕ್ಷರಂಗಳುಂ, ಮಹಾಪ್ರಾಣಂ= ಮಹಾಪ್ರಾಣಾಕ್ಷರಂಗಳೆನಿಸುವುವು, ಅವಂ=ಆ ಮಹಾಪ್ರಾಣಾಕ್ಷರಂಗಳಂ, ಮಾರ್ಗವಿದರ್=(ಕನ್ನಡದ) ಕವಿಮಾರ್ಗಮಂ ಬಲ್ಲವರ್, ಸಂಖ್ಯೆಯೊಳಂ= ಸಂಖ್ಯಾವಾಚಿಗಳಲ್ಲಿಯುಂ, ಭೋರ್ಗರೆವ= ಧ್ವನಿ ಗೆಯ್ವ, ಅನುಕೃತಿಯೊಳಂ= ಅನುಕರಣಶಬ್ದಂಗಳಲ್ಲಿಯುಂ, ಪ್ರಯೋಗಿಸುತಿರ್ಪರ್= ಪ್ರಯೋಗವಂ ಮಾಡುತಿರ್ಪರ್. ॥ ೧೪ ॥

**ಟೀಕೆ**—ವಿಳಸತ್= ಒಪ್ಪಲ್ಪಟ್ಟ, ಕರ್ಣಾಟ= ಕನ್ನಡದ, ಭಾಷೆಯೊಳ್= ಭಾಷೆಯಲ್ಲಿ, ಮಹಾಪ್ರಾಣಂಗಳ್=ಮಹಾಪ್ರಾಣಂಗಳಾದ, ಕೆಲವು=ಕೆಲವು ಶಬ್ದಂಗಳ್, ನಿಜ= ಸಹಜದಿಂದೆ, ಉಜ್ಜ್ವಳಂ = ಪ್ರಕಾಶಿಪುವು, ಆಗಿ, ಒಳವು = ಉಂಟು; ವರ್ಗದ= ವರ್ಗಂಗಳ, ಅಂತ್ಯಂಗಳಂ=ಙ್, ಞ್, ಣ್, ನ್, ಮ್ ಎಂಬ ಅಂತ್ಯಾಕ್ಷರಂಗಳಂ, ಅಱಿ= ತಿಳಿ, ಅನುನಾಸಿಕಾಖ್ಯೆಯಂ=ಅನುನಾಸಿಕವೆಂಬ ಪೆಸರಂ, ತಳೆದು=ಧರಿಸಿ, ಇರ್ಕುಂ=ಇರ್ಪುವು. ॥ ೧೫ ॥

* ವಿಚಾರಂ.—ವರ್ಗದೆರಡನೆಯ ನಾಲ್ಕನೆಯ ಅಕ್ಷರಂಗಳ್ ಮಹಾಪ್ರಾಣಂಗಳಾದಲ್ಲಿ ವರ್ಗದೊಂದನೆಯ ಮೂಱನೆಯ ಕ್, ಚ್, ಟ್, ತ್, ಪ್; ಗ್, ಜ್, ಡ್, ದ್, ಬ್, ಎಂಬಿವು ಅಲ್ಪಪ್ರಾಣಂಗಳೆಂದಱಿವುದು.

§ ವಿಚಾರಂ.—ಅನುನಾಸಿಕವೆಂದೊಡೆ ಮುಖನಾಸಿಕದೊಡನೆ ಕೂಡಿ ಉಚ್ಚರಿಪುದು.

ವೃತ್ತಿ.—ಒಪ್ಪುವ ಕನ್ನಡದೊಳ್ ಸ್ವಭಾವದಿಂ ಕೆಲವು ಮಹಾಪ್ರಾಣಂಗಳೊಳವು; ಅವಾವುವೆಂದೊಡೆ—

ವರ್ಗ ದ್ವಿತೀಯಾಕ್ಷರಂಗಳ್ಗೆ— ವಖ್ಖಾಣಂ, ದೆಖ್ಖಾಣಂ (ದೆಖ್ಖಾಳಂ), ಪಖ್ಖಾಳಂ, ಅಖ್ಖಂಡಂ (ಅಖ್ಖಣ್ಣಂ), ಖೊಪ್ಪರಂ, ಖಾಣಂ, ಖಾರಿಗೆ; ಛಲ್ಲಿ ಮಾಡಿದಂ (ಛಲ್ಲಂ ಮಾಡಿದಂ), ಛರ್ಪಿಸಿದಂ (ಛಪ್ಪಿಸಿದಂ), ಎಕ್ಕ ಛಾಯಂ; ಠಾವು, ಠಾಣಂ, ಠಕ್ಕಿಸಿದಂ (ಠಿಕ್ಕಿಸಿದಂ), ಠಾಣಿಸಿತು; ಥಟ್ಟು, ಥಾಪನೆ, ಸುತ್ಥಣೆ (ಸುತ್ಥಣೆಯಂ, ಸತ್ಥಣೆ), ಮತ್ಥವಟ್ಟಿಗೆ, ಕಥಾಯಂ (ಕತ್ಥಾಯಂ); ಫಳೆಯ ಕಾಱಂ, ಫೆಳಾವುಗಂ, ಫೇಳಿ, ಅಫಳಿಯಂ (ಅಪ್ಪಳಿಯಂ).

ವರ್ಗ ಚತುರ್ಥಾಕ್ಷರಂಗಳ್ಗೆ — ಘಟಿಯಂ, ಘಾಟಿಗೆ (ಘಾರಿಗೆ), ಘೋಟಿಗೆ, ಘೋಸಂ, ಘಾಸಿ, ಘಾಸರಂ; ಝಳಂ, ಝಳಕಂ, ಝಲ್ಲಱಿ (ಝಲ್ಲರಿ), ಝಟಿಸಿತು, ಝೂಳಿಸಿತು, ಝಳಪಿಸಿತು, ಝಲ್ಲಿ, ಝಂಕೆ; ಢೊಂಕಣಿ, ಢೆಂಕಣ, ಅಢಾಳಂ (ಢಾಳಂ), ವೇಢೆಯಂ, ಢೆಂಕೆ, ಢೊಕ್ಕರಂ; ಧಟಂ, ಧಾಳಿ, ಧಾರಿ, ಧವಳಂ (ಧವಡಂ); ಭಂಗಾರಂ, ಭಂಡಾರಂ, ಭರಿಕೈ, ಭಲ್ಲೆಯಂ, ಭಾವಂ; ಕಂಭಕ್ಕಂ, ಭಾಸೆಗಂ ವಿಕಲ್ಪಂ.

ವರ್ಗಂಗಳೈದನೆಯ ಅಕ್ಕರಂಗಳನುನಾಸಿಕಾಖ್ಯೆಯಂ ಪಡೆಗುಂ; ಙ್, ಞ್, ಣ್, ನ್, ಮ್ ಎಂಬಿವು; ಇವರ್ಕೆ ಪ್ರಯೋಗಂ—

ಕಂದ ‖ ಬಿಙ್ಕಂಬೆತ್ತೆಸೆವ ಞಿಕ್ಕೆಯ ।
ಸಙ್ಕುಳಮುಂ ತೊಱ್ಙುಗೆಡೆವ ಶುಕಸಾರಿಕೆಯುಂ ‖
ಸೋಙ್ಕಿ ಬಲವನ್ನು ತೀಡುವ ।
ತೆಙ್ಕಣ ಗಾಳಿಯುಮುದೇಂ ಘನಙ್ಕೊಳಿಸಿದುವೋ ‖

ಸೂತ್ರಂ ‖ ಅನುನಾಸಿಕಮುಂ ಯವಲಮ ।
ನನುನಾಸಿಕಮುಂ ದಲೆಂಬರಾ ಸಂಸ್ಕೃತ ಶ ‖
ಬ್ದ ನಿಯುಕ್ತ ಲಕಾರದ ನೆಲೆ ।
ಗೆ ನಿಂದು ಸರಿಯಾಗಿ ಸಲ್ವುದಂ ಕ್ಷಳನೆಂಬರ್ ‖ ೧೬ ‖

---

ಟೀಕೆ.—ಯವಲಂ=ಯಕಾರ ವಕಾರ ಲಕಾರಂಗಳ್, ಅನುನಾಸಿಕಮುಂ= ಅನುನಾಸಿಕಂಗಳೆಂದುಂ, ಅನನುನಾಸಿಕಮುಂ=ನಿರನುನಾಸಿಕಂಗಳೆಂದುಂ, ದಲ್= ನಿಶ್ಚಯವಾಗಿ, ಎಂಬರ್=ಪೇಳ್ವರ್; ಆ ಸಂಸ್ಕೃತ=ಆ ಸಂಸ್ಕೃತದ, ಶಬ್ದ=ಶಬ್ದದಲ್ಲಿ, ನಿಯುಕ್ತ=ಕೂಡಲ್ಪಟ್ಟ, ಲಕಾರದ=ಲತ್ವದ, ನೆಲೆಗೆ=ಸ್ಥಾನಕ್ಕೆ, ಸರಿಯಾಗಿ=

**ವೃತ್ತಿ**— ಯ ವ ಲಂಗಳನುನಾಸಿಕಂಗಳುಂ ನಿರನುನಾಸಿಕಂಗಳುಮಪ್ಪುವು; ಸಂಸ್ಕೃತ ಶಬ್ದದಲ್ಲಿ ಯುಕ್ತಮಾದ ಲಕಾರದ ಸ್ಥಾನಕ್ಕೆ ನಿಂದು ಸರಿಯಾಗಿ ಸಲ್ಪ ಳಕಾರಮುಂ ಕ್ಷಳನೆಂಬರ್.

**ಪ್ರಯೋಗಂ.**— ಅನುನಾಸಿಕ ಯಕಾರಕ್ಕೆ—ಮೇಯಿಸಿದಂ, ನೋಯಿಸಿದಂ, ಮಯಣಂ, ನಯಣಂ, ಮಾಯಂ.

ಅನುನಾಸಿಕ ವಕಾರಕ್ಕೆ—ಸೇವಂ, ಸೋವೆ, ಸಾವೆ, ಜಾವಂ, ಮಾವಂತಂ ಕೋವಣಂ, ಕಾವಣಂ, ಸೇವಗೆ.

ಅನುನಾಸಿಕ ಲಕಾರಕ್ಕೆ—ಕೊಲ್ಲಣಿಗೆ, ಅಲ್ಲಣಿಗೆ (ಎಂದು ಮೇಳಂ), ಹಲ್ಲಣಂ, ಇಲ್ಲಣಂ.

ನಿರನುನಾಸಿಕ ಯಕಾರಕ್ಕೆ—ಬಯಕೆ, ಬಿಯದಂ, ಬಿಯಳಂ, ದಯಕಾಱಂ, ದಾಯಿಗಂ, ವಾಯಂ, ಬಯಲ್.

ನಿರನುನಾಸಿಕ ವಕಾರಕ್ಕೆ—ಕವಳಂ, ಹವಳಂ, ತಿವಳಿ, ತವಕಂ (ಅವಕಂ).

ನಿರನುನಾಸಿಕ ಲಕಾರಕ್ಕೆ—ಹಾಲಿಗೆ, ಹಲಸಿಗಂ, ಹಲಗೆ, ನೆಲಕಲನೆಂದು ಲೋಭಿ.

ಲಕಾರಕ್ಕೆ ಕ್ಷಳಂ—ಜಲಂ=ಜಳಂ; ತಿಲಂ=ತಿಳಂ; ಫಲಂ=ಫಳಂ; ಬಲಂ=ಬಳಂ; ಖಲಂ=ಖಳಂ; ಕಮಲಂ=ಕಮಳಂ.

**ಸೂತ್ರಂ** ॥ ಸಮ ಸಂದಿರ್ದ ೱಕಮುಮು ।
ೲಪಮುವೊಂದಿದ ಬಿಂದುವುಂ ವಿಸರ್ಗಮುಮೆಂದ ॥
ಕ್ಕುಮಿವೆಯ್ದೆ ಯೋಗವಾಹಂ ।
ಕ್ರಮದಿಂ ಕಪಯುಗಳಮಿವಱೊಳನುಬಂಧಂಗಳ್ ॥ ೧೭ ॥

---

ಸಮಾನವಾಗಿ, ನಿಂದು=ನೆಲೆಗೊಂಡು, ಸಲ್ಪುದಂ=ಸಲುವಳಿಯಾಗಿರ್ಪ ಳಕಾರಮುಂ, ಕ್ಷಳಂ=ಕ್ಷಳನೆಂದು, ಎಂಬರ್=ಪೇಳ್ವರ್. ೧೬ ॥

**ಟೀಕೆ.**—ಸಮುಸಂದು = ಸಮಾನವಾಗಿ ಸಂದು, ಇರ್ದ, ೱಕ ಮುಂ = ೱಕೆಂಬ ಜಿಹ್ವಾಮೂಲೀಯಮುಂ, ೲಪಮುಂ= ೲಪೆಂಬ ಉಪಧ್ಮಾನೀಯಮುಂ, ಒಂದಿದ=ಕೂಡಿದ, ಬಿಂದುವುಂ = ಸೊನ್ನೆಯುಂ, ವಿಸರ್ಗಮುಂ = ವಿಸರ್ಜನೀಯಮುಂ, ಎಂದು, ಇವು=ಈ ನಾಲ್ಕಕ್ಷರಂಗಳ್, ಎಯ್ದೆ=ಚೆನ್ನಾಗಿ, ಯೋಗವಾಹಂ=ಯೋಗವಾ

ವೃತ್ತಿ.—ಕಕಾರಮುಚ್ಚಾರಣಾರ್ಥಮಾಗುಱಿದ, ಪಸುಂಬೆಯ ಲಚ್ಛಣ ದಂತಿರ್ದ ವರ್ಣಂ ಜಿಹ್ವಾಮೂಲೀಯಮೆಂಬುದು; (ಕಕಾರ ಸಂಗಡದ) ಅದಱ ಸ್ವರೂಪಂ (Xಕ).

ಪಕಾರಮುಚ್ಚಾರಣಾರ್ಥಮಾಗುಱಿದ ಕುಮಾರೀ ಸ್ತನಯುಗಳಾಕೃತಿಯ ವರ್ಣಮುಪಧ್ಮಾನೀಯಂ; (ಪಕಾರ ಸಂಗಡದ) ಅದಱ ಸ್ವರೂಪಂ ( ‿ಪ).

ಕೈವಾರಮುಂ ಬೀಸಿದಂತೆ ಬಟ್ಟೆತ್ತಾಗಿ ತೋರ್ಪುದು ಸೊನ್ನೆ; ಅದಱ ಸ್ವರೂಪಂ ( ಂ ).

ಮೇಲೆಯುಂ ಕೆಳಗೆಯುಂ ಆ ತೆಱದಿನಿರೆ ವಿಸರ್ಗಂ; ಅದಱ ಸ್ವರೂಪಂ( ಃ ). ಈ ನಾಲ್ಕುಂ ಯೋಗವಾಹಂಗಳ್.

---

## ೪. ದೇಶೀಯಂಗಳ್—ಱ, ೞ, ಳ (ಕುಳಂ), ಎ, ಒ.

ಸೂತ್ರಂ॥ ಅತಿಪೀಡನದಿಂ ರೇಫಾ।
ಶ್ರಿತಮಾದ ಱಕಾರಮುಂ ಸಮಂತು ಡಕಾರಾ॥
ಶ್ರಿತಮಾದ ೞನುಮಂಗೀ।
ಕೃತ ಪದ ಲತ್ವಕ್ಕೆ ಬೆಟ್ಟಿತೆನಿಸಿದ ಕುಳನುಂ ॥ ೧೮ ॥

ಇವು ವರ್ಣಾವೃತ್ತಿಗೆ ಸ।
ಲ್ವುವು ಸಂದುಂ ಪ್ರಾಸದೆಡೆಗೆ ಸಲ್ಲವು ಯಮಕ॥
ವ್ಯವಹೃತಿಗಾಗವು ದೇಶೀ।
ಯವೆನಿಪುವಾ ಹ್ರಸ್ವಮೆನಿಸಿವಾ ಎ ಒ ಸಹಿತಂ ॥ ೧೯ ॥

........................................................................

ಹಾಕ್ಷರಂಗಳ್, ಅಕ್ಕುಂ=ಅಪ್ಪುವು, ಕ್ರಮದಿಂ=ತಱುವಾಯಿಂದೆ, ಕಪಯುಗಳಂ= ಕಕಾರ ಪಕಾರಂಗಳೆಂಬೆರಡುಂ, ಇವಱೊಳ್=ಈ ಜಿಹ್ವಾಮೂಲೀಯೋಪಧ್ಮಾನೀ ಯಂಗಳಲ್ಲಿ, ಅನುಬಂಧಂಗಳ್=ಸಂಬಂಧಂಗಳಾಗಿರ್ಪುವು. ॥ ೧೭ ॥

ಟೀಕೆ.—ಅತಿಪೀಡನದಿಂ=ರೇಫೆ ಪುಟ್ಟುವ ಸ್ಥಾನಮಂ ಬೆಟ್ಟಿತ್ತಾಗಿ ಉಚ್ಚರಿಪು ದಱಿಂದೆ, ರೇಫಾಶ್ರಿತಂ=ರೇಫೆಯನಾಶ್ರೈಸಿ ಪುಟ್ಟಿದುದು, ಆದ, ಱಕಾರಮುಂ, ಸಮಂತು=ಹಾಗೆ, ಡಕಾರಾಶ್ರಿತಂ=ಡಕಾರವನಾಶ್ರೈಸಿ ಪುಟ್ಟಿದುದು, ಆದ, ೞನುಂ= ೞನೆಂಬ ೞಕಾರಮುಂ, ಅಂಗೀಕೃತಪದ ಲತ್ವಕ್ಕೆ = ಅಂಗೀಕರಿಸಲ್ಪಟ್ಟ ಪದಂ ಗಳ ಲಕಾರಕ್ಕೆ, ಬೆಟ್ಟಿತೆನಿಸಿದ = ಬೆಟ್ಟಿತ್ತಾಗಿ ( ಒತ್ತಿ ) ಉಚ್ಚರಿಸುವುದಱಿಂದಾದ, ಕುಳನುಂ = ಕುಳವೆಂಬ ಳಕಾರಮುಂ, ಇವು = ಈ ಅಕ್ಷರಂಗಳ್, ವರ್ಣಾ ವೃತ್ತಿಗೆ=ವರ್ಣಂಗಳಾವೃತ್ತಿಗೆ, ಸಲ್ವುವು=ಸಲುವಳಿಯಪ್ಪುವು; ಸಂದುಂ=ವರ್ಣಾ ವೃತ್ತಿಗೆ ಸಂದುಂ, ಪ್ರಾಸದ=ನಿಯಾಮದ (ನಿಯಮದ), ಎಡೆಗೆ=ಸ್ಥಾನಕ್ಕೆ, ಸಲ್ಲವು=

ವೃತ್ತಿ.—ರೇಫೆ ಪುಟ್ಟುವ ತಾಣಮಂ ಬೆಟ್ಟಿತ್ತಾಗುಚ್ಚರಿಸೆ, ಱಕಾರಂ ಪುಟ್ಟುಗುಂ; ಡಕಾರಂ ಪುಟ್ಟುವ ತಾಣಮಂ ಬೆಟ್ಟಿತ್ತಾಗುಚ್ಚರಿಸೆ, ಟಿಂ ಪುಟ್ಟುಗುಂ; ಲಕಾರಂ ಪುಟ್ಟುವ ತಾಣಮಂ ಬೆಟ್ಟಿತ್ತಾಗುಚ್ಚರಿಸೆ, ಕುಳ ಳಕಾರಂ ಪುಟ್ಟುಗುಂ. ರೇಫೆ ಮೂರ್ಧನ್ಯಂ, ಱಕಾರಮುದಱೊಳ್ ಏಕಸ್ಥಾನಿ ; ಡಕಾರಂ ಮೂರ್ಧನ್ಯಂ, ಟಿನದಱೊಳ್ ಏಕಸ್ಥಾನಿ ; ಲಕಾರಂ ದಂತ್ಯಂ, ಕುಳನದಱೊಳ್ ಏಕಸ್ಥಾನಿ.

ಮೊರೆ, ಮೊಱೆ; ಮರೆ, ಮಱೆ;— ಕೋಡಿ, ಕೋಟಿ ; ಕಡಲ್, ಕಟಿಲ್;—ಮೊಲೆ, ಮೊಳೆ; ಕಲೆ, ಕಳೆ;—ಇಂತೇಕಸ್ಥಾನಿಗಳಾದ ಕಾರಣದಿಂದಿವು ವರ್ಣಾವೃತ್ತಿಗೆ ಸಲ್ಲುವು; ನಿಯಾಮಕ್ಕಂ ಯಮಕ ವ್ಯವಹೃತಿಗವಾಗವು. ಱಕಾರಮುಂ ಟಿನುಂ ಕುಳನುಂ ಹ್ರಸ್ವಮಾದ ಎ ಒ ಎಂಬಿವುಂ ಸಂಸ್ಕೃತದೊಳಿಲ್ಲ; ಅವು ಕೂಡಿ ದೇಶೀಯಂಗಳಾಗಿ ಕನ್ನಡದೊಳೊಳವು.

ಪ್ರಯೋಗಂ.—ರೇಫ ಱಕಾರಂಗಳ ವರ್ಣಾವೃತ್ತಿಗೆ—

ಕಂ ॥ ಸುರರಿಱಿದೊಱಗಿದ ಬಿರುದರ।
ಕರುಳಂ ಕೊಱೆಕೊಱೆದು ಮರುಳಿರುಳ್ತಿಂಬೆಡೆಯೊಳ್ ॥

ಡಕಾರ ಟಿಂಗಳ ವರ್ಣಾವೃತ್ತಿಗೆ—

ಕಂ ॥ ಖಟಿಲೆ ನುಡಿದಟಿಲೆ ಬಗ್ಗಿಸಿ।
ಘಟಿಲನೆ ನಡೆಯೆಂದು ಜಡಿದು ಸಾರಥಿಯಂ ॥

ಲಕಾರ ಕುಳಂಗಳ ವರ್ಣಾವೃತ್ತಿಗೆ—

ದೆಸೆಗಳನಳುರ್ದುಸುರಲ್ಕೆಳರ್ದು ಮಿಳಿರ್ದು ತಳರ್ದತ್ತಾಗಳ್.

ರೇಫ ಱಕಾರಂಗಳ ನಿಯಮಮಾಗದುದರ್ಕೆ—

ಕಂ ॥ ಧುರದೊಳ್ಪಱಿಮಱಿಯಾಡುವ।
ತೆಱದಿಂದುಱದಿಱಿದನೆಂಬ ನಿಯಮಂ ದೂಷ್ಯಂ ॥

---

ಸಲುವಳಿಯಾಗವು; ಯಮಕ ವ್ಯವಹೃತಿಗೆ= ಯಮಕ ವ್ಯವಹಾರಕ್ಕೆ, ಆಗವು= ಸಲುವಳಿಯಾಗವು ; ಆ ಹ್ರಸ್ವಮೆನಿಸಿದ= ಆ ಸ್ವರಸಂಜ್ಞೆಯಲ್ಲಿ ಹ್ರಸ್ವಂಗಳೆನಿಸಿದ, ಆ ಎ ಒ ಸಹಿತಂ= ಆ ಎ ಒ ಎಂಬಿವು ಸಹಿತವಾಗಿ, ದೇಶೀಯಂ= ದೇಶೀಯಾಕ್ಷರಂಗಳ್, ಎನಿಪುವು= ಎನಿಸುವುವು. ॥ ೧೮ ॥ ೧೯ ॥

ಡಕಾರ ಱೞಂಗಳ್ಗೆ ಪ್ರಾಸಮಾಗದುದರ್ಕೆ—

ಕಂ ॥ ಕೋಡದಿಱುದಿಂದ್ರರಾದರ್ ।
ನಾೞಿಗೆಯೊಳ್ ವೀರರೆಂಬ ನಿಯಮಂ ದೂಷ್ಯಂ ॥

ಲಕಾರ ಕುಳಂಗಳ ಪ್ರಾಸಮಾಗದುದರ್ಕೆ—

ಕಂ ॥ ನೆಲದೊಳ್ ಪಗೆ ಪುಗೆ ಫಣಿಯ ವೊ।
ಲೊಳಪೊಕ್ಕಳಱಿಸಿದನೆಂಬ ನಿಯಮಂ ದೂಷ್ಯಂ ॥

ಯಮುಕಂಗಳಾಗದುದರ್ಕೆ—

ಕಂ ॥ ಕರೆಯಂ ನೆರವಂ ವಂಶಂ।
ಕಱಿಯಂ ಪೊತ್ತಪ್ಪುದೆಂದು ಸಂಗರಮುಖದೊಳ್ ॥

ಇಲ್ಲಿ ಶಬ್ದಾವೃತ್ತಿ ಕೆಟ್ಟಪ್ಪುದಾಗಿಯುಂ, ಕಱಿಯಂ ಪೊತ್ತಪ್ಪುದೆಂಬುದಂ ಕರೆಯಂ ಪೊತ್ತಪ್ಪುದೆಂದೊಡೆ ಅರ್ಥಘಟನೆಯಿಲ್ಲಾಗಿಯುಂ, ಯಮುಕ ಲಕ್ಷಣ ಮಿಲ್ಲ.

ಡಕಾರ ಱೞಂಗಳುಂ, ಲಕಾರ ಕುಳಂಗಳುಂ, ಈ ತೆಱದಿಂ ಯಮುಕಕ್ಕೆ ಸಲ್ಲವು.

ಡಕಾರಕ್ಕಾದೇಶವಾದ ೞಿಕ್ಕೆ ಪ್ರಯೋಗಂ—ಕಾಡುಕಿಚ್ಚು=ಕಾೞ್ಕಿಚ್ಚು ; ಕೋಡುಕುಟ್ಟು = ಕೋೞ್ಕುಟ್ಟು ; ನೀಡುಕರಿಸಿದಂ= ನೀೞ್ಕರಿಸಿದಂ ; ಬೀಡು ಕೊಂಡಂ= ಬೀೞ್ಕೊಂಡಂ; ನಾಡಕಡೆ= ನಾೞ್ಕಡೆ ; ಸೆಡುಪಟ್ಟಂ= ಸೆೞ್ಪಟ್ಟಂ ; ನೀರಡಿಕೆ= ನೀರೞ್ಕೆ; ಎರಡು ಮೂಱು= ಎರೞ್ಮೂಱು; ಮಾಡುವಂ=ಮಾೞ್ಪಂ; ನೋಡುವಂ= ನೋೞ್ಪಂ ; ಬೇಡುವಂ= ಬೇೞ್ಪಂ ; ಬೆಗಡುವಂ= ಬೆಗೞ್ಪಂ ; ಪೞ್ಕೆ ತೞ್ಕೈಸಿದನೆಂಬಲ್ಲಿ ತಡಕೈಯ್ಯಂ ಮಾಡಿದನೆಂಬರ್ಥಂ; ನಾಡಿ= ನಾೞಿ; ನಾಡಿಕಾ= ನಾೞಿಗೆ, (ನಾೞಿಗೆಯೆಂದು ಘೞಿಗೆ); ಎಸಗೆ—ಎಸೞ್ಗೆ; ಪೂವಿನೆಸಳೊಳ್ ಕುಳಂ; ಕಿವುಡು ಕೇಳ್ವನೆಂಬಲ್ಲಿ ಕಿವುೞ್ಗೇಳ್ವಂ.

ಸೂತ್ರಂ ॥ ದಾಡಿಮಮಾ ಕೂಷ್ಮಾಂಡಂ।
ಗೌಡಂ ಗುಡಮಡಸಿ ಪೊಡೆವ ಝುಗಡೆ ವಿಡಂಗಂ ॥
ಕೂಡೆ ಕುಳನೇಡಕಮುಮಱಿ ।
ರೂಢಿಯ ಕುಳನೆಂದು ೞಿದಪಭ್ರಂಶತೆಯೊಳ್ ॥ ೨೦ ॥

---

ಟೀಕೆ.—ೞಿದ ಅಪಭ್ರಂಶತೆಯೊಳ್ ದಾಡಿಮಂ, ಆ ಕೂಷ್ಮಾಂಡಂ, ಗೌಡಂ, ಗುಡಂ, ಅಡಸಿ ಪೊಡೆವ ಝುಗಡೆ, ವಿಡಂಗಂ, ಕೂಡೆ ಕುಳಂ ; ಏಡಕಮುಂ,

ವೃತ್ತಿ.—ದಾಳಿಂಬಂ, ಕುಂಬಳಂ, ಗೌಳಂ, ಗುಳಂ, ಝುಗಳೆ, ವಿಳಂಗಂ, ಇವು ಕೂಡೆ ಡಕಾರಕ್ಕೆ ಪುಟ್ಟೆ ೞದಪಭ್ರಂಶತೆಯಂ ಪಡೆದುಂ ರೂಢಿಯ ಕುಳಂಗಳ್; ಏಳಗಮೆಂಬುದು ಏಡಕಕ್ಕೆ ಪುಟ್ಟೆಯುಂ ಕುಳಂ.

ಸೂತ್ರಂ ॥ ಕೃತಿಮಾರ್ಗದೊಳುಂಟು ಟಕಾ ।
ರ ತಕಾರ ಠಕಾರ ರೇಫದೆಡೆಗಂ ಬಹುಳ ॥
ಸ್ಥಿತಿಯಿಂ ಕ್ಷಳಕಮಪಭ್ರಂ ।
ಶತೆಯೊಳ್ ಸುಕವೀಂದ್ರರಿಂದೆ ೞದಾದೇಶಂ ॥ ೨೧ ॥

ವೃತ್ತಿ.—ಕಾವ್ಯಮಾರ್ಗದೊಳ್ ಟಕಾರ ತಕಾರ ಠಕಾರ ರೇಫ ಕ್ಷಳಂಗಳ್ಗೆ ೞಾದೇಶಂ * ಅಪಭ್ರಂಶತೆಯೊಳುಂಟು.

ಪ್ರಯೋಗಂ.—ಟಕಾರಕ್ಕೆ—ಘಟಿಕೆ= ಗೞಿಗೆ; ಘೋಟಿಕೆ= ಗೋೞಿಗೆ; ಧಾಟಿ=ದಾೞಿ; ಲಾಟಂ= ಲಾೞಂ; ಲಾಟಭಾಷಿಕಂ= ಲಾೞಬಾಸೆಗಂ ; ಘೋಟಾರೂಢಂ = ಗೋೞಾಯಿಲಂ; ಕುಕ್ಕುಟಂ= ಕೋೞಿ.

ತಕಾರಕ್ಕೆ—ಪ್ರತಿಹಸ್ತಂ= ಪೞಿಹತ್ತಂ; ಪ್ರತಿಪಾದುಕಂ= ಪೞಿವಾವುಗೆ.
ಠಕಾರಕ್ಕೆ—ಮಠಿಕೆ= ಮೞಿಗೆ; ಪೀಠಿಕೆ= ಪೀೞಿಗೆ.
ರೇಫಕ್ಕೆ—ಕೂರಂ= ಕೂೞ್; ಝುಲ್ಲರಿ= ಝುಲ್ಲೞಿ.
ಕ್ಷಳಕ್ಕೆ—ತಾಳಂ= ತಾೞ್; ಪುಳಿನಂ= ಪುೞಿಲ್; ಕಳಮಂ= ಕೞಮೆ; ಅರ್ಗಳಂ= ಅಗುೞಿ; [1]ಮನ್ಯಾಳಿ=ಮನ್ನೞಿ; ಅಳಿಕಾ ಬದ್ಧಂ= ಅೞಿಗೆ ವದ್ದಂ.

ಸೂತ್ರಂ ॥ ಸ್ಫಟಿಕಂ ಪೇಟಿಕೆ ವೀಟಿಕೆ ।
ಘುಟಿಕೆ ವರಾಟಂ ಪೊದೞ್ದಿ ರಘಟಿ ಕುಳಂ ತಾಂ ॥
ಸ್ಫುಟಸಹಿತಂ ಸ್ಫೋಟಕಲಂ ।
ಪಟ ಶಬ್ದಯುಗಂ ೞಟಿಕ್ಕೆ ನೆಱೆ ಸಂದೇಹಂ ॥ ೨೨ ॥

..........................................................................

ರೂಢಿಯ ಕುಳಂ ಎಂದು ಅಱು. ॥ ೨೦ ॥

ಟೀಕೆ.—ಕೃತಿಮಾರ್ಗದೊಳ್ = ಕಾವ್ಯಮಾರ್ಗದಲ್ಲಿ ; ಸುಕವೀಂದ್ರರಿಂದೆ = ಸತ್ಕವೀಂದ್ರರಿಂದೆ; ಅಪಭ್ರಂಶತೆಯೊಳ್=ಅಪಭ್ರಂಶದಲ್ಲಿ; ಟಕಾರ ತಕಾರ ಠಕಾರ ರೇಫದ, ಎಡೆಗಂ=ಸ್ಥಾನಕ್ಕೆಯುಂ, ಕ್ಷಳಕಂ=ಕ್ಷಳ ಳಕಾರಕ್ಕೆಯುಂ, ಬಹುಳ ಸ್ಥಿತಿಯಿಂ,

* ವಿಚಾರಂ.—ಆದೇಶಮೆಂದೊಡೆ ಮೊದಲಿರ್ದುದಂ ತೊಲಗಿಸಿ ಬರ್ಪುದೆಂದಱುವುದು.

1· (ಕೊರಲಹಿಂದಿನ ನರಗಳ ಗುಂಪು)

**ವೃತ್ತಿ.**—ಪಳಿಕಂ, ಪೇಳಿಗೆ, ಏಳಿಗೆ, ಗುಳಿಗೆ, ವರಾಳಂ, ರಗಳೆ, ಪುಳಂ—ಇವು ಅಪಭ್ರಂಶದೊಳ್ ಟಕಾರಕ್ಕೆ ಪುಟ್ಟಿಯುಂ ಕುಳಂಗಳಾದುವು; ಸ್ಫೋಟಕ ಶಬ್ದಕ್ಕಾದ ಹೋಳಿಗೆಯೆಂಬುದುಂ, ಲಂಪಟಶಬ್ದಕ್ಕಾದ ಲಂಬಳಮೆಂಬುದುಂ ಱುಟಕ್ಕೆ ಸಂದೇಹಂ, ಕುಳಂಗಳೆಯಪ್ಪುವು.

**ಸೂತ್ರಂ ॥** ಏಕ ದ್ವಿ ತ್ರಿ ಚತುಃ ಪಂ ।
ಚಾಕಲಿತಾರ್ಥಂಗಳಾಗಿ ಱುಟನೊಳವು ನಿಸ ॥
ರ್ಗಾಕೃತಿಯಿಂದವನಾದಿ ಮ ।
ಹಾಕವಿಕೃತಿದೃಷ್ಟಮಂ ನಿರಾಕುಳಮುಸಿರ್ವೆಂ ॥ ೨೩ ॥

**ವೃತ್ತಿ.**—ಒಂದರ್ಥಮಂ ಎರಡರ್ಥಮಂ ಮೂಱರ್ಥಮಂ ನಾಲ್ಕರ್ಥಮಂ ಐದರ್ಥಮಂ ಪೇೞ್ವ ಸಹಜ ಱುಟಂಗಳಂ ಪ್ರಮಾಣ ಪುರುಷರ ಕಾವ್ಯಮಾರ್ಗದಿಂ ಕಂಡು, ನೆಱೆ ಪೇೞ್ದಪೆಂ.

[೧ ನೆಯ ಪರಿಶಿಷ್ಟವನ್ನು ನೋಡಿ]

**ಸೂತ್ರಂ ॥** ಪಿರಿಯರ್ ಸಲಿಪರ್ ದಡ್ಡ ।
ಕ್ಕರದ ಱುಟಕ್ಕೈದೆ ರೇಫೆವೆರಸಿದ ದಡ್ಡ ॥
ಕ್ಕರಮಂ ಱುಟನಾಗದನು ।
ಚ್ಚರಿಸಲ್ಕಾಗಿರ್ದ ತೆಱದಿನಂತದು ಶುದ್ಧಂ ॥ ॥೨೪॥

........................................................................................................

ಱುಟದ=ಱುಟಮೆಂಬ ಟಕಾರದ; ಆದೇಶಂ; ಉಂಟು=ಉಂಟಾಗಿರ್ಪುದು ॥ ೨೧ ॥

**ಟೀಕೆ.**—ಸ್ಫಟಿಕಂ, ಪೇಟಿಕೆ, ವೀಟಿಕೆ, ಘುಟಿಕೆ, ವರಾಟಂ, ಪೊದಟ್ಟಿ ರಘುಟಿ, ಸ್ಫುಟ ಸಹಿತಂ ತಾಂ ಕುಳಂ; ಸ್ಫೋಟಿಕ, ಲಂಪಟ, ಶಬ್ದಯುಗಂ ಱುಟಕ್ಕೆ ನೆಱೆ ಸಂದೇಹಂ ॥ ೨೨ ॥

**ಟೀಕೆ.**—ಏಕ=ಒಂದಱಲ್ಲಿ, ದ್ವಿ=ಎರಡರಲ್ಲಿ, ತ್ರಿ=ಮೂಱಱಲ್ಲಿ, ಚತುಃ=ನಾಲ್ಕಱಲ್ಲಿ, ಪಂಚ=ಐದರಲ್ಲಿ, ಆಕಲಿತ=ಕೂಡಲ್ಪಟ್ಟ, ಅರ್ಥಂಗಳ್=ಅರ್ಥವುಳ್ಳವು, ಆಗಿ, ಱುಟಂ=ಱುಟಶಬ್ದಂಗಳ್, ಒಳವು=ಉಂಟು; ನಿಸರ್ಗಾಕೃತಿಯಿಂದೆ=ನಿಶ್ಚಯಾಕಾರದಿಂದೆ, ಅವಂ=ಆ ಱುಟಶಬ್ದಂಗಳಂ, ಆದಿ=ಪೂರ್ವದ, ಮಹಾಕವಿ=ಮಹಾ ಕವಿಗಳ, ಕೃತಿದೃಷ್ಟಮಂ=ಕಾವ್ಯದೃಷ್ಟಮಂ, ನಿರಾಕುಳಂ=ವ್ಯಾಕುಳವಿಲ್ಲದ ಹಾಗೆ, ಉಸಿರ್ವೆಂ=ಪೇೞ್ವೆಂ ॥ ೨೩ ॥

**ಟೀಕೆ.**—ಪಿರಿಯರ್=ಶ್ರೇಷ್ಠರಾದ ವಿದ್ವಾಂಸರ್, ದಡ್ಡಕ್ಕರದ=ಒತ್ತಿನಕ್ಷರದ, ಱುಟಕ್ಕೆ=ಱುಟಪ್ರಾಸಿಂಗೆ, ಐದೆ=ಚೆನ್ನಾಗಿ, ರೇಫೆವೆರಸಿದ ದಡ್ಡಕ್ಕರಮಂ=ರೇಫೆಯೊಡನೆ ಕೂಡಿದ ದ್ವಿತ್ವಾಕ್ಷರಮಂ, ಸಲಿಪರ್=ಪ್ರಾಸಿಂಗೆ ಸಲಿಸುವರ್, ಱುಟನಾಗಿ=ಱುಟಪ್ರಾಸವಾಗಿ, ಅದಂ=ಆ ರೇಫೆವೆರಸಿದ ದ್ವಿತ್ವಾಕ್ಷರಮಂ, ಉಚ್ಚರಿಸಲ್ಕೆ=ಓದುವುದರ್ಕೆ,

ವೃತ್ತಿ.—ದಡ್ಡಕ್ಕರದ ಅಱಿಕ್ಕೆ ಪ್ರತಿಯಾಗಿ ರೇಫವೆರಸಿದ ದಡ್ಡಕ್ಕರಮಂ ಪ್ರಾಸಕ್ಕೆ ಪಿರಿಯರ್ ಪೇೞ್ದ ಪ್ರಯೋಗವೊಳವು ; .ಆ ದಡ್ಡಕ್ಕರದ ರೇಫಮಂ ಅಱಿನಾಗುಚ್ಚರಿಸಲ್ಕಾಗಿರ್ದ ತೆಱದಿನದು ಶುದ್ಧಂ.

ಪ್ರಯೋಗಂ.—

ಕಂ॥ ಬೞ್ದುದು ಬಳ್ಳವಾಡಿ ನೆಱೆ ನಂ ।
ಬಿರ್ದುದಾರುಹತಂ ಜಿನೇಂದ್ರನಂ ॥
ತಿರ್ದ್ದ ಮಹಾನುಭಾವರ್...

ಚುರ್ಚಿದವೋಲ್ ಬಿಸಿಲಳುರೆ ಕಿ ।
ಮುೞ್ಚಿದ ತಳಿರಂತೆ ನೊಂದು......

ಒಕ್ಕುಡಿತೆ ನೀರ್ಗೆ ಪಱಿಪ ।
ಟ್ಟೆಕ್ಕರ್ಯ ಪಂಣೆಲೆಯ ಮುಱಿಗೆ ದೇಸಿಗರಂ ದೇ ॥
ವಕ್ಕಳ್ಗೊಡೆಯರ್ ಮಾೞ್ಪರೆ ।
ನೀೞ್ಕರಿಸದೆ ನಿಮ್ಮ ದೊರೆಗೆ ಬೋೞೆಯರೊಳರೇ ॥

ಸೂತ್ರಂ॥ ಝುಳಕಂ ಝುಳಪಿಸಿದಂ ಜೊಂ
ಗುಳಿ ಬೊಂಬುಳಿಯಾಳವಾಳಮಂತೆ ಠವಾಳಂ ॥
ವಳಿಗೆ ನೆಗೞ್ದೊಂದುಳಿ ಜಂ
ಗುಳಿ ಪುತ್ತಳಿ ಗೋಳಿ ಫೇಳಿ ಅಱಿಸಂದೇಹಂ ॥೨೫॥

ವೃತ್ತಿ.—ಈ ಪೇೞ್ದ ಶಬ್ದಂಗಳ್ ಅಱಿಕ್ಕೆ ಸಂದೇಹಂಗಳಿವಂ ಪ್ರಯೋಗಮಂ ಕಂಡು ಪೇೞ್ವುದು.

ಸೂತ್ರಂ॥ ಇಳಿದಳಿಯನೇಳಿದಂ ಸೂ
ಕುಳಿಯೋಕುಳಿ ಕಳಱು ಪೆಳಱು ಮಱುಕುಳಿಯಳಿಯಂ ॥
ಕುಳಿಯಂ ಮಾಳಿಗೆ ಜಾಳಿಗೆ
ತಳಿಗೆಯೊಳಿರ್ಬಳಸು ಬಳಸಿಗಂ ವೊಳೆ ತಾಳಂ ॥ ೨೬ ॥

---

ಆಗಿರ್ದ ತೆಱದಿಂ= ಸಲುವಳಿಯಾಗಿರ್ದ ರೀತಿಯಿಂದೆ, ಅಂತು= ಹಾಗೆ, ಅದು = ಅದು ತಾಂ, ಶುದ್ಧಂ= ಶುದ್ಧವುಪ್ಪುದು ॥ ೨೪ ॥

ಟೀಕೆ.—ಝುಳಕಂ, ಝುಳಪಿಸಿದಂ, ಜೊಂಗುಳಿ, ಬೊಂಬುಳಿ, ಆಳವಾಳಂ, ಅಂತೆ ಠವಾಳಂ, ವಳಿಗೆ, ನೆಗೞ್ದ ಒಂದುಳಿ, ಜಂಗುಳಿ, ಪುತ್ತಳಿ, ಗೋಳಿ, ಫೇಳಿ, ಅಱಿಸಂದೇಹಂ; ಕುಳವೆ ಅಪ್ಪುವು ॥ ೨೫ ॥

**ಸೂತ್ರಂ** ॥ ಆಳಿಸಿದಂ ಪೇಳಿಸಿದಂ ।
ಕೇಳಂ ಜೂದಾಳಿಯಳಿಲೆ ಕಳವಳಮಾ ಮೆ ॥
ಯ್ಮೇಳಂ ಮಾಳಂ ತಾಳಿಗೆ ।
ಯಿೞಿಗೆ ಯಿಱುಕುಳಿ ಯಿವಾದಿಯಾಗಱಿ ಕುಳನಂ ॥ ೨೭ ॥

**ವೃತ್ತಿ.**—ಈ ಪೇೞ್ದ ಶಬ್ದಂಗಳ್ ಕುಳಂಗಳ್.

**ಸೂತ್ರಂ** ॥ ಬೆರಲೆರಲೊರಲ್ಕೊರಲ್ಸರ ।
ಲರಲ್ಪರಲ್ಮರಲುಮಂತೆ ನರಲುಂ ಮುಂಗೈ ॥
ಸರಲುಂ ಲಾಂತಮಿವಂ ಗ್ರಾ ।
ಮ್ಯರಱಿಯದುಚ್ಚರಿಸುವರ್ ಕುಳಾಂತಭ್ರಮೆಯಿಂ ॥೨೮॥

**ವೃತ್ತಿ.**—ಬೆರಲ್ ಮೊದಲಾದ ಈ ಶಬ್ದಂಗಳ್ ನಿತ್ಯಮಾಗಿ ಲಾಂತಂಗಳ್; ಇವಂ ಬೆರಳು ಕೊರಳೆಂಬಂತೆ ಕುಳನಾಗುಚ್ಚರಿಸಬಾರದು.

**ಸೂತ್ರಂ** ॥ ಮರಲರಲೆರಲೆಂಬಿವಱಿಂ ।
ತರಾಳರೇಫಕ್ಕೆ ಲತ್ವಮುಂ ದೊರೆಕೊಳ್ಗುಂ ॥
ಪಿರಿದುಂ ಮಲರಲರೆಲರೆಂ ।
ದೊರೆವುದು ಕೃತಿಯೊಳ್ವಿಕಲ್ಪವಿಧಿಯಿಂದಮಿವಂ ॥ ೨೯ ॥

---

**ಟೀಕೆ.**—ಇಳಿದಳಿಯುಂ, ಏಳಿದಂ, ಸೂಕುಳಿ, ಓಕುಳಿ, ಕಳಱು, ಪೆಳಱು, ವಱು ಕುಳಿ, ಆಳಿಯುಂ, ಕುಳಿಯುಂ, ಮಾಳಿಗೆ, ಜಾಳಿಗೆ, ತಳಿಗೆಯೊಳಿರ್, ಬಳಸು, ಬಳಸಿ ಗಂ, ಮೊಳೆ, ತಾಳಂ, ಆಳಿಸಿದಂ, ಪೇಳಿಸಿದಂ, ಕೇಳಂ, ಜೂದಾಳಿ, ಅಳಿಲೆ, ಕಳವಳಂ, ಆ ಮೆಯ್ಮೇಳಂ, ಮಾಳಂ, ತಾಳಿಗೆ, ಈಳಿಗೆ, ಇಱುಕುಳಿ—ಇವಾದಿಯಾಗಿ ಕುಳನಂ ಅಱು. ॥ ೨೬ ॥ ೨೭ ॥

**ಟೀಕೆ.**—ಬೆರಲ್, ಎರಲ್, ಒರಲ್, ಕೊರಲ್, ಸರಲ್, ಅರಲ್, ಪರಲ್, ಮರಲುಂ, ಅಂತೆ, ನರಲುಂ, ಮುಂಗೈಸರಲುಂ, (ಇವು) ಲಾಂತಂ=ಲಕಾರಾಂತಂಗಳ್, ಇವಂ, ಗ್ರಾಮ್ಯರ್=ಮೂಢರ್, ಅಱಿಯದೆ=ತಿಳಿಯದೆ, ಕುಳಾಂತಭ್ರಮೆಯಿಂ= ಕುಳಾಂತ ಭ್ರಮೆಯಿಂದೆ, ಉಚ್ಚರಿಸುವರ್ = ಓದುವರ್ ॥೨೮॥

**ಟೀಕೆ.**—ಮರಲ್=ಮರಲೆಂದು, ಅರಲ್= ಅರಲೆಂದು, ಎರಲ್=ಎರಲೆಂದು, ಎಂಬಿವಱಿ= ಎಂಬೀ ಮೂರು ಶಬ್ದಂಗಳ, ಅಂತರಾಳ= ನಡುವಣ, ರೇಫಕ್ಕೆ= ರೇಫೆಗೆ, ಲತ್ವಮುಂ = ಲಕಾರಮುಂ, ದೊರೆಕೊಳ್ಗುಂ= ಬರ್ಪುದು; ಉಂ ಎಂಬ ಸಮುಚ್ಚಯದಿಂದೆ ಅಂತ್ಯ ಲತ್ವಕ್ಕೆ ರೇಫೆಯುಂ ದೊರೆಕೊಳ್ವುದು; ಪಿರಿದುಂ= ಬಹುಳ ಮಾಗಿಯುಂ, ಕೃತಿಯೊಳ್= ಕಾವ್ಯದಲ್ಲಿ, ಇವಂ= ಈ ಮೂಱು ಶಬ್ದಂಗಳಂ, ಮಲರ್= ಮಲರೆಂದು, ಅಲರ್= ಅಲರೆಂದು, ಎಲರ್= ಎಲರೆಂದು, ವಿಕಲ್ಪವಿಧಿಯಿಂದಂ= ವಿಕಲ್ಪವಿಧಾನದಿಂದೆ, ಒರೆವುದು= ಪೇೞ್ವುದು. ॥ ೨೯ ॥

ವೃತ್ತಿ.—ಮರಲ್ ಅರಲ್ ಎರಲ್ ಎಂಬಿವಱ ಮಧ್ಯರೇಫಕ್ಕೆ ಲತ್ವಮುಂ ಸಮುಚ್ಚಯ ವಶದಿಂದಂತ್ಯ ಲತ್ವಕ್ಕೆ ರೇಫಮುಮಾಗಿ, ಮಲರ್ ಅಲರ್ ಎಲರ್ ಎಂದು, * ವಿಕಲ್ಪದಿನಕ್ಕುಂ; ಪಿರಿದೆಂಬುದಱಿಂ ಮರಲೆಂಬುದಱ ರೇಫಕ್ಕೆ ಣತ್ವಮುಮಾಗಿ, ಮಣಲೆಂದುಮುಂಟು.

---

## ೫. ವರ್ಣಂಗಳ್ ಪುಟ್ಟುವ ತಾಣಂಗಳ್, ಮೇಣ್ ಕೆಲವಕ್ಕರಂಗಳ ವಿಶೇಷಂಗಳ್.

ಸೂತ್ರಂ ॥ ಕೊರಲುಂ ಜಿಹ್ವಾಮೂಲಮು ।
ಮುರಮುಂ ತಾಲುಗೆಯುಮೋಷ್ಠಮುಂ ನಾಸಿಕೆಯುಂ ॥
ಶಿರಮುಂ ದಂತಮುಮೆಂದ ।
ಕ್ಕರಮುದಯಿಪ ತಾಣಮಾದುವೀ ಪೇಟ್ದಿಂಟುಂ ॥೩೦॥

ವೃತ್ತಿ—ಈ ಪೇಟ್ದಿಂಟಱೊಳ್ ಅಕ್ಕರಂಗಳ್ ಪುಟ್ಟುಗುಂ; ಅವಱೊಳೇಕಸ್ಥಾನಿಗಳನಱಿದು, ವರ್ಣಾವೃತ್ತಿಯಂ ಮಾಟ್ಪುದು.

ಸೂತ್ರಂ ॥ ಕವಿಗಳ್ ಸ್ವರದಿಂ ವರ್ಗದಿ ।
ನವರ್ಗದಿಂ ಯೋಗವಾಹದಿಂ ದೇಶಿಯೊಳು ॥
ದ್ಭವಮಪ್ಪ ವರ್ಣದಿಂ ಪಂ ।
ಚವಿಧಂ ತಾನೆಂದು ತಿಳಿಪುವರ್ ಶುದ್ಧಗೆಯಂ ॥೩೧॥

ವೃತ್ತಿ.—ಸ್ವರದಿಂ ವರ್ಗದಿಂ ಅವರ್ಗದಿಂ ಯೋಗವಾಹದಿಂ ದೇಶೀಯಂಗಳಿಂ, ಇಂತು, ಶುದ್ಧಾಕ್ಷರಂಗಳ್ ಕನ್ನಡದೊಳ್ ಪಂಚವಿಧಮೆಂದು, ಕವಿಗಳ್ ಬಾಲಶಿಕ್ಷೆಯಂ ಮಾಟ್ಪಿರ್.

........................................................................

ಟೀಕೆ.—ಕೊರಲುಂ= ಕಂಠಮುಂ, ಜಿಹ್ವಾಮೂಲಮುಂ=ನಾಲಗೆಯ ಬುಡನುಂ, ಉರಮುಂ= ಎರ್ದೆಯುಂ, ತಾಲುಗೆಯುಂ= ಗಲ್ಲಮುಂ, ಓಷ್ಠಮುಂ= ತುಟಿಯುಂ, ನಾಸಿಕೆಯುಂ, ಶಿರಮುಂ=ಮಸ್ತಕಮುಂ, ದಂತಮುಂ=ಪಲ್ಗಳುಂ, ಎಂದು= ಹೀಗೆಂದು, ಈ ಪೇಟ್ದಿಂಟುಂ=ಈ ಪೇಟ್ದಿಂಟು ತಾಣಂಗಳುಂ, ಅಕ್ಕರಂ=ಅಕ್ಷರಂಗಳ್, ಉದಯಿಪ ತಾಣಂ=ಹುಟ್ಟುವ ಸ್ಥಾನಂಗಳ್, ಆದುವು=ಸಲುವಳಿ ಆದುವು. ॥೩೦॥

ಟೀಕೆ.—ಕವಿಗಳ್=ವಿದ್ವಾಂಸರ್, ತಾಂ = ತಾವು, ಸ್ವರದಿಂ=(ಅ, ಆ, ಇತ್ಯಾದಿ) ಸ್ವರಾಕ್ಷರಂಗಳಿಂದೆ, ವರ್ಗದಿಂ=(ಕ, ಖ ಇತ್ಯಾದಿ) ವರ್ಗಾಕ್ಷರಂಗಳಿಂದೆ, ಅವರ್ಗದಿಂ =(ಯ, ರ ಇತ್ಯಾದಿ) ಅವರ್ಗಾಕ್ಷರಂಗಳಿಂದೆ, ಯೋಗವಾಹದಿಂ= (ಂ, ಃ ಇತ್ಯಾದಿ) ಯೋಗವಾಹಾಕ್ಷರಂಗಳಿಂದೆ, ದೇಶಿಯೊಳ್=ಕನ್ನಡದ ದೇಶಿಯಲ್ಲಿ, ಉದ್ಭವ

* ವಿಚಾರಂ.— ವಿಕಲ್ಪವೆಂದೊಡ ಎರಡು ತೆಱನುಂಟೆಂಬರ್ಥಂ.

**ಸೂತ್ರಂ॥** ತರದಿಂದಂ ಪದಿನಾಲ್ಕುಂ।
ಸ್ವರಮಿರ್ಪತ್ತೈದು ವರ್ಣಮವು ವರ್ಗಂ ತ॥
ತ್ಪರದೊಂಬತ್ತುಮವರ್ಗಂ।
ಪರಿಭಾವಿಸೆ ಯೋಗವಾಹಮವು ನಾಲ್ಕೆ ವಲಂ ॥ ೩೨ ॥

**ವೃತ್ತಿ.**—ಕ್ರಮದಿಂ ಸ್ವರಂ ಪದಿನಾಲ್ಕಕ್ಕರಂಗಳ್, ವರ್ಗಮಿರ್ಪತ್ತೈದಕ್ಕರಂಗಳ್, ಅವರ್ಗಮೊಂಬತ್ತಕ್ಕರಂಗಳ್, ಯೋಗವಾಹಂ ನಾಲ್ಕಕ್ಕರಂಗಳ್; ಅಂತು ಸಂಸ್ಕೃತದೊಳ್ ಶುದ್ಧಗೆಯೈವತ್ತೆರಡಕ್ಕುಂ.

**ಸೂತ್ರಂ॥** ತಿಳಿ ದೇಶೀಯಮುಮೈದಂ।
ಕಳೆ ನೀಂ ಋೣವರ್ಣ ಶ ಷ ವಿಸರ್ಗ ✕ ೵ ॥
ಕ್ಷಳನಂ ನಾಲ್ವತ್ತೇೞಾ।
ಯ್ತುಳಿ ಶುದ್ಧಗೆಯಚ್ಚಗಂನಡಕ್ಕೀ ಕ್ರಮದಿಂ ॥ ೩೩ ॥

**ವೃತ್ತಿ.**—ಕನ್ನಡದೊಳ್ ದೇಶೀಯಮೈದು ತೆಱಂ; ಪಿಂತಣೈವತ್ತೆರಡಕ್ಕರಂಗಳ್ಕೂಡೆ ಐವತ್ತೇೞಕ್ಕರಂಗಳ್; ಅವಱೊಳಗೆ ಋ ೠ, ಌ ೡ, ಶ, ಷ, ವಿಸರ್ಗ, ✕, ೵, ಕ್ಷಳಂಗಳೆಂಬ ಪತ್ತಂ ಕಳೆಯಲ್ ಅಚ್ಚಗನ್ನಡದೊಳ್ ಶುದ್ಧಗೆ ನಾಲ್ವತ್ತೇೞುವಿಧಂ; ನಿಸರ್ಗಮಾಗಿ ವಿಸರ್ಗಮಿಲ್ಲ.

---

ಮುಪ್ಪ ವರ್ಣದಿಂ=ಹುಟ್ಟಿದ (ಎ, ಒ ಇತ್ಯಾದಿ) ಅಕ್ಷರಂಗಳಿಂದೆ, ಪಂಚವಿಧಂ=ಐದು ಪ್ರಕಾರವೆಂದು, ಶುದ್ಧಗೆಯಂ=ಶುದ್ಧಾಕ್ಷರಂಗಳಂ, ತಿಳಿಪುವರ್=ತಿಳಿಸುವರ್. ॥೩೧॥

**ಟೀಕೆ.**— ತರದಿಂದಂ=ಕ್ರಮದಿಂದಂ, ಪದಿನಾಲ್ಕುಂ= ಹದಿನಾಲ್ಕಕ್ಷರಂಗಳುಂ, ಸ್ವರಂ= ಸ್ವರಾಕ್ಷರಂಗಳ್; ಇರ್ಪತ್ತೈದು ವರ್ಣಂ= ಇಪ್ಪತ್ತೈದಕ್ಷರಂಗಳ್, ಅವು, ವರ್ಗಂ= ವರ್ಗಾಕ್ಷರಂಗಳ್; ತತ್ಪರದ= ಆ ವರ್ಗಾಕ್ಷರಂಗಳ ಮುಂದಣ, ಒಂಬತ್ತು= ಒಂಬತ್ತಕ್ಷರಂಗಳ್, ಅವರ್ಗಂ= ಅವರ್ಗಾಕ್ಷರಂಗಳ್; ಪರಿಭಾವಿಸೆ= ವಿಚಾರಿಸೆ, ಯೋಗವಾಹಂ = ಯೋಗವಾಹಾಕ್ಷರಂಗಳ್, ಅವು, ನಾಲ್ಕೆ= ನಾಲ್ಕಕ್ಷರಂಗಳೆ, ವಲಂ=ನಿಶ್ಚಯಂ. ॥ ೩೨ ॥

**ಟೀಕೆ.**—ದೇಶೀಯಮುಂ= ದೇಶೀಯಾಕ್ಷರಂಗಳುಂ, ಐದಂ=(ಱ, ೞ, ಳ, ಎ, ಒ, ಎಂಬಿವು) ಐದಂ; ನೀಂ, ತಿಳಿ= ಅಱಿ, ಋೣವರ್ಣ, ಶ, ಷ, ವಿಸರ್ಗ, ✕, ೵, ಕ್ಷಳನಂ= ಋವರ್ಣ, ಌವರ್ಣ, ಶಕಾರ, ಷಕಾರ, ವಿಸರ್ಗ, ಜಿಹ್ವಾಮೂಲೀಯ, ಉಪಧ್ಮಾನೀಯ, ಕ್ಷಳಂಗಳೆಂಬಕ್ಕರಂಗಳಂ, ಕಳೆ= ಕರ್ಣಾಟ ಭಾಷೆಯೊಳಿಲ್ಲೆಂದು ಬಿಡು; ಈ ಕ್ರಮದಿಂ= ಈ ರೀತಿಯಿಂದೆ, ಅಚ್ಚಗನ್ನಡಕ್ಕೆ= ಸಂಸ್ಕೃತಂ ಬೆರೆಯದ ಬಱಿಯ ಕನ್ನಡಕ್ಕೆ, ಶುದ್ಧಗೆ= ಶುದ್ಧಾಕ್ಷರಂಗಳ್, ನಾಲ್ವತ್ತೇೞಾಯ್ತು= ನಾಲ್ವತ್ತೇೞಕ್ಷರಂಗಳಾದುವೆಂದು, ಅಳೆ= ಪ್ರಮಾಣಿಸು. ॥ ೩೩ ॥

**ಸೂತ್ರಂ ॥** ತನು ವಾದ್ಯಂ ನಾಲಗೆ ವಾ
ದನದಂಡಂ ಕರ್ತೃವಾತ್ಮನವನ ಮನೋವೃ ॥
ತ್ತಿ ನಿಮಿತ್ತಮಾಗಿ ಶಬ್ದಂ
ಜನಿಯಿಸುಗುಂ ಧವಳ ವರ್ಣಮಕ್ಷರರೂಪಂ ॥೩೪॥

**ವೃತ್ತಿ.**—ಶರೀರಮೆ ವಾದ್ಯಂ, ನಾಲಗೆ ಬಾಜಿಸುವ ಕುಡುಹು, ವಾದಕ ನಾತ್ಮಂ; ಆತನ ಮನೋವೃತ್ತಿಯಿಂದೆ ಧವಳವರ್ಣಮಂತಪ್ಪಕ್ಷರರೂಪಮಪ್ಪ ಶಬ್ದಂ ಪುಟ್ಟುಗುಂ.

**ಸೂತ್ರಂ ॥** ಪದದರ್ಥಮಂ ವಿಭಾಗಿಸು
ವುದಱಿಂದೆ ವಿಭಕ್ತಿಯಂತದಂ ಪ್ರತ್ಯಯಮೆಂ ॥
ಬುದು ತತ್ಪ್ರತ್ಯಯದಿಂ ಪೂ
ರ್ವದೊಳಿರ್ಕುಂ ಪ್ರಕೃತಿ ಯೆರಡುಮಮರ್ದೊದವೆ ಪದಂ ॥೩೫॥

**ವೃತ್ತಿ.**—ಪದದೊಳಿರ್ದರ್ಥಮಂ ತಂತಂಮರ್ಥಾನುಗುಣಮಾಗಿ ವಿಭಾಗಿಸಿ ಕುಡುವದಱಿಂ ವಿಭಕ್ತಿಯೆನಿಸುಗುಂ; ಆ ವಿಭಕ್ತಿಯಂ ಪ್ರತ್ಯಯಮೆನಲಕ್ಕುಂ. ಅವಾವುವೆಂದೊಡೆ—ಮ್, ಅಮ್ ಮೊದಲಾದ ನಾಮಾಖ್ಯಾತ ವಿಭಕ್ತಿಗಳ್. ಅವಱಿಂ ಪಿಂದಿರ್ಪ ಲಿಂಗಮುಂ ಧಾತುವಂ ಪ್ರಕೃತಿಯೆನಲಕ್ಕುಂ; ಪ್ರಕೃತಿಪ್ರತ್ಯಯಂಗಳೆರಡುಂ ಕೂಡೆ, ಪದಮಕ್ಕುಂ. ಮರ, ದೇವ, ಎಂದು (ನಾಮ)ಲಿಂಗಮನಿಱಿಸಿ ಮ್ ಎಂಬ(ನಾಮ)ವಿಭಕ್ತಿಯಂ ಕುಡೆ, ಮರಂ ದೇವಂ ಎಂದು (ನಾಮ) ಪದಮಕ್ಕುಂ. ನುಡಿ, ನೋಡು ಎಂಬ ಧಾತುವನಿಱಿಸಿ, ಅಮ್ ಎಂಬ (ಆಖ್ಯಾತ) ವಿಭಕ್ತಿಯಂ ಕುಡೆ, ನುಡಿದಂ ನೋಡಿದಂ ಎಂದು (ಆಖ್ಯಾತ) ಪದಮಕ್ಕುಂ. ಅವ್ಯಯಮುಂ ಸಮಾಸದೊಳಗಣ ನಾಮಭಾಗಮುಂ ವಿಭಕ್ತಿಯಂ ಕೊಟ್ಟಬೞಿವುದಱಿಂ ಪದಮೆಂದಱಿವುದು.

---

**ಟೀಕೆ.**—ತನು= ಶರೀರಂ, ವಾದ್ಯಂ=ವಾದ್ಯವು; ನಾಲಗೆ= ಜಿಹ್ವೆ, ವಾದನ ದಂಡಂ= ವಾದ್ಯಮಂ ನುಡಿಸುವ ಕುಡುಹು; ಆತ್ಮಂ=ಜೀವಾತ್ಮಂ, ಕರ್ತೃ=ವಾದ್ಯಮಂ ನುಡಿಸುವ ಕರ್ತೃ; ಅವನ= ಆ ಜೀವಾತ್ಮನ, ಮನಃ= ಮನಸ್ಸಿನ, ವೃತ್ತಿ=ವರ್ತನೆಯೆ, ನಿಮಿತ್ತಂ= ಕಾರಣಂ, ಆಗಿ, ಧವಳವರ್ಣಂ= ಶ್ವೇತವರ್ಣಮಾದ, ಅಕ್ಷರರೂಪಂ= ಅಕ್ಷರಾತ್ಮಕಮಾದ, ಶಬ್ದಂ= ಧ್ವನಿ, ಜನಿಯಿಸುಗುಂ=ಪುಟ್ಟುವುದು. ॥ ೩೪ ॥

**ಟೀಕೆ.**—ಪದದ=ಪದಂಗಳ, ಅರ್ಥಮಂ=ಪುರುಳಂ, ವಿಭಾಗಿಸುವುದಱಿಂದೆ= ವಿಭಾಗಿಸಿಕೊಡುವುದಱಿಂದೆ, ವಿಭಕ್ತಿ=ವಿಭಕ್ತಿ ಎನಿಪುದು; ಅಂತು=ಹಾಂಗೆ, ಅದಂ= ಆ ವಿಭಕ್ತಿಯಂ, ಪ್ರತ್ಯಯಂ=ಪ್ರತ್ಯಯಮೆಂದು, ಎಂಬುದು= ಪೇೞ್ವುದು; ತತ್ಪ್ರತ್ಯಯದಿಂ= ಆ ವಿಭಕ್ತಿಯಿಂದೆ, ಪೂರ್ವದೊಳ್= ಮೊದಲಲ್ಲಿ, ಪ್ರಕೃತಿ, ಇರ್ಕುಂ=

**ಸೂತ್ರಂ ॥** ಕೆಲವು ನಿಜ ಬಿಂದುಗಳ್ ಕೆಲ।
ಕೆಲವು ವಿಕಲ್ಪಾರ್ಥಬಿಂದುಗಳ್ ದ್ವಿತ್ವಂಗಳ್ ॥
ಕೆಲವಾ ಶಿಥಿಲದ್ವಿತ್ವಂ।
ಕೆಲಮುಭಯಮುಮಾಗಿ ಕೆಲವು ಪದನಱಿವುದವಂ ॥ ೩೬ ॥

**ವೃತ್ತಿ.**—ಕೆಲವು ಪದಂಗಳ್ ಸ್ವಭಾವದಿಂ ನಿತ್ಯಬಿಂದುಗಳ್; ಕೆಲವು ಪದಂಗಳ್ ವಿಕಲ್ಪದಿಂ ಸಬಿಂದುಕಮಬಿಂದುಕಮಾಗಿರ್ಪುವು; ಕೆಲವು ಪದಂಗಳ್ ನಿಯತದಿಂ ದ್ವಿತ್ವಂಗಳ್; ಕೆಲವು ಪದಂಗಳ್ ಶಿಥಿಲದ್ವಿತ್ವಂಗಳ್; ಕೆಲವು ಪದಂಗಳ್ ಶಿಥಿಲಮುಂ ದ್ವಿತ್ವಮುಮಾಗಿರ್ಪುವು.

**ಪ್ರಯೋಗಂ.**—ನಿತ್ಯಬಿಂದುಗೆ–ಬೆಡಂಗು, ಕಡಂಗು, ಅಡಂಗು, ತೊಡಂಬೆ, ತೊಡಂಕು, ಕೊಡಂತಿ, ಪಡಂಗು, ಸಿಡುಂಬು, ಸೆಱಂಗು, ಎಱಂಕೆ, ತುಱುಂಬು, ತಱುಂಬು, ಕುಱುಂಬು, ಕುಱುಂಬಂ, ಒಱಂತೆ, ಕೊಱಂತೆ, ಪಳುಂಕಿದಂ, ಕೂಂಕಿದಂ, ತೂಂಕಿದಂ, ಅವುಂಕಿದಂ, ಕವುಂಕುೞ್, ಪೇಂಕುಳಿ, ಚೆಲಂಕು, ತೇಂಕು, ಕುಸುಂಬೆ, ಹಸುಂಬೆ, ಮುಸುಂಬು, ಕಱುಂಬು, ದಾಂಟು, ದೂಂಟು, ಗೆಂಟು, ಗೊಂಟು, ಗೆಂಟುಗೆ, ಗಂಟಿಗೆ, ಬೇಂಟೆ, ಸುಂಟಗೆ, ದೋಂಟಿ, ಮೇಂಟಿ, ಮಿಾಂಟು, ಮಿಾಂಟಿದಂ, ಈಂಟು, ಕೂಂಟು, ಕುಂಟಣಿ, ಸೊರಂಟು, ಒರಂಟು, ತೆರಂಟು, ಸೀಂಟು, ತೋಂಟಂ, ತೋಂಟಿಗಂ, ಪೊಸಂತಿಲ್, ಗಳಂತಿಗೆ, ಪಳಂಚಿದಂ, ಸಾಂದು, ಸೇಂದು, ನಾಂದು, ಕಡುಂಬು, ಕಡಂದುಱು, ಕೊಡಂಬೆ, ಬಣಂಬೆ, ಬಣಂಜಿಗಂ, ಬೆಂದುಱು, ಬೆದಂಡೆ, ಚಲುಂಕಿದಂ, ಪಲುಂಬಿದಂ, ನಿಲುಂಬಿದಂ, ಆಸುಂಬಿದಂ, ಕರಂಡಗೆ, ತಂದಲ್—ಇವು ಮೊದಲಾದುವು.

ವಿಕಲ್ಪಬಿಂದುಗೆ—ಕದಂಪು, ಕದಪು; ಕೊಡಂಕೆ, ಕೊಡಕೆ; ಇಱುಂಪೆ, ಈಱುಪೆ; ನೊರಂಜು, ನೊರಜು; ಜಿನುಂಗು, ಜಿನುಗು; ಬೆಳಂತಿಗೆ, ಬೆಳತಿಗೆ;

..............................................................................................................

ಇರ್ಪುದು, ಎರಡುಂ=ಪ್ರಕೃತಿ ಪತ್ಯಯಮೆಂಬೆರಡುಂ, ಆಮುದುರ್=ಪೊರ್ದುಗೆಯಾಗಿ, ಒದವೆ=ಸೇರಲ್, ಪದಂ=ಪದಮೆನಿಸುವುದು. ॥ ೩೫ ॥

**ಟೀಕೆ.**—ಕೆಲವು=ಕೆಲವು ಶಬ್ದಂಗಳ್, ನಿಜ ಬಿಂದುಗಳ್=ನಿತ್ಯಬಿಂದುಗಳೆನಿಸುವುವು ; ಕೆಲಕೆಲವು=ಹಲವು ಕೆಲವು ಶಬ್ದಂಗಳ್, ವಿಕಲ್ಪಾರ್ಥಬಿಂದುಗಳ್=ವಿಕಲ್ಪದಿಂ ಸಬಿಂದುಕಮಬಿಂದುಕಮಾಗಿರ್ಪುವು ; ಕೆಲವು=ಕೆಲವು ಶಬ್ದಂಗಳ್, ದ್ವಿತ್ವಂಗಳ್=ಒತ್ತಕ್ಕರಂಗಳಾಗಿರ್ಪುವು ; ಕೆಲಂ=ಕೆಲವು ಶಬ್ದಂಗಳ್, ಆ=ಆ ಪ್ರಸಿದ್ಧಮಾದ, ಶಿಥಿಲದ್ವಿತ್ವಂ=ಶಿಥಿಲವಾದ ದ್ವಿತ್ವಂಗಳಾಗಿರ್ಪುವು ; ಕೆಲವು ಪದಂ=ಕೆಲವು ಪದಂಗಳ್, ಉಭಯಮುಂ = ದ್ವಿತ್ವ ಶಿಥಿಲದ್ವಿತ್ವಮೆಂಬುಭಯಮುಂ, ಆಗಿ = ಆಗಿ (ಇರ್ಪುವು); ಅವಂ=ಆ ಪದಂಗಳಂ, ಅಱಿವುದು=ತಿಳಿವುದು. ॥ ೩೬ ॥

ಕರಿಂಕು, ಕರಿಕು; ತೊಳಂಕು, ತೊಳಕು; ಕಣಂಜು, ಕಣಜು; ಅಱಿಂಬೆ, ಅಱಿಬೆ; ಕಱುಂಕೆ, ಕಱುಕೆ; ಕುಱುಂಕಿದಂ, ಕುಱುಕಿದಂ; ಇಱುಂಕಿದಂ, ಇಱುಕಿದಂ; ಕರ್ದುಂಕಿದಂ, ಕರ್ದುಕಿದಂ; ದುಘುಂಮಿಱಿದಂ, ದುಘುಮಿಱಿದಂ; ತುಳುಂಕಿದಂ, ತುಳುಕಿದಂ; ಪೊಳಂಕಿದಂ, ಪೊಳಕಿದಂ; ಮುಸುಂಕಿದಂ, ಮುಸುಕಿದಂ—ಇವು ಮೊದಲಾದುವು.

ಇನ್ನು ನಿಯತದ್ವಿತ್ವಕ್ಕೆ—ಪಪ್ಪುಕಂ, ಕಪ್ಪಡಿ, ಬಿಪ್ಪಂಡಂ, ಉಪ್ಪಂಡಂ, ತಿಪ್ಪುಳ್, ಸೊಪ್ಪುಗಳ್, ಕೊಪ್ಪಲ್, ಕೊಪ್ಪಂ, ಕೊಪ್ಪು, ಚಪ್ಪರಂ, ಒಪ್ಪಂ, ನೆಪ್ಪು, ಕಪ್ಪಳಿ, ತಪ್ಪಡಿ, ಜೊಪ್ಪಂ, ತೆಪ್ಪಂ, ಟಿಪ್ಪರಂ, ದುಪ್ಪಡಿ, ಉಪ್ಪಡಂ, ಹಪ್ಪಳಿಕೆ, ಹಿಪ್ಪಲಿ, ಸಿಪ್ಪು, ಸಕ್ಕರೆ, ಕಕ್ಕಸಂ, ಮೊಕ್ಕಳಂ, ಬಕ್ಕಸೆ, ರಕ್ಕಸಿ, ಕೆಕ್ಕೊರಸು, ಉಕ್ಕೆವಂ, ಬಕ್ಕರಸೆ, ಬಕ್ಕುಡಿದಂ, ಮೊಗ್ಗರಂ, ನೊಗ್ಗು, ಬಗ್ಗಂ, ಬಗ್ಗಣೆ, ಎಗ್ಗಂ, ಲಗ್ಗಿಗಂ, ಅಗ್ಗಳಂ, ವೆಗ್ಗಳಂ, ಸುಗ್ಗಂ, ಸುಗ್ಗಿ, ಉಗ್ಗಂ, ಉಗ್ಗಿ ತೊಟಿಲ್ದಂ, ಬಟಿಲ್ದಂ, ಕಟಿಲ್ದಂ, ಬಟ್ದಿಂ, ಬಿಟ್ದಿಂ, ಆಟ್ದಿಂ, ಎಟ್ದಿಂ, ಸುರುಳ್ದಂ, ಅಟ್ತಿ, ಕಟ್ತಿ, ಮುಟ್ತಿಲೆ, ಕಟ್ತಿಲೆ, ತೊಟ್ತು—ಇವು ಮೊದಲಾದುವು.

ಇನ್ನು ಶಿಥಿಲದ್ವಿತ್ವಕ್ಕೆ—ಮಗುಟ್ದಿಂ, ಅಗುಟ್ದಿಂ, ಜಗುಟ್ದಿಂ, ಪೊಗಟ್ದಿಂ ತುಮುಟ್ದಿಂ, ನುಸುಟ್ದಿಂ, ಮುಸುಟ್ದಿಂ, ಮುಗುಟ್ದಿಂ, ತೆಗಟ್ದಿಂ, ನೆಗಟ್ದಿಂ, ತಿಮಿರ್ದಂ.

ಇನ್ನು ದ್ವಿತ್ವಮುಂ ಶಿಥಿಲಮುಂ ಆದುವರ್ಕೆ—ತಗುಳ್ದಂ, ತಗುಳ್ದಂ; ಪೊರಳ್ದಂ, ಪೊರಳ್ದಂ ಎಂಬಂತೆ.

**ಸೂತ್ರಂ ॥** ಉರ್ದುಂ ಬಿರ್ದುಂ ತರ್ದುಂ ।
ಮರ್ದುಂ ಗುರ್ದುಂ ಸಮುಂತು ತಿರ್ದುಂ ಪರ್ದುಂ ॥
ಗರ್ದುಱುಮುರ್ದಿದುದೆನೆಯುಂ ।
ಗರ್ದೆಯುಮಾ ಗುರ್ದೆಯುಂ ಸರೇಫ ಪದಂಗಳ್ ॥ ೩೭ ॥

ನುರ್ಗಿದುದೆನೆ ತರ್ಗಿದುದೆನೆ ।
ಕಿರ್ಗಿದುದೆನೆ ಜರ್ಗುವಿಟ್ದಿದೆನೆ ಪೆರ್ಗತ್ತಾ ॥
ಪೊರ್ಗಾದರ್ಪೆರ್ಗಳವೆನೆ ।
ಕುರ್ಗಿದುದೆನೆ ಮಾರ್ಗದೊಳ್ ಸರೇಫ ಪದಂಗಳ್ ॥ ೩೮ ॥

---

**ಟೀಕೆ.**—ಉರ್ದುಂ, ಬಿರ್ದುಂ, ತರ್ದುಂ, ಮರ್ದುಂ, ಗುರ್ದುಂ, ಸಮುಂತು ತಿರ್ದುಂ, ಪರ್ದುಂ, ಗರ್ದುಱುಂ, ಉರ್ದಿದುದು ಎನೆಯುಂ, ಗರ್ದೆಯುಂ, ಆ ಗುರ್ದೆ

ಸೂತ್ರಂ॥ ಇರ್ಪುಂ ತೋರ್ಪುಂ ಕೆರ್ಪುಂ ।
ನೆರ್ಪುಂ ಪೆರ್ಪೆಯುಮಡರ್ಪುಮಾರ್ಪುಂ ಕೂರ್ಪುಂ ॥
ಪರ್ಪರಿಕೆಯುಮೆರ್ಪುಂ ಮೆ ।
ಯ್ಗರ್ಪುಂ ಮೊದಲಾಗಿ ರೇಫಸಂಯೋಗಂಗಳ್ ॥ ೩೯ ॥

ಆರ್ದಂ ಸಾರ್ದಂ ಪೋರ್ದಂ ।
ತೀರ್ದಂ ಪಾರ್ದಂ ಸಮಂತು ಪೀರ್ದಂ ಕಾರ್ದಂ ॥
ನೇರ್ದಂ ಬಾರ್ದಂ ಗೋರ್ದಂ ।
ಸೋರ್ದಂ ತಾನೆಂದೊಡಂ* ಗುರೂಪಧೆಯಿನಿತುಂ ॥ ೪೦ ॥

ಊರ್ಗಳ್ ಕೇರ್ಗಳ್ ಬೇರ್ಗ ।
ಳ್ ನಾರ್ಗಳ್ ತೇರ್ಗಳ್ನೆಗಟ್ತ್ತಿಯಾರ್ಗಳ್ ಕೂರ್ಗಳ್ ॥
ನೇರ್ಗಳ್ ಸೀರ್ಗಳ್ ತಾರ್ಗಳ್ ।
ಸೂರ್ಗಳ್ ಕಾರ್ಗಳ್ ಗುರೂಪಧಾರ್ಥಮೆನಿಕ್ಕುಂ ॥ ೪೧ ॥

.............................................................................................................

ಯುಂ, ಸರೇಫ ಪದಂಗಳ್=ರೇಫೆಯೊಡನೆ ಕೂಡಿದ ಪದಂಗಳೆನಿಸುವುವು. ॥ ೩೭ ॥

ಟೀಕೆ.—ನುರ್ಗಿದುದು, ತರ್ಗಿದುದು, ಕಿರ್ಗಿದುದು, ಜರ್ಗುವಿಟ್ಟುದು, ಪೆರ್ಗತ್ತು, ಆ ಒರ್ಗಾದರ್, ಪೆರ್ಗಳವು, ಕುರ್ಗಿದುದು—ಇವು ಮಾರ್ಗದೊಳ್ ಸರೇಫ ಪದಂಗಳ್ ॥ ೩೮ ॥

ಟೀಕೆ.— ಇರ್ಪುಂ, ತೋರ್ಪುಂ, ಕೆರ್ಪುಂ, ನೆರ್ಪುಂ, ಪೆರ್ಪೆಯುಂ, ಅಡರ್ಪುಂ, ಆರ್ಪುಂ, ಕೂರ್ಪುಂ, ಪರ್ಪರಿಕೆಯುಂ, ಎರ್ಪುಂ, ಮೈಗರ್ಪುಂ, ಮೊದಲಾಗಿ ರೇಫಸಂಯೋಗಂಗಳ್. ॥ ೩೯ ॥

ಟೀಕೆ.—ಆರ್ದಂ, ಸಾರ್ದಂ, ಪೋರ್ದಂ, ತೀರ್ದಂ, ಪಾರ್ದಂ, ಸಮಂತು ಪೀರ್ದಂ, ಕಾರ್ದಂ, ನೇರ್ದಂ, ಬಾರ್ದಂ, ಗೋರ್ದಂ, ಸೋರ್ದಂ ಎಂದೊಡಂ ತಾಂ ಇನಿತುಂ ಗುರೂಪಧೆಗಳ್. ॥ ೪೦ ॥

ಟೀಕೆ.—ಊರ್ಗಳ್, ಕೇರ್ಗಳ್, ಬೇರ್ಗಳ್, ನಾರ್ಗಳ್, ತೇರ್ಗಳ್, ನೆಗಟ್ತ್ತಿಯ ಆರ್ಗಳ್, ಕೂರ್ಗಳ್, ನೇರ್ಗಳ್, ಸೀರ್ಗಳ್, ತಾರ್ಗಳ್, ಸೂರ್ಗಳ್, ಕಾರ್ಗಳ್ (ಇಂತಿವುಂ) ಗುರೂಪಧಾರ್ಥಂ ಎನಿಕ್ಕುಂ. ॥ ೪೧ ॥

* ವಿಚಾರಂ.—ಉಪಧೆಯೆಂಧೊಡೆ ವ್ಯಾಕರಣಂಗಳಲ್ಲಿ—॥ಅಲೋಂತ್ಯಾತ್ ಪೂರ್ವ ಉಪಧಾ॥ ಎಂಬ[1] ಸಂಜ್ಞಾಸೂತ್ರದಿಂ—ಅಂತ್ಯದತ್ತಣಿಂ ಮೊದಲವರ್ಣಮುಪಧೆ ಎಂದಱಿ.

1· ಅಂತ್ಯಾದ್ ವರ್ಣಾತ್ ಪೂರ್ವ ಉಪಧಾ ಎಂದು, ವಾಜಸನೇಯಿ ಪ್ರಾತಿಶಾಖ್ಯದೊಳುಂಟು. (1· 35); ಪಾಣಿನಿ 1· 1· 65·

ಸೂತ್ರಂ ॥ ಪಿಂತಮರ್ದಿರೆ ಱಟಿ ಕುಳ ರೇ।
ಫಾಂತಂ ಹ್ರಸ್ವಾದಿ ಲಿಂಗಮಂತವು ಗಳ್ ಮೇ ॥
ಣಂತೆ ಚತುರ್ಥಿಯ ಗೆಯೆ ಮೇಣ್।
ಮುಂತಮರ್ದಿರೆ ಪಿರಿದುಮೊದವುಗುಂ ಶಿಥಿಲತ್ವಂ ॥ ೪೨ ॥

ವೃತ್ತಿ.—ಪೆಱಗಣ ಮೆಯ್ಯೊಳ್ ಲಘು ಮೊದಲಾಗಿರ್ದ ಱಟಿಕುಳ ರೇಫಾಂತಂಗಳಪ್ಪ ಲಿಂಗಂಗಳಿರೆ, ಮುಂದೆ ಗಳ್ ಅಕ್ಕೆ, ಮೇಣ್ ಚತುರ್ಥಿಗಾದ ಗೆಕಾರಮಕ್ಕೆ, ಶಿಥಿಲಮಕ್ಕುಂ.

ಪ್ರಯೋಗಂ— ಱಟಾಂತಕ್ಕೆ—ಅಗಟ್ಗಳ್, ಎಸಟ್ಗಳ್, ನೆಗಟ್ಗಳ್ (ಎಂದೊಡೆ ಜಲಚರಂಗಳ್), ಉಗುಟ್ಗಳ್; ಅಗಟ್ಗೆ, ಎಸಟ್ಗೆ, ನೆಗಟ್ಗೆ, ಉಗುಟ್ಗೆ.

ಆದಿ ದೀರ್ಘಮಾದೊಡಂ ಗುರುವಾದೊಡಂ ಶಿಥಿಲಮಿಲ್ಲ—ಬಾಸುಟ್ಗಳ್, ಇಕ್ಕುಟ್ಗಳ್, ಪೊಕ್ಕುಟ್ಗಳ್ ; ಬಾಸುಟ್ಗೆ, ಇಕ್ಕುಟ್ಗೆ, ಪೊಕ್ಕುಟ್ಗೆ.

ಕುಳಾಂತಕ್ಕೆ—ಮುಗುಳ್ಗಳ್, ಪುಗುಳ್ಗಳ್, ಅಮುಳ್ಗಳ್ (ನಯಗುಣ ವಿಕ್ರಮದಮುಳ್ಗಳ್), ಎಸಳ್ಗಳ್ (ಎಂದೊಡೆ ಪೂವಿನವು); ಮುಗುಳ್ಗೆ, ಪುಗುಳ್ಗೆ, ಅಮುಳ್ಗೆ, ಎಸಳ್ಗೆ.

ಪಿರಿದುಂ ಎಂಬುದಱಿಂ ಕೆಲವೆಡೆಯೊಳ್ ಶಿಥಿಲಮಿಲ್ಲದುದರ್ಕೆ—ಕುರುಳ್ಗಳ್, ಪುರುಳ್ಗಳ್, ಮರುಳ್ಗಳ್; ಕುರುಳ್ಗೆ—ಇತ್ಯಾದಿ.

ರೇಫಾಂತಕ್ಕೆ—ಕನರ್ಗಳ್, ಕೊನರ್ಗಳ್, ತಳಿರ್ಗಳ್, ಕುಳಿರ್ಗಳ್, ಅಲರ್ಗಳ್, ಎಲರ್ಗಳ್, ಉಗುರ್ಗಳ್, ಪೊಗರ್ಗಳ್, ಒಗರ್ಗಳ್, ಚಿಗುರ್ಗಳ್, ಬಿದಿರ್ಗಳ್, ಕದಿರ್ಗಳ್, ಕುದಿರ್ಗಳ್, ತಿಮಿರ್ಗಳ್, ತೆಮರ್ಗಳ್, ಬೆಮರ್ಗಳ್, (ಬೆಮರ್ಗಳನೂದಿ ನುಣ್ಪೊಡೆಗಳಂ ಪಿಡಿಕೆಯ್ಸಿ), ಎಸರ್ಗಳ್, ಮೊಸರ್ಗಳ್, ಒಸರ್ಗಳ್, ಉಸಿರ್ಗಳ್, ಪಸುರ್ಗಳ್, ನವಿರ್ಗಳ್ ; ಕನರ್ಗೆ, ನವಿರ್ಗೆ, (ನಡೆದುದು ತಲೆ ನವಿರ್ಗೂಟಂ)—ಇತ್ಯಾದಿ.

---

ಟೀಕೆ.—ಹ್ರಸ್ವಾದಿಲಿಂಗಂ=ಹ್ರಸ್ವಾದಿಲಿಂಗಂಗಳಾದ, ಱಟಿಕುಳ ರೇಫಾಂತಂ= ಱಟಾಂತ ಕುಳಾಂತ ರೇಫಾಂತಂಗಳಾದ ಶಬ್ದಂಗಳ್, ಪಿಂತೆ=ಹಿಂದುಗಡೆಯಲ್ಲಿ, ಅಂತು=ಹಾಂಗೆ, ಅವು=ಆ ಶಬ್ದಂಗಳ್, ಅಮರ್ದಿರೆ = ಪೊರ್ದುಗೆಯಾಗಿ ಇರೆ, ಮೇಣ್=ವಿಕಲ್ಪದಿಂದೆ, ಗಳ್=ಬಹುವಚನದ ಗಳಾಗಮಂ, ಅಂತೆ=ಹಾಂಗೆ, ಮೇಣ್= ಅದಲ್ಲದೆ, ಚತುರ್ಥಿಯ = ಚತುರ್ಥೀ ವಿಭಕ್ತಿಯ, ಗೆಯೆ = ಗೆಕಾರಂ, ಮುಂತೆ = ಮುಂದುಗಡೆಯಲ್ಲಿ, ಅಮರ್ದಿರೆ= ಪೊರ್ದುಗೆಯಾಗಿರೆ, ಪಿರಿದುಂ = ಬಹುಳವಾಗಿ, ಶಿಥಿಲತ್ವಂ=ಶಿಥಿಲಭಾವಂ, ಒದವುಗುಂ=ಬರ್ಪುದು. ॥ ೪೨ ॥ (೯೭)

ೞಕಾರಾದೇಶ ರೇಫೆಗಂ ಶಿಥಿಲತ್ವಂ—ಅಳಿರ್ಗಳ್, ಕೆಸರ್ಗಳ್, ಬಸಿರ್ಗಳ್, ಪೆಸರ್ಗಳ್, ಹಗರ್ಗಳ್, ಎಡರ್ಗಳ್ (ಆವೆಡರ್ಗಳುಮಂ ತಿರ್ದುವೊಂದು ಕೋಡುಂ ಪೆಂಪುಂ), ಅಳಿರ್ಗೆ—ಇತ್ಯಾದಿ[1]. ಪಿಱಿದುಮೆಂಬುದಱಿಂದೆ ಕಾದಲರ್ಗಳೆಂಬ ಪದನ ಆದಿ ದೀರ್ಘಮಾಗಿಯುಂ ಶಿಥಿಲಮಾಯ್ತು.

**ಸೂತ್ರಂ** ॥ ಗದವಜಕಾರಮುವಿದಿರಿರೆ ।
ಪದಮಧ್ಯಂ ವಿಷಯಮಾಗನೇಕಾಕ್ಷರದೊಳ್ ॥
ಪುದಿಯೆ ಲಘೂಪಧೆ ಕೆಲಕೆಲ ।
ವೊದವಿರ್ಕುಂ ರಾಂತಳಾಂತಮವು ಶಿಥಿಲತೆಯಂ ॥ ೪೩ ॥

**ವೃತ್ತಿ.**—ಮುಂತೆ ಗದವಜಕಾರಂಗಳಿರೆ, ಪೆಱಗಣ ಮೆಯ್ಯೊಳ್ ರಾಂತ ಳಾಂತಗಳ್, ಸಮಾಸಮಧ್ಯಮೆ ವಿಷಯಮಾಗಿ, ಪಲವಕ್ಕರಂಗಳೊಳ್ಕೂಡಿ ಲಘೂಪಧೆಯಾಗಿ ನಿಲೆ, ಆ ರಾಂತ ಳಾಂತಂಗಳ್ಗೆ ಶಿಥಿಲತ್ವಮಕ್ಕುಂ.

**ಪ್ರಯೋಗಂ.**—ರಾಂತಕ್ಕೆ—ಕುಳಿರ್ಗಾಳಿ, ಬೆಳರ್ಗೆಂಪು, ತಳಿರ್ದೋರಣಂ, ಅಲರ್ದೋರಣಂ, ಅಲರ್ದೋಂಟಂ, ಬಿದಿರ್ದಟ್ಟಿ, ಪೊಗರ್ವಟ್ಟಿ, ಬೆಮರ್ವನಿ, ಅಲರ್ಜೊಂಪಂ, ಕದಿರ್ಜೊನ್ನಂ.

ಳಾಂತಕ್ಕೆ—ಮುಗುಳ್ಗಾಯ್, ಅಮುಳ್ದೊಂಗಲ್, ಎಸಳ್ವಸೆ, ಅಮುಳ್ಜಂತ್ರಂ.

**ಸೂತ್ರಂ** ॥ ಪುಗೆ ದದಪವಕಾರಂ ವಿಧಿ ।
ಯ ಗೆಕಾರಂ ವರ್ತಮಾನಕಾಲದ ಗುಂ ಧಾ ॥
ತುಗೆ ಅಟಿ ಕುಳ ರೇಫಾಂತ ।
ಕ್ಕೊಗೆಗುಂ ಶಿಥಿಲತ್ವಮುಗುರುಪೂರ್ವಸ್ಥಿತಿಯಿಂ ॥ ೪೪ ॥

---

**ಟೀಕೆ.**—ಪದಮಧ್ಯಂ = ಸಮಾಸಮಧ್ಯಂ, ವಿಷಯಂ=ಲಕ್ಷ್ಯಂ (ಗುರಿ), ಆಗೆ, ಗದವಜಕಾರಂ = ಗಕಾರ, ದಕಾರ, ವಕಾರ, ಜಕಾರಂಗಳ್, ಅವು, ಇದಿರಿರೆ=ಮುಂದಿರೆ, ಅನೇಕಾಕ್ಷರದೊಳ್ = ಅನೇಕಾಕ್ಷರದಲ್ಲಿ, ಪುದಿಯೆ=ಪ್ರವೇಶಮಾಗೆ, ಲಘೂಪಧೆ=ಲಘುವೆ ಉಪಧೆಯಾದ, ಕೆಲ ಕೆಲವು=ಹಲವು ಕೆಲವು, ರಾಂತ ಳಾಂತಂ = ರೇಫಾಂತ ಳಕಾರಾಂತ ಶಬ್ದಂಗಳ್, ಅವು, ಶಿಥಿಲತೆಯಂ = ಶಿಥಿಲತ್ವಮಂ, ಒದವಿರ್ಕುಂ=ಪೊರ್ದಿರ್ಪುವು. ॥ ೪೩ ॥

1. ಈ ಪದಂಗಳ ಪ್ರಕೃತಿರೂಪಂಗಳ್ ೞಾಂತಂಗಳಾಗಿರ್ಪುವು : ಅಳಿೞ್, ಕೆಸೞ್, ಬಸಿೞ್, ಪೆಸೞ್, ಹಗೞ್—ಎಂಬಂತೆ.

**ವೃತ್ತಿ.**—ಹ್ರಸ್ವಾದಿಗಳಪ್ಪ ಱಟಿ ಕುಳ ರೇಫಾಂತಂಗಳಪ್ಪನೇಕಾಕ್ಷರಧಾತುಗಳ್ಗೆ ಭೂತ ವರ್ತಮಾನ ಭವಿಷ್ಯಂತಿಗಾದ, ದ, ದಪ, ವ, ಎಂಬಿವು ಪರಮಾದೊಡಂ, ಪ್ರಥಮ ಪುರುಷದ ವಿಧ್ಯರ್ಥದೊಳಾದ 'ಗೆ' ಎಂಬುದು ಪರಮಾದೊಡಂ, ಪ್ರಥಮ ಪುರುಷದ ವರ್ತಮಾನ ಭವಿಷ್ಯಂತಿಗಾದ 'ಗುಂ' ಎಂಬುದು ಪರಮಾದೊಡಂ, ಕ್ರಿಯಾಪದದೊಳ್ ಶಿಥಿಲತ್ವಮುಂಟು.

**ಪ್ರಯೋಗಂ.**—ಱಟಾಂತಂಗಳ ದ, ದಪ, ವಂಗಳ್ಗೆ—ಜಗುೞ್ದಿಂ, ಆಗುೞ್ದಿಂ, ಪೊಗೞ್ದಿಂ, ತೆಗೞ್ದಿಂ, ನೆಗೞ್ದಿಂ, ತುಮುೞ್ದಿಂ; ಜಗುೞ್ದಪಂ ಇತ್ಯಾದಿ: ಜಗುೞ್ವಂ ಇತ್ಯಾದಿ.

ಗೆಕಾರಕ್ಕೆ—ತೆಗೞ್ಗೆ, ನೆಗೞ್ಗೆ, ಪೊಗೞ್ಗೆ ಎಂಬಂತಱಿವುದು.

ಗುಂ ಎಂಬುದರ್ಕೆ—ತೆಗೞ್ಗುಂ, ನೆಗೞ್ಗುಂ, ಪೊಗೞ್ಗುಂ ಎಂಬಂತುೞಿದುವರ್ಕೆಲ್ಲಂ ಪತ್ತಿಸುವುದು.

ಕುಳಾಂತಕ್ಕೆ—ನುಸುಳ್ದಂ, ಮಸುಳ್ದಂ, ನುಗುಳ್ದಂ; ಮಸುಳ್ದಪಂ ಇತ್ಯಾದಿ; ಮಸುಳ್ವಂ ಇತ್ಯಾದಿ.

ಗೆಕಾರಕ್ಕೆ—ನುಸುಳ್ಗೆ, ಮಸುಳ್ಗೆ ಎಂಬಂತೆ.

ಗುಂ ಎಂಬುದರ್ಕೆ—ನುಸುಳ್ಗುಂ, ಮಸುಳ್ಗುಂ ಎಂಬಂತೆ ಮಾೞ್ಪುದು.

ತೆರಳ್ದಂ, ಪೊರಳ್ದಂ ಎಂಬಂತೆ ಕೆಲಕೆಲವೆಡೆಯೊಳ್ ಶಿಥಿಲತ್ವಮುಂ ದ್ವಿತ್ವಮುಮುಂಟು.

ರೇಫಾಂತಕ್ಕೆ—ತೊಡರ್ದಂ, ತಳರ್ದಂ, ಕೆಳರ್ದಂ, ಎಡರ್ದಂ, ಅಳರ್ದಂ, ಅದಿರ್ದಂ, ಬಿದಿರ್ದಂ, ಅಮರ್ದಂ, ನಿಮಿರ್ದಂ; ನಿಮಿರ್ದಪಂ; ನಿಮಿರ್ವಂ ಎಂಬಂತೆಲ್ಲಕ್ಕಂ ಪತ್ತಿಸುವುದು.

ಗೆಕಾರಕ್ಕೆ—ತೊಡರ್ಗೆ, ಅದಿರ್ಗೆ, ಬಿದಿರ್ಗೆ, ಎಡರ್ಗೆ ಎಂಬಂತೆ.

---

**ಟೀಕೆ.**—ಅಗುರುಪೂರ್ವಸ್ಥಿತಿಯಿಂ=ಲಘು ಮೊದಲಾಗಿರ್ಪುದಱಿಂದೆ, ಱಟಿ ಕುಳ ರೇಫಾಂತಕ್ಕೆ=ಱಟಾಂತ ಕುಳಾಂತ ರೇಫಾಂತಗಳಾದ, ಧಾತುಗೆ=ಧಾತುಗಳ್ಗೆ, ದ ದಪ ವಕಾರಂ=ದಕಾರ ದಪಕಾರ ವಕಾರಂಗಳ್, ವಿಧಿಯ=ವಿಧ್ಯರ್ಥದ, ಗೆಕಾರಂ=ಗೆ ಎಂಬಕ್ಷರಂ, ವರ್ತಮಾನ ಕಾಲದ=ವರ್ತಮಾನ ಕಾಲಾರ್ಥದ, ಗುಂ=ಗುಂಕಾರಂ, ಪುಗೆ=ಪ್ರವೇಶಮಾಗೆ, ಶಿಥಿಲತ್ವಂ=ಶಿಥಿಲಭಾವಂ, ಒಗೆಗುಂ=ಪುಟ್ಟುಗುಂ. ॥ ೪೪ ॥

ಗುಂ ಎಂಬುದರ್ಕೆ—ಅಮುರ್ಗುಂ, ನಿಮಿರ್ಗುಂ ಎಂಬಂತೆ.

ದೀರ್ಘಾದಿಗೆ ಶಿಥಿಲತ್ವಮಿಲ್ಲ—ಆರ್ದಂ, ಸಾರ್ದಂ, ಪಾರ್ದಂ, ಸೋರ್ದಂ, ನೇರ್ದಂ ಎಂಬಂತೆ.

**ಸೂತ್ರಂ ॥** ಬರ್ದಿಲಂ ಸಗ್ಗಕ್ಕೆ ಪೆಸ ।
ಗರ್ದುಗೆಸೆವಮುರ್ದುವಳ್ಳಿ ಕಂಪಲರ್ದುದೆನ ॥
ಲ್ಕೆರ್ದೆವಾಯದಿಮುರ್ತ್ತೆ ಪೊದ ।
ಟ್ಟಿರ್ದೆಯೆಂಬಿವು ಸಹಜ ಶಿಥಿಲವೃತ್ತಿಯನಾಳ್ಗುಂ ॥ ೪೫ ॥

**ವೃತ್ತಿ.**—ಇದರ್ಕಿದೆ ವೃತ್ತಿ.

**ಸೂತ್ರಂ ॥** ನರವುಂ ನೆರವುಂ ದೇವರ ।
ಬರವುಂ ತೆರವುಂ ನೆಗಟ್ತೆಯೆಟ್ತರವುಂ ಸಂ ॥
ಚರಿಸುವ ನೊಳವುಂ ತಾಮರೆ ।
ಬರ ಮತದಿಂದಂತ್ಯವರ್ಣಲೋಪಮನಾಳ್ಗುಂ ॥ ೪೬ ॥

**ವೃತ್ತಿ.**—ಈ ಪದಂಗಳ ಕಡೆಯ ವಕಾರಕ್ಕೆ ವಿಕಲ್ಪದಿಂ ಲೋಪಮುಂಟು.

**ಪ್ರಯೋಗಂ.**—ನರವು=ನರಂ; ನೆರಂ, ಬರಂ, ಎಟ್ತರಂ, ನೊಳಂ ಎಂದಱಿವುದು.

---

**ಟೀಕೆ.**—ಬರ್ದಿಲಂ=ಬರ್ದಿಲವೆಂದು, ಸಗ್ಗಕ್ಕೆ=ಸ್ವರ್ಗಕ್ಕೆ, ಪೆಸರ್=ಹೆಸರ್; ಗರ್ದುಗು=ಗರ್ದುಗು ಎಂದು, ಎಸೆವ=ಒಪ್ಪುವ, ಅಮುರ್ದುವಳ್ಳಿ=ಅಮುರ್ದುವಳ್ಳಿ ಯೆಂದು, ಕಂಪಲರ್ದುದು = ಕಂಪಲರ್ದುದು ಎಂದು, ಎನಲ್ಕೆ=ಪೇೞಲ್ಕೆ, ಎರ್ದೆ ವಾಯ್=ಎರ್ದೆವಾಯೆಂದು, ಅದಿಮುರ್ತ್ತೆ=ಅದಿಮುರ್ತ್ತೆಯೆಂದು, ಪೊದಟ್ದು=ಪ್ರಸಿದ್ಧಿ ವಡೆದ, ಎರ್ದೆ= ಎರ್ದೆಯೆಂದು, ಎಂಬಿವು=ಎಂಬೀ ಶಬ್ದಂಗಳ್, ಸಹಜ ಶಿಥಿಲ ವೃತ್ತಿಯುಂ=ಸಹಜವಾದ ಶಿಥಿಲದ ವೃತ್ತಿಯುಂ, ಆಳ್ಗುಂ=ತಾಳ್ವುವು. ॥ ೪೫ ॥

**ಟೀಕೆ.**—ನರವುಂ=ನರವು ಎಂಬ ಶಬ್ದಮುಂ, ನೆರವುಂ=ನೆರವು ಎಂಬ ಶಬ್ದಮುಂ, ದೇವರ ಬರವುಂ=ದೇವರ ಬರವು ಎಂಬ ಶಬ್ದಮುಂ, ತೆರವುಂ=ತೆರವು ಎಂಬ ಶಬ್ದಮುಂ, ನೆಗಟ್ತೆಯ=ಪ್ರಸಿದ್ಧಿಯ, ಎಟ್ತರವುಂ=ಎಟ್ತರವು ಎಂಬ ಶಬ್ದಮುಂ, ಸಂಚರಿಸುವ ನೊಳವುಂ = ಸಂಚಾರವ ಮಾೞ್ಪ ನೊಳವು ಎಂಬ ಶಬ್ದಮುಂ, ತಾಂ, ಅರೆಬರ = ಕೆಲಂಬರ, ಮತದಿಂದೆ, ಅಂತ್ಯ=ಕಡೆಯೊಳ, ವರ್ಣ=ಅಕ್ಷರದ, ಲೋಪಮಂ=ಅದರ್ಶನಮಂ, ಆಳ್ಗುಂ=ತಾಳ್ಗುಂ. ॥ ೪೬ ॥

**ಸೂತ್ರಂ** ॥ ಪುದಿಗುಂ ನಿರ್ಧಾರಣದ ।
ಲ್ಲದೆಯೆಂಬ ದೆಕಾರದೆಡೆಗೆ ಪಿರಿದುಂ ಲೋಪಂ ॥
ಪುದಿಯದು ಲೋಪಂ ಪ್ರತಿಷೇ ।
ಧದೊಳಲ್ಲದುವೆಂಬ ಪದಮನಲ್ತೆನಲಕ್ಕುಂ ॥ ೪೭ ॥

**ವೃತ್ತಿ.**—ನಿರ್ಧಾರಣಾರ್ಥಮಂ ಪೇೞ್ವ ಅಲ್ಲದೆಯೆಂಬ ಶಬ್ದದ ದೆಕಾರಕ್ಕೆ ವಿಕಲ್ಪದಿಂ ಲೋಪಮುಂಟು; ಅಲ್ಲದುವೆಂಬ ಪ್ರತಿಷೇಧದೊಳ್ ದುಕಾರಕ್ಕೆ ಲೋಪಮಾಗಲೆನಲಾಗದು. ಅಲ್ಲದು ಎಂಬುದನಲ್ತೆಂದು ವಿಕಲ್ಪದಿನೆನಲಕ್ಕುಂ, ಅದರ್ಕೆ ಲಿಂಗವಚನ ವ್ಯವಸ್ಥೆಯಿಲ್ಲ.

**ಪ್ರಯೋಗಂ.**—ದೆಕಾರಲೋಪಕ್ಕೆ— ಗೊರವನಲ್ಲದೆ ಪೊಗೞೆನೆಂಬಲ್ಲಿ, ಗೊರವನಲ್ಲ ಪೊಗೞೆನೆಂದುಂಟು.

ಪ್ರತಿಷೇಧದೊಳ್ ಲಿಂಗತ್ರಯಕ್ಕೆ—ಅವನಲ್ತು, ಅವಳಲ್ತು, ಅದಲ್ತು.

ವಚನತ್ರಯಕ್ಕೆ— ಒರ್ವನೆ ಗಂಡನಲ್ತೆ ಜಗತೀತಳದೊಳ್ ! ಇರ್ಬರೆ ತೋಳ್ಗಳಲ್ತೆ ನೃಪತಿಗೆ ರಣದೊಳ್ ! ತೇಜೋನಿಧಿ ಕವಿನಿಳಯದೊಳೀಸತ್ಪ್ರಭರ್ ಮಹಾಪ್ರಭರಲ್ತೆ !

**ಸೂತ್ರಂ** ॥ ಯ ರ ಲ ಣ ನ ಳ ಱ ೞ ವರ್ಣೋ ।
ತ್ಕರಮೆ ವಲಂ ಪದದ ಕಡೆಯೊಳಸ್ವರವಿಧಿಯಂ ॥
ಪಿರಿದುಂ ತಾಳ್ದುಗುಮಿವನಱಿ ।
ವರೆ ಕನ್ನಡಗಬ್ಬದೊಳ್ ತೊಡಂಕದೆ ಸಲ್ವರ್ ॥ ೪೮ ॥

---

**ಟೀಕೆ.**—ನಿರ್ಧಾರಣದ = ನಿರ್ಧಾರಣಾರ್ಥದ, ಅಲ್ಲದೆಯೆಂಬ ದೆಕಾರದ= ಅಲ್ಲದೆ ಎಂದು ಪೇೞ್ವ ದೆಕಾರದ, ಎಡೆಗೆ=ಸ್ಥಾನಕ್ಕೆ, ಪಿರಿದುಂ=ವಿಶೇಷವಾಗಿಯುಂ, ಲೋಪಂ=ಅದರ್ಶನಂ, ಪುದಿಗುಂ=ಪ್ರವೇಶವಾಗುವುದು ; ಅಲ್ಲದು ಎಂಬುದಱ ದುಕಾರಕ್ಕೆ, ಪ್ರತಿಷೇಧದೊಳ್=ಪ್ರತಿಷೇಧದಲ್ಲಿ, ಲೋಪಂ=ಅದರ್ಶನಂ, ಪುದಿಯದು=ಪ್ರವೇಶವಾಗದು, ಅಲ್ಲದುವೆಂಬ ಪದಮಂ = ಅಲ್ಲದು ಎಂದು ಪೇೞ್ವ ಪದವಂ, ಅಲ್ತೆನಲ್= ಅಲ್ತು ಎಂದು ಹೇೞಲ್, ಅಕ್ಕುಂ=ಅಪ್ಪುದು. ॥ ೪೭ ॥

**ಟೀಕೆ.**—ಯ ರ ಲ ಣ ನ ಳ ಱ ೞ=ಯಕಾರ, ರೇಫ, ಲಕಾರ, ಣಕಾರ, ನಕಾರ, ಳಕಾರ, ಱಕಾರ, ೞಕಾರಂಗಳೆಂಬ, ವರ್ಣ = ಅಕ್ಷರಂಗಳ, ಉತ್ಕರಮೆ= ಹೆಚ್ಚಿಗೆಯೆ, ವಲಂ=ನಿಶ್ಚಯವಾಗಿ, ಪದದ = ಪದಂಗಳ, ಕಡೆಯೊಳ್ = ಅಂತ್ಯದಲ್ಲಿ, ಅಸ್ವರವಿಧಿಯಂ=ವ್ಯಂಜನವಿಧಿಯಂ, ಪಿರಿದುಂ=ಬಹುಳವಾಗಿಯುಂ, ತಾಳ್ದುಗುಂ= ಧರಿಸುವುದು ; ಇವಂ=ಈ ವ್ಯಂಜನಾಂತ ಶಬ್ದಂಗಳಂ, ಅಱಿವರೆ=ತಿಳಿವರೆ, ಕನ್ನಡ

**ವೃತ್ತಿ.**—ಯಕಾರ ರೇಫ ಲಕಾರ ಣಕಾರ ನಕಾರ ಳಕಾರ ಱಕಾರ ೞಕಾರಂಗಳ್ ಕನ್ನಡದೊಳ್ ಪಿರಿದುಂ ವ್ಯಂಜನಾಂತಂಗಳಾದ ಪದಂಗಳಾಗಿರ್ಪುವು; ಇವನಱಿದು ಪ್ರಯೋಗಿಸುವರ್ಗೆ ಕವಿತ್ವದೊಳ್ ತೊಡಂಕಿಲ್ಲ.

**ಪ್ರಯೋಗಂ.**—ಯಕಾರಕ್ಕೆ—ಕೆಯ್, ಮೆಯ್, ನೆಯ್, ಕೊಯ್, ಪೊಯ್, ಪಾಯ್, ಸಾಯ್, ಬಾಯ್, ಬಯ್.

ರೇಫೆಗೆ—ನಾರ್, ಬೇರ್, ತೇರ್, ಬರ್, ತೆಮರ್, ಬೆಮರ್, ಉಸಿರ್, ಮೊಸರ್, ತಳಿರ್, ಕುಳಿರ್.

ಲಕಾರಕ್ಕೆ—ಪಾಲ್, ಕೇಲ್, ಕೋಲ್, ಸಾಲ್, ನೂಲ್, ಕಲ್, ನೆಲ್, ಬಿಲ್, ಕವಲ್, ಅವಲ್, ತಂದಲ್.

ಣಕಾರಕ್ಕೆ—ಪವಣ್, ನಾಣ್, ಜಾಣ್, ಮಾಣ್, ಗೇಣ್, ಕಣ್, ಮಣ್, ಪೂಣ್, ಪುಣ್.

ನಕಾರಕ್ಕೆ—ಪೊನ್, ಬೆನ್, ಏನ್, ಜೇನ್, ಸೀನ್, ಈನ್, ಬಾನ್, ಪೇನ್.

ಳಕಾರಕ್ಕೆ-ಒಳ್, ಬೆಳ್, ತಳ್, ಕಳ್, ಮಿದುಳ್, ಕರುಳ್, ಕುರುಳ್, ತಿರುಳ್, ಮುಗುಳ್.

ಱಕಾರಕ್ಕೆ—ಬಸಿಱ್, ಕೆಸಱ್, ಪೆಸಱ್, ನೇಸಱ್, ವೆಟ್ಟಿಱ್, ಪೊಱವಾಱ್.

ೞಟಿಕ್ಕೆ— ಪೋೞ್, ಬೀೞ್, ತೇೞ್, ಬಾೞ್, ಎಸೞ್, ಅಗೞ್, ನೆಗೞ್, ಪೊಗೞ್, ತೆಗೞ್.

ಪಿರಿದುಮೆಂಬುದಱಿಂ ಕೆಲವಱೊಳ್ ವ್ಯಂಜನಮಿಲ್ಲ; ಅವಾವೆಂದೊಡೆ-ಕರು, ತಣು, ಅನು, ಕೞು, ತುೞು, ಪೞು, ಪುೞು—ಇವು ಮೊದಲಾದುವು.

**ಸೂತ್ರಂ** ॥ ಎರಡುಂ ಪಲವುಂ ವರ್ಣಂ ।
ಪರಸ್ಪರಂ ಕೂಡುವಂದಮದು ಸಂಧಿ ವಲಂ ॥
ಸ್ವರ ರಹಿತವ್ಯಂಜನಮುವು ।
ಪರವರ್ಣಮನ್ನೈದುತಿರ್ಪುವಾ ಸಂಹಿತೆಯೊಳ್ ॥ ೪೯ ॥

........................................................................

ಗಬ್ಬದೊಳ್=ಕರ್ಣಾಟಕ ಕಾವ್ಯಂಗಳಲ್ಲಿ, ತೊಡಂಕದೆ=ತೊಡಕಿಲ್ಲದೆ, ಸಲ್ವರ್=ಸಲುವಳಿಯಾಗಿರ್ಪರ್. ॥ ೪೮ ॥

**ವೃತ್ತಿ.**—ಎರಡಕ್ಕರಂ ಮೇಣ್ಪಲವಕ್ಕರಂ ತಮ್ಮೊಳನ್ಯೋನ್ಯಮಾಗಿ ಕೂಡುವುದು ಸಂಧಿಯೆನಿಸುಗುಂ ; ಆ ಸಂಧಿಯಲ್ಲಿ ಸ್ವರ ರಹಿತ ವ್ಯಂಜನಂಗಳ್ ಮುಂದಣಕ್ಕರಮನ್ನೈದುವುವು.

**ಪ್ರಯೋಗಂ.**—ಸ್ವರಯುಕ್ತ ವ್ಯಂಜನಕ್ಕೆ—ಕೂರ್ತು ಈವಂ=ಕೂರ್ತೀವಂ; ಎನ್ನ ಅರಸಂ=ಎನ್ನರಸಂ ; ಮುನ್ನೆ ಇೞಿವಂ=ಮುನ್ನಿೞಿವಂ.

ಸ್ವರರಹಿತ ವ್ಯಂಜನಕ್ಕೆ—ಜಾಣ್ ಉಂಟು = ಜಾಣುಂಟು, ಕುರುಳ್ ಕೊಂಕಾಯ್ತು=ಕುರುಳ್ಕೊಂಕಾಯ್ತು.

**ಸೂತ್ರಂ ॥** ಪದಮಧ್ಯಂ ಪದದಂತ್ಯಂ ।
ವಿದಗ್ಧರಿಂ ಸಂಧಿವಿಷಯಮೆರಡಕ್ಕುಮಿಳಾ ॥
ವಿದಿತ ಪ್ರಕೃತಿ ಪ್ರತ್ಯಯ ।
ಮೊದವಿದ ಪದಯುಗದ ಬೆರಕೆ ಬೇಡಿರ್ದುದಱಿಂ ॥ ೫೦ ॥

**ವೃತ್ತಿ.**—ಪ್ರಕೃತಿ ಪ್ರತ್ಯಯಂಗಳ ಮಧ್ಯಮುಂ, ಪೂರ್ವಪದದ ಕಡೆಯುಂ ಪರಪದದ ಮೊದಲುಂ ಕೂಡೆ, ಪದಮಧ್ಯಸಂಧಿ, ಪದಾಂತಸಂಧಿ ಎಂದು, ಸಂಧಿವಿಷಯಮಿರ್ತೆಱಂ.*

**ಪ್ರಯೋಗಂ.**—ಪದಮಧ್ಯ ಸಂಧಿಗೆ, ನಾಮವಿಭಕ್ತಿಯಲ್ಲಿ—ಮಾತು + ಅಮ್=ಮಾತಂ ; ಮಾತು+ಇಮ್=ಮಾತಿಂ; ಮಾತು + ಇಂಗೆ=ಮಾತಿಂಗೆ;

---

**ಟೀಕೆ.**—ಎರಡುಂ=ಎರಡಕ್ಷರಂಗಳುಂ, ಪಲವುಂ=ಹಲವಕ್ಷರಂಗಳುಂ, ಪರಸ್ಪರಂ = ಅನ್ಯೋನ್ಯವಾಗಿ, ಕೂಡುವಂದಂ = ಸಂಯೋಗವಾಗುವಂದಂ, ಅದು, ಸಂಧಿ=ಸಂಧಿ ಯೆನಿಪುದು, ವಲಂ=ನಿಶ್ಚಯುಂ ; ಆ ಸಂಹಿತೆಯೊಳ್=ಆ ಸಂಧಿಯಲ್ಲಿ, ಸ್ವರರಹಿತ = ಸ್ವರಹೀನವಾದ, ವ್ಯಂಜನಂ = ವ್ಯಂಜನಾಕ್ಷರಂ, ಅವು, ಪರವರ್ಣಮಂ=ಮುಂದಣಕ್ಷರವಂ, ಅಯ್ದುತೆ ಇರ್ಪುವು=ಕೂಡುತ್ತಿರ್ಪುವು. ॥ ೪೯ ॥

**ಟೀಕೆ.**—ಇಳಾವಿದಿತ ಪ್ರಕೃತಿಪ್ರತ್ಯಯುಂ=ಭೂಮಿಯಲ್ಲಿ ಪ್ರಸಿದ್ಧವಾದ ಪ್ರಕೃತಿ ಪ್ರತ್ಯಯಂಗಳ್, ಒದವಿದ ಪದಯುಗದ=ಸೇರುವ ಪದಂಗಳೆರಡಱ, ಬೆರಕೆ=ಸಂಯೋಗಂ, ಬೇಡಿರ್ದುದಱಿಂ=ಬೇಕಾಗಿರ್ದುದಱಿಂದೆ, ಪದಮಧ್ಯಂ=ಪದಮಧ್ಯಸಂಧಿಯೆಂದು, ಪದದಂತ್ಯಂ = ಪದಾಂತಸಂಧಿಯೆಂದು, ವಿದಗ್ಧರಿಂ=ವಿದ್ವಾಂಸರಿಂದೆ, ಸಂಧಿವಿಷಯುಂ=ಸಂಧಿ, ಎರಡು ತೆಱಂ, ಆಕ್ಕುಂ=ಆಪ್ಪುದು. ॥ ೫೦ ॥

***ವಿಚಾರಂ.**—ಪ್ರಕೃತಿ ಪ್ರತ್ಯಯಂಗಳ್ಕೂಡುವುದು ಪದಮಧ್ಯಸಂಧಿಯೆನಿಪುದು; ಪದಂಗಳೆರಡು ಕೂಡುವಲ್ಲಿ ಮೊದಲ ಪದದ ಕಡೆಯೊಳಪ್ಪುದು ಪದಾಂತಸಂಧಿಯೆನಿಪುದು.

ಮಾತಿನ+ಅತ್ತಣಿಂ= ಮಾತಿನತ್ತಣಿಂ; ಮಾತು+ಇನ= ಮಾತಿನ; ಮಾತಿನ+ ಒಳ್= ಮಾತಿನೊಳ್.

ಧಾತು (ಆಖ್ಯಾತ) ವಿಭಕ್ತಿಯಲ್ಲಿ—ನುಡಿದ+ಅಮ್= ನುಡಿದಂ; ನುಡಿದ ಅರ್=ನುಡಿದರ್; ನುಡಿದ+ಅಯ್= ನುಡಿದಯ್; ನುಡಿದ+ಇರ್=ನುಡಿದಿರ್; ನುಡಿದ+ಎನ್= ನುಡಿದೆನ್; ನುಡಿದ+ಎವು= ನುಡಿದೆವು.

ಪದಾಂತಸಂಧಿಗೆ ನಾಮಪದಂಗಳಲ್ಲಿ–ಅವನ+ಆಳ್ತನಂ=ಅವನಾಳ್ತನಂ; ಕಾಮನ+ಅಂಡಲೆ= ಕಾಮನಂಡಲೆ.

ಕ್ರಿಯಾಪದಂ ಬೆರಕೆಯಾದಲ್ಲಿ—ನುಡಿದರ್+ಅವರ್ = ನುಡಿದರವರ್; ಬೆಸಸಿದೆವು+ಒಳ್ಪಂ= ಬೆಸಸಿದೆವೊಳ್ಪಂ—ಇಂತಱಿವುದು.

ಇದು ಪೂರ್ವಪ್ರಕರಣಮಿಂ ।<br>ತಿದಱೊಳ್ ಸಾಕಲ್ಯಸಂಜ್ಞೆ ಪೇೞವೆನಲ್ವೇ ॥<br>ಡುದಿತ ಪ್ರಕರಣ ಗಣ ಸೂ ।<br>ತ್ರದಿಷ್ಟದಿಂ ಸಂಜ್ಞೆಯೊಡನೆ ಪೇೞಲ್ಪಡುಗುಂ ॥ ೫೧ ॥

ವೃತ್ತಿ.—ಸಂಜ್ಞಾಪ್ರಕರಣಂ ಸಂಪೂರ್ಣಂ.

---

ಟೀಕೆ.—ಇದು, ಪೂರ್ವಪ್ರಕರಣಂ = ಮೊದಲ ಪ್ರಕರಣಂ; ಇಂತು = ಹೀಂಗೆ, ಇದಱೊಳ್=ಈ ಪ್ರಕರಣದಲ್ಲಿ, ಸಾಕಲ್ಯಸಂಜ್ಞೆ=ಸಮಸ್ತಸಂಜ್ಞೆಗಳ್, ಪೇೞವೆನಲ್ವೇಡ=ಹೇೞುತಿಲ್ಲೆನಬೇಡ; ಉದಿತ ಪ್ರಕರಣ ಗಣ ಸೂತ್ರದ=ಉಂಟಾಗಲ್ಪಟ್ಟ ಪ್ರಕರಣದ ಸಮೂಹದ ಸೂತ್ರಂಗಳ, ಇಷ್ಟದಿಂ=ಇಷ್ಟದಿಂದೆ, ಸಂಜ್ಞೆಯೊಡನೆ=ಸಂಜ್ಞೆಯ ಕೂಡೆ, ಪೇೞಲ್ಪಡುಗುಂ=ಹೇಳಲ್ಪಡುವುವು. ॥ ೫೧ ॥

॥ ಸಂಜ್ಞಾಪ್ರಕರಣಂ ಸಮಾಪ್ತಂ. ॥

## II. ಸಂಧಿಪ್ರಕರಣಂ

### ೧. ಸ್ವರಸಂಧಿ

**ಸೂತ್ರಂ ॥** ಸ್ವರಮಿದಿರೊಳಿರೆ ವಿಭಕ್ತಿ ।
ಸ್ವರಕಂ ಪ್ರಕೃತಿಸ್ವರಕ್ಕಮಕ್ಕುಂ ಲೋಪಂ ॥
ವರಸಂಸ್ಕೃತ ಕರ್ಣಾಟಕ ।
ಮೆರಡಱೊಳಂ ನಾಮರೂಢಿಯಱಿಯದ ಪಕ್ಷಂ ॥ ೫೨ ॥

**ವೃತ್ತಿ.**—ಸ್ವರಂ ಪರಮಾಗೆ, ಸಂಸ್ಕೃತದ ಕನ್ನಡದ ವಿಭಕ್ತಿಸ್ವರಕ್ಕಂ ಪ್ರಕೃತಿಯ ಸಹಜಸ್ವರಕ್ಕಂ, ನಾಮಪ್ರಸಿದ್ಧಿ ಕೆಡದ ಪಕ್ಷಂ, ಲೋಪಮಕ್ಕುಂ.

**ಪ್ರಯೋಗಂ.**—ಸಂಸ್ಕೃತಪ್ರಕೃತಿಯ ವಿಭಕ್ತಿಸ್ವರಲೋಪಕ್ಕೆ—ಕ್ರಮದೆ+ ಆಯ್ತು=ಕ್ರಮದಾಯ್ತು; ಇಂದ್ರಂಗೆ+ಐರಾವತಂ=ಇಂದ್ರಂಗೈರಾವತಂ; ಗಿರಿಯತ್ತಣಿಂದೆ+ಇೞಿದಂ=ಗಿರಿಯತ್ತಣಿಂದಿೞಿದಂ; ಗೃಹದಲ್ಲಿ+ಇರ್ದಂ=ಗೃಹದಲ್ಲಿರ್ದಂ; ಈಶ್ವರನ+ಒಲವು=ಈಶ್ವರನೊಲವು.

ವಿಭಕ್ತ್ಯಾದಿ ಕೂಡುವೆಡೆ ಸಂಸ್ಕೃತ ಪ್ರಕೃತಿಸ್ವರ ಲೋಪಕ್ಕೆ—ಬುಧ+ಅರ್= ಬುಧರ್; ಉದ್ಧತ+ಅರ್=ಉದ್ಧತರ್; ದೇವ+ಎಂಬರ್=ದೇವೆಂಬರ್; ರಾಗ+ಇಸು=ರಾಗಿಸು; ಭಂಗ+ಇಸು=ಭಂಗಿಸು; ಭಾವ+ಇಸು=ಭಾವಿಸು—ಇಂತುೞಿದುವನಱಿವುದು.

ಕರ್ಣಾಟಕಪ್ರಕೃತಿಯ ವಿಭಕ್ತಿಸ್ವರಲೋಪಕ್ಕೆ—ನೆಲದಿಂದೆ+ಉಣ್ಬಂ= ನೆಲದಿಂದುಣ್ಬಂ; ಲೇಸಿಂಗೆ+ಒಡೆಯಂ=ಲೇಸಿಂಗೊಡೆಯಂ; ಮರದತ್ತಣಿಂದೆ+ ಇೞಿದಂ=ಮರದತ್ತಣಿಂದಿೞಿದಂ; ಚಲದ+ಆಣ್ಮಂ=ಚಲದಾಣ್ಮಂ; ಪೊಲದಲ್ಲಿ+ಇರ್ದಂ=ಪೊಲದಲ್ಲಿರ್ದಂ; ನೆಲದೆ+ಎತ್ತಿಂದಂ=ನೆಲದೆತ್ತಿಂದಂ.

---

**ಟೀಕೆ.**—ವರ=ಶ್ರೇಷ್ಠವಾದ, ಸಂಸ್ಕೃತಕರ್ಣಾಟಕಂ=ಸಂಸ್ಕೃತಕರ್ಣಾಟಕಂಗಳೆಂಬ, ಎರಡಱೊಳಂ=ಎರಡು ಶಬ್ದದಲ್ಲಿಯುಂ, ನಾಮರೂಢಿ=ನಾಮಪ್ರಸಿದ್ಧಿಯು, ಅಱಿಯದ ಪಕ್ಷಂ=ಕೆಡದಪಕ್ಷದಲ್ಲಿ, ಸ್ವರಂ=ಸ್ವರಾಕ್ಷರಂ, ಇದಿರೊಳ್=ಮುಂದುಗಡೆಯಲ್ಲಿ, ಇರೆ, ವಿಭಕ್ತಿಸ್ವರಕಂ = ವಿಭಕ್ತಿಸ್ವರಕ್ಕೆಯುಂ, ಪ್ರಕೃತಿಸ್ವರಕ್ಕಂ=ಪ್ರಕೃತಿಸ್ವರಕ್ಕೆಯುಂ, ಲೋಪಂ=ಅದರ್ಶನಂ, ಅಕ್ಕುಂ=ಅಪ್ಪುದು. ॥ ೫೨ ॥

ಆಖ್ಯಾತವಿಭಕ್ತಿಸ್ವರ ಲೋಪಕ್ಕೆ—ಮಾಡಿದೆವು+ಒಳ್ಪಂ= ಮಾಡಿದೆವೊಳ್ಪಂ.

ಕ್ರಿಯಾವಿಭಕ್ತಿಯಾದೇಶವಾದ ಸ್ವರದ ಲೋಪಕ್ಕೆ—ಕೂಡಿ + ಇರ್ದಂ= ಕೂಡಿರ್ದಂ; ಪಸಿದು + ಉಣ್ಣಂ= ಪಸಿದುಣ್ಣಂ.

ಕರ್ಣಾಟಕ ಪ್ರಕೃತಿಸ್ವರ ಲೋಪಕ್ಕೆ-(1) ಅಕಾರಕ್ಕೆ—ಅರಸ+ಆಳ್= ಅರಸಾಳ್; ಅಚ್ಚ+ಆನೆ= ಅಚ್ಚಾನೆ; ಜೀಯ+ಎಂಬಂ= ಜೀಯೆಂಬಂ; ಬಡಬಡ+ಆದಂ= ಬಡಬಡಾದಂ; ಸಾವಂತ+ಓಲಗಂ= ಸಾವಂತೋಲಗಂ. (2) ಇಕಾರಕ್ಕೆ—ದಾೞಿಟ್ಟಂ, ಹಂದಿಟ್ಟಂ, ಸವಡಿಟ್ಟಂ. (3) ಉಕಾರಕ್ಕೆ—ಸುತ್ತೋಲೆ, ಹತ್ತೆಂಟು, ಲೇಸೆಲ್ಲಂ, ಸೊವಡೊಂದು. (4) ಎಕಾರಕ್ಕೆ—ಸೇಸಿಕ್ಕಿದಂ, ಮುಡಿಗಿಕ್ಕಿದೆಂ, ಮತ್ತೆಲ್ಲಂ, ಮುನ್ನಿೞಿವಂ.

ನಾಮಂ ಕಿಡುವೊಡೆ ಸಂಸ್ಕೃತ ಕರ್ಣಾಟಕದ ಪ್ರಕೃತಿಸ್ವರಕ್ಕೆ ಲೋಪವಿಲ್ಲ—ಪಟು + ಏಕವಾಕ್ಯಂ= ಪಟುವೇಕವಾಕ್ಯಂ; ವಿಧು+ ಇದು=ವಿಧುವಿದು; ಮಡು+ಇದು=ಮಡುವಿದು; ಕುಡು+ಇಲ್ಲ=ಕುಡುವಿಲ್ಲ.

**ಸೂತ್ರಂ ॥** ಅತ್ವದಿನಿವರ್ಣದಿಂ ಮ ।
ತ್ತೋತ್ವದಿನೈತ್ವದಿನೆವರ್ಣದಿಂ ಮುಂದಕ್ಕುಂ ॥
ಯತ್ವಮುದವಧಾರಣೆ ಪರ ।
ಮತ್ವಂ ಪಿಂತಾಗೆ ಷಷ್ಠಿನಿಯಮದೆ ಯತ್ವಂ ॥ ೫೩ ॥

**ವೃತ್ತಿ.**—ಅ ಇ ಈ ಓ ಐ ಎ ಏ ಎಂಬಿವರ್ಕೆ ಸ್ವರಂ ಪರಮಾಗೆ, ನಡುವೆ ಯತ್ವಮಕ್ಕುಂ; ಷಷ್ಠಿಯಕಾರಂ ಪೆಱಗಿರೆ, ಅವಧಾರಣೆಯೆಕಾರಂ ಪರದೊಳಿರೆ, ನಿಯಮದಿಂ ಯತ್ವಮಕ್ಕುಂ.

**ಪ್ರಯೋಗಂ.**— ಅಕಾರಕ್ಕೆ—ಆಯಿರ್ದ ಮಾಱ್ಕೆಯಿಂ ಪರಮಾಯು

................................................................................

**ಟೀಕೆ.**—ಆ ಸಂಹಿತೆಯೊಳೆಂಬುದನುವರ್ತನೆ ; ಅತ್ವದಿಂ=ಅಕಾರದಿಂದೆ, ಇವರ್ಣದಿಂ=ಇ ಈ ಎಂಬ ಸವರ್ಣದಿಂದೆ, ಮತ್ತೆ=ಬೞಿಕಂ, ಓತ್ವದಿಂ=ಓಕಾರದಿಂದೆ, ಐತ್ವದಿಂ=ಐಕಾರದಿಂದೆ, ಎವರ್ಣದಿಂ=ಎ ಏ ಎಂಬ ಸವರ್ಣದಿಂ, ಮುಂದೆ=ಮುಂದುಗಡೆಯಲ್ಲಿ, ಯತ್ವಂ=ಯಕಾರಂ, ಅದು, ಅಕ್ಕುಂ=ಅಪ್ಪುದು; ಅವಧಾರಣೆ=ನಿರ್ಧಾರಣೆಯ ಎಕಾರಂ, ಪರಂ=ಮುಂದಣದು, ಅತ್ವಂ=ಅಕಾರಂ, ಪಿಂತು=ಹಿಂದು, ಆಗೆ, ಷಷ್ಠಿ=ಷಷ್ಠಿಯೆಂಬ ವಿಭಕ್ತಿಯ, ನಿಯಮದೆ = ಕಟ್ಟಿನಿಂದೆ, ಯತ್ವಂ=ಯಕಾರಂ ಅಪ್ಪುದು. ॥ ೫೩ ॥

ಷ್ಯಾಂತಂಬರಂ. ಕಾಯಲುಂ ಬಲಗರ್ವದಿಂ ನೆಲವೆಲ್ಲಮಂ. ಸಾಯಲೆವೇಡಿ ತಾನೀಯನೆ ಧರೆಯಂ ಗಾಂಗೇಯ ಕೇಳ್.

ಇತ್ವಕ್ಕೆ—ಕವಿಯಾರ್; ನಿಷ್ಕಾಮಿಯಾವಳ್; ಬಲಿಯಂ ಬೇಡುಗುಮೆಂದು ಕಟ್ಟಿವಲಗಂ ಕಿಟ್ಟಿರ್ದ; ಪಿಡಿಯೆಂದಸಿತಾಳಪತ್ರಮಂ ಜತಿಯಿತ್ತಂ.

ಈಕಾರಕ್ಕೆ—ಈಯಲ್ಬಂದತ್ತು ಕಲ್ಪಾಂಘ್ರಿಪಮಭಿಮತಮಂ. ಶ್ರೀಯಂ ಪೂರ್ವಾರ್ಜಿತ ಪುಣ್ಯಾಯತ್ತದಿನಱಿಸಿ ಕಾಣ್ಬವೊಲ್ ಕಂಡಂ. ಸ್ತ್ರೀಯೆಂಬ ನಾಡೆಯೆಂಬನ್ಯಾಯದ ಕೊಲೆಯೆಂಬ.

ಓಕಾರಕ್ಕೆ—ಅಮರಾಂಗನೆಯರ್ ಜೋಯೆಂದು ಪಾಡಿದರ್ ಜೋಗುಳಮಂ. ಅಬ್ರಹ್ಮಣ್ಯಂ ಭೋಯೆನಲುಂ ಬ್ರಾಹ್ಮಣರವಿಧೋಯೆನಲುಂ. ನೋಯಿಸಿದಂ; ತೋಯಲುಂ ಹಿಂಡಲುಂ.

ಐಕಾರಕ್ಕೆ—ದೈಯೆಂದಂ; ರೈಯೊದವಿತ್ತು; ಒದೆದದ್ರಿಕ್ಷಿತಿಸಂಧಿ ಪತ್ತುವಿಡೆ ಭೈಭೈಯೆಂಬಿನಂ ಕಿಟ್ಟು.

ಎಕಾರಕ್ಕೆ—ತೊಱೆಯಂ ಪಾಯ್ದೆತ್ತಿ ಬಂದಂ ಗಡ ಮಸಗಿ ಜರಾಸಂಧ ಭೂಪಂ. ಪಸೆಯಿರ್ದಂ ಗರುಡವೇಗನೃಪ ನಂದನೆಯೊಳ್. ನಡೆನಡೆಯೆಂದೇಂ ನಡೆದುದೊ.

ಏಕಾರಕ್ಕೆ—ತೇಯಿಸಿದಂ, ಮೇಯಿಸಿದಂ, ಏಯೆಂದಂ; ಭೋಂಕನೆ ದೇವಸ್ತ್ರೀಯರಾರಾತ್ರಿಕಮನುಘೆಯುಘೇಯೆಂದು ತಂಬೆತ್ತುತಿರ್ದ್ದರ್.

ಅವಧಾರಣೆಗೆ–ಆತನಯೆ ತೋರದೊಡೆಗಳಿವಾತನನಿಡಿದೋಳ್. ಅವಳಯೆ, ಅದಱಯೆ.

ಸೂತ್ರಂ ॥ ಸದಮಳ ಸಂಸ್ಕೃತ ಕರ್ಣಾ।
ಟದದಂತಪ್ರಕೃತಿಗಳ್ಗಿಸುಪ್ರತ್ಯಯಮಿಂ ॥
ತಿದಿರಾಗೆ ಯತ್ವಮನುಕೃತಿ।
ಪದಕಂ ಮುಂದನುಕೃತಿಸ್ವರಂ ನಿಲೆ ಯತ್ವಂ ॥ ೫೪ ॥

---

ಟೀಕೆ.—ಸತ್=ಲೇಸಾದ, ಅಮಳ=ನಿರ್ಮಲವಾದ, ಸಂಸ್ಕೃತ=ಸಂಸ್ಕೃತದ, ಕರ್ಣಾಟದ=ಕನ್ನಡದ, ಅದಂತಪ್ರಕೃತಿಗಳ್ಗೆ=ಅಕಾರಾಂತವಾದ ಪ್ರಕೃತಿಗಳ್ಗೆ, ಇಸುಪ್ರತ್ಯಯಂ=ಇಸು ಎಂಬ ಪ್ರತ್ಯಯಂ, ಇಂತು=ಹೀಂಗೆ, ಇದಿರಾಗೆ=ಪರವಾಗೆ, ಯತ್ವಂ=ಯಕಾರವಪ್ಪುದು; ಅನುಕೃತಿ ಪದಕಂ = ಅನುಕರಣ ಪದಕ್ಕೆ

**ವೃತ್ತಿ.**—ಅಮಳತರ ಸಂಸ್ಕೃತಕರ್ಣಾಟದಕಾರಾಂತಪ್ರಕೃತಿಗಳ್ಗೆ ಇಸು ಪ್ರತ್ಯಯಂ ಪರಮಾಗೆ, ನಡುವೆ ಯತ್ವಮಕ್ಕುಂ; ಅದಂತಮಪ್ಪನುಕೃತಿಪದಕ್ಕೆ ಅನುಕೃತಿಸ್ವರಂ ಪರಮಾಗೆ, ಯತ್ವಂ.

**ಪ್ರಯೋಗಂ.**—ಸಂಸ್ಕೃತಶಬ್ದದಲ್ಲಿ—ಶುದ್ಧ + ಇಸಿದಂ= ಶುದ್ಧಯಿಸಿದಂ; ತಾರ + ಇಸಿದಂ= ತಾರಯಿಸಿದಂ ; ನಿರ್ಣ (?) + ಇಸಿದಂ= ನಿರ್ಣಯಿಸಿದಂ ; ಪೂರ + ಇಸಿದಂ= ಪೂರಯಿಸಿದಂ.

ಕನ್ನಡಶಬ್ದದಲ್ಲಿ—ಓರೆ + ಇಸಿದಂ = ಓರೆಯಿಸಿದಂ; ತೇರಯಿಸಿದಂ; ತೆಲ್ಲಯಿಸಿದಂ; ಮೇಳಯಿಸಿದಂ.

ಅನುಕೃತಿಸ್ವರಕ್ಕೆ—ಪಟಪಟಯೆಂದಾಲಿಕಲ್ಗಳುದಿರ್ದುವು ನಭದಿಂ. ಗುಟುಗುಟು ಗಟಗಟಯೆನುತುಂ ಪರಿವ ಪರಿವೊನಲ್ ಸೊಗಯಿಸುಗುಂ.

**ಸೂತ್ರಂ ॥** ಅವತರಿಸಿರ್ಕುಮುವರ್ಣದ ।
ಋವರ್ಣದೋತ್ವೌತ್ವದಗ್ರದೊಳ್ ಸ್ವರಮಿರೆ ವ ॥
ತ್ವವಿಧಾನಂ ಬಹುಳತೆ ಯ ।
ತ್ವ ವತ್ವದೊಳ್ ಸಂಸ್ಕೃತಕ್ಕೆ ತಾನಿಲ್ಲೆಂದುಂ ॥ ೫೫ ॥

**ವೃತ್ತಿ.**—ಉ ಊ ಋ ೠ ಓ ಔ ಎಂಬಿವರ್ಕೆ ಸ್ವರಂ ಪರಮಾಗೆ ನಡುವೆ ವತ್ವಂ; ಸಂಸ್ಕೃತದೊಳ್ ಯತ್ವವತ್ವಂಗಳ್ಗೆ ಬಹುಳತ್ವಮಿಲ್ಲ, ನಿತ್ಯಂ. *

---

ಯುಂ, ಮುಂದೆ= ಮುಂದುಗಡೆಯಲ್ಲಿ, ಅನುಕೃತಿಸ್ವರಂ= ಅನುಕರಣವಂ ಪೇಳ್ವ ಸ್ವರಂ, ನಿಲೆ= ನೆಲಸೆ, ಯತ್ವಂ= ಯಕಾರವಪ್ಪುದು. ॥ ೫೪ ॥

**ಟೀಕೆ.**—ಉವರ್ಣದ= ಉ ಊ ಎಂಬ ಸವರ್ಣದ, ಋವರ್ಣದ= ಋ ೠ ಎಂಬ ಸವರ್ಣದ, ಓತ್ವೌತ್ವದ= ಓಕಾರ ಔಕಾರದ, ಅಗ್ರದೊಳ್= ಮುಂದೆ, ಸ್ವರಂ= ಸ್ವರಾಕ್ಷರಂ, ಇರೆ, ವತ್ವವಿಧಾನಂ= ವಕಾರದ ವಿಧಾನಂ, ಅವತರಿಸಿರ್ಕುಂ= ಹುಟ್ಟಿರ್ಪುದು; ಸಂಸ್ಕೃತಕ್ಕೆ= ಸಂಸ್ಕೃತಶಬ್ದಕ್ಕೆ, ಯತ್ವ ವತ್ವದೊಳ್= ಯತ್ವಸಂಧಿ ವತ್ವಸಂಧಿಗಳಲ್ಲಿ, ಬಹುಳತೆ= ಬಹುಳತ್ವಂ, ತಾಂ, ಎಂದುಂ= ಆವಾಗಳುಂ, ಇಲ್ಲ= ಉಂಟಾಗದು. ॥ ೫೫ ॥

* **ವಿಚಾರಂ.**—ಕನ್ನಡದ ಶಬ್ದದಲ್ಲಿ ಯತ್ವವತ್ವಸಂಧಿಗಳಲ್ಲಿ ಬಹುಳತ್ವಮುಂಟೆಂಬುದರ್ಥಂ. ಅತ್ವದಿನಿವರ್ಣದಿಂ ಮತ್ತೋತ್ವದಿನೈತ್ವದಿನೆವರ್ಣದಿಂ ಮುಂದಕ್ಕುಂ ಯತ್ವಂ (ಸೂ ॥೫೪॥); ಉವರ್ಣದ ಋವರ್ಣದೋತ್ವೌತ್ವದಗ್ರದೊಳ್ ಸ್ವರಮಿರೆ ವತ್ವ ವಿಧಾನವೆಂಬ ಈ ಯತ್ವಸಂಧಿ ವತ್ವಸಂಧಿಗಳಲ್ಲಿ ವಿಚಾರಮುಂಟು; ಅತ್ವಮದೆಂತೆಂದೊಡೆ—

ಪ್ರಯೋಗಂ.—ಉಕಾರಕ್ಕೆ—ಕುಡುವುದು ಕೂರ್ಮೆಯಲ್ಲಿ; ಮನುವಿನ ಮಾರ್ಗಂ ಸುರಗುರುವಿನಱಿವು; ನೆಗೞ್ದಿನಾ ವಿಭುವಿಳೆಯೊಳ್.

ಊಕಾರಕ್ಕೆ—ಪೂವಿನ ಬಿಲ್ಲ ಕೊಪ್ಪನೊಡೆದೇಱಿಸಿ ತಾವರೆ ನೂಲ ನಾರಿಯಂ. ಲಲಿತಭ್ರೂವಂಗಜನಿಕ್ಷುಚಾಪ ಸಹಚರಮಕ್ಕುಂ.

ಋಕಾರಕ್ಕೆ—ಹೋತೃವೆಯಾನ್ ಅಧ್ವರಿಯೈ ಭ್ರಾತೃವೆ ನೀನ್ ಉೞಿದ ಋತ್ವಿಜರ್. ಕರ್ತೃವಾದಂದಿನಿತತಿಶಯಮುಂ ತಾಳ್ದದೀ ಕನ್ನೆಯುಂದಂ.

ೠಕಾರಕ್ಕೆ—ೠವೆಂದಂ; ೠವಿತ್ತಂ.

ಓಕಾರಕ್ಕೆ—ಗೋವಿನ ಹಿಂಡು; ಗೋವಂ (ಗೋ+ಅಂ); ಗೋವೀವಂ.

ಔಕಾರಕ್ಕೆ—ನೌವನೇಱಿದಂ; ಗ್ಲೌವಂ ನೋಡಿದಂ; ಚೌವಿವಂ (?).

ಇ ಈ ಎಂಬಕ್ಕರಂಗಳನುಕರಿಸಿ ತೋಱುವಲ್ಲಿಯುಂ ನಡುವೆ ವತ್ವಂ— ಈವಿವು ಗ್ರಂಥಂಗಳ್; ಈವಿದು ಗ್ರಂಥಂ.

ಕನ್ನಡದೊಳ್ ಯತ್ವವತ್ವಂಗಳ್ಗೆ ಬಹುಳತೆಯಿಂ ಲೋಪಮುಂಟು— ಒತ್ತೆ+ಇಟ್ಟಂ= ಒತ್ತಿಟ್ಟಂ (ಅಥವಾ) ಒತ್ತೆಯಿಟ್ಟಂ; ಒತ್ತಿಟ್ಟಿರುಳೀಕೆಯ ಕೈತವಕಂಜಿ ಪೊಱಮಟ್ಟರ್ದಂ; ತಗವೆಯಪ್ಪೊಡೆ, ತಗವಪ್ಪೊಡೆ; ಮಾತು+ ಎಲ್ಲಂ=ಮಾತುವೆಲ್ಲಂ; ಮಾತೆಲ್ಲಂ ಪೊಲೆಸೂರುಳ್; ಸೊವಡು+ಒಂದು= ಸೊವಡುವೊಂದು, ಸೊವಡೊಂದು.

ಸಂಸ್ಕೃತದ ನಿತ್ಯಕ್ಕೆ—ನದಿಯೆಲ್ಲಂ, ಸುರಸಿಂಧುವೆ, ವಿಧುವಿಲ್ಲದರುಳ್.

ಕಂ॥ ವಿಧುವಿಲ್ಲದಿರುಳ್ ತನ್ನಯೆ ।
ವಧುವಿಲ್ಲದ ಲೀಲೆ ಮಧುರ ಮಧುವಿಲ್ಲದ ಪೂ ॥
ದಧಿ ಯಿಲ್ಲದುಣಿಸದೇವುದೊ ।
ಬುಧರಿಲ್ಲದ ಸಭೆ ಸರಸ್ವತೀಮುಖತಿಲಕಾ॥

ಇಂತಱಿವುದು

.............................................................................................

ಶಬ್ದಾನುಶಾಸನದಲ್ಲಿ (೧ನೆಯ ಪಾದದ ೩೪ನೆಯ ಸೂತ್ರಂ)॥ ಆತ ಓಷ್ಠ್ಯೇ (ಸ್ವರೇ ಪರೇ ಆಕಾರಸ್ಯ ವಗ್ಭವತಿ)॥ ಎಂದುದಾಗಿ ಆಕಾರಕ್ಕೆ ಓಷ್ಠ್ಯಸ್ವರಂ ಪರಮಾಗೆ, ವತ್ವಸಂಧಿ ಯಾಗುವುದು—ಆ+ಉದಕಂ=ಆವುದಕಂ; ಆ+ಊರ್=ಆವೂರ್; ಆವೂಟಂ, ಆವೊಲೆ, ಆವೋಲೆ—ಎಂಬಂತೆ ಓಷ್ಠ್ಯಗ್ರಹಣದಿಂ ಕಂಠೌಷ್ಠ್ಯಮುಂ ಸಂಗ್ರಹಿಸಲ್ಪಟ್ಟಪುದು. 1)

1) ಉ, ಊ=ಓಷ್ಠ್ಯಂಗಳ್; ಒ, ಓ, ಔ=ಕಂಠೌಷ್ಠ್ಯಂಗಳ್.

**ಸೂತ್ರಂ** ॥ ಅವಿಕೃತಿಗಳೆವರ್ಣಮೊವ।
ರ್ಣವಂತ್ಯವೆನಿಸಿದ ನಿಪಾತಮವಧಾರಣೆ ತ॥
ಳ್ತ ವಿಶಂಕೆಗಳೆಂಬಿವಱೊಳ್।
ವ್ಯವಹರಿಸದು ಸಂಧಿಯಾ ಪ್ಲುತಕ್ಕಮಭಾವಂ ॥ ೫೬ ॥

**ವೃತ್ತಿ.**—ನಿರ್ವಿಕಾರಿಗಳಪ್ಪ ಎ ಏ, ಒ ಓ ಎಂಬಿವು ಕಡೆಯಾದ ನಿಪಾತಮುಂ ಅವಧಾರಣೆಯುಂ ವಿಶಂಕೆಯುಂ ಎಂಬಿವರ್ಕೆ ಸ್ವರಂ ಪರಮಾಗೆ, ಸಂಧಿಯಿಲ್ಲ; ಪ್ಲುತಕ್ಕಮಂತೆ ಸಂಧಿಯಿಲ್ಲ.

**ಪ್ರಯೋಗಂ.**—ನಿಪಾತಕ್ಕೆ–ಎಲೆ ಇದಲ್ತೆ ತುಹಿನಕ್ಷೋಣೀಧ್ರದುತ್ತುಂಗ ಸಾನುಗಳ್. ಅರೆ ಎಡೆ ಹಸ್ತಿಶಿಕ್ಷಣವಿಚಕ್ಷಣರಿಂದರೆ ಎಡೆ ಅಶ್ವಶಿಕ್ಷೆಯಿಂ; ಒಹೋ ಇರಲಿಂ ಪೆಱವಱ ಮಾಹಾತ್ಮ್ಯಮುಂ.

ಕಂ॥ ಅರಮೆ ಅರಲ್ದ ಬಯಲ್ದಾ।
ವರೆಗಳ ಪೊದಱುಗಳೊಳ್ ಅರಮೆ ಎಳದಳಿರ ಲತಾಂ॥
ತರದೊಳವಿದವಿದು ಕಾಡುಗು।
ವಿುರುಳಪ್ಪಿನವುಱಸುವಿನಿಯಳಿಂ ಚಕ್ರಾಹ್ವಂ॥

ಅವಧಾರಣೆಗೆ—

ಕಂ॥ ನುಡಿದನೆ ಕಾವುದನೇ ಎರ್ದೆ।
ಗಿಡದಿರು ಜವನಿಟ್ಟರಕ್ಕೆ ನಿನಗೀವುದನೇಂ॥
ನುಡಿದನೆ ಅದು ಕಯ್ಯದು ಮೇಣ್।
ನುಡಿದುದು ತಪ್ಪುಗುಮೆ ಗಂಗಚೂಡಾಮಣಿಯಾ॥

............ಧನಮುಳ್ಳನಾವನಂ।
ತಾತನೆ ಇಂದ್ರನಾತನೆ ಗುಹೋನ್ನತನಾತನೆ ಅಂಬುಜೋದರಂ॥

ವಿಶಂಕೆಗೆ—ಇನಿಯನೆ? ಬೆಲ್ಲದಿಂದಿನಿಯನೀವನೆ? ಅಃ ಪಿರಿದೀವನಿತ್ತುದಂ ನೆನೆವನೆ? ಚಿಃ ಅದಂ ನೆನೆಯಂ. ಆನೆಯೊ ಅದ್ರಿಯೊ? ಗುರುವಿಲ್ಲಾ ಕರ್ಣನಿಲ್ಲಾ ಗುರುವಿನ ಮಗನಿಲ್ಲಾ ಎನ್ನರೆ ಎನ್ನನಿನಿಯಂ ಕವಿರಾಜಕುಂಜರಂ.

---

**ಟೀಕೆ.**—ಅವಿಕೃತಿಗಳ್=ನಿರ್ವಿಕಾರಿಗಳಾದ, ಎವರ್ಣಂ=ಎ ಏ ಎಂಬ ಸವರ್ಣಂ, ಒವರ್ಣಂ=ಒ ಓ ಎಂಬ ಸವರ್ಣಂ, ಅಂತ್ಯಂ=ಕಡೆ, ಎನಿಸಿದ ನಿಪಾತಂ=ಎನಿಸಿದ ನಿಪಾತಾವ್ಯಯಂ, ಅವಧಾರಣೆ=ನಿರ್ಧಾರಣೆಯ ಎಕಾರಂ, ತಳ್ತ=ಪೊರ್ದುಗೆಯಾದ, ವಿಶಂಕೆಗಳ್, ಎಂಬಿವಱೊಳ್=ಎಂಬಿವಱಲ್ಲಿ, ಸಂಧಿ=ಸಂಹಿತೆ, ವ್ಯವಹರಿಸದು=ಬಾರದು; ಆ ಪ್ಲುತಕ್ಕಂ=ಆ ಮೂರು ಮಾತ್ರೆಯನುಳ್ಳ ಪ್ಲುತಕ್ಕಂ, ಅಭಾವಂ=ಸಂಧಿಯಿಲ್ಲ. ॥ ೫೬ ॥

ಪ್ಲುತಕ್ಕೆ— ಕು ಕೂ ಕೋ ಎಂದು ಕೋೞಿ ಕೂಗಿದುವಾಗಳ್; ಹಾ ರಾಮಾೕ ಎಂದು, ಸೀತೆ ಬಾಯೞಿದತ್ತಿಳ್.

ಸೂತ್ರಂ ॥ ಮೆಚ್ಚಿನೊಳಾಕ್ಷೇಪಕದೊಳ್ ।
ಬೆಚ್ಚೋೕವಭ್ಯುಪಗಮಾರ್ಥದೆಮುಶಬ್ದಂ ಕ ॥
ಟ್ಟಚ್ಚರಿಯ ಗಡಾರ್ಥಾತ್ವಂ ।
ಬಿಚ್ಚಿರ್ಕುಂ ಸ್ವರಮವಿದಿರೊಳಿರೆ ಖೇದದೊಳಂ ॥ ೫೭ ॥

ವೃತ್ತಿ.—ಮೆಚ್ಚಿನೊಳ್ ಆಕ್ಷೇಪಕದೊಳ್ ನೆಲಸಿರ್ದ ಓಕಾರಕ್ಕಂ, ಅಂಗೀಕಾರಾರ್ಥದ ಎಮುಶಬ್ದಕ್ಕಂ, ಗಡಾರ್ಥಕ್ಕಾದೇಶವಾದಾಕಾರಕ್ಕಂ, ಸ್ವರಂ ಪರಮಾಗೆ ಸಂಧಿಯಿಲ್ಲ; ಖೇದದೊಳಮಂತೆ ಸಂಧಿಯಿಲ್ಲ.

ಪ್ರಯೋಗಂ.—ಮೆಚ್ಚಿಂಗೆ—ಎಂತೆಂತೋ ಅಃ ಕಬ್ಬವೊಳ್ಳಿತ್ತಾಯ್ತು; ಏನೇನೋ ಓದಿನ ಪರಿ ಲೇಸು ಲೇಸು.

ಆಕ್ಷೇಪಕ್ಕೆ—ಎಡಱಿದನೋ ಅವನ ನೊಸಲಕ್ಕರವಂ ತೊಡೆದುದಕ್ಕುಂ; ಮುತ್ತಿದನೋ ಇಂದೆ ಕೋಂಟೆ ಧೂಳೀಪಟ್ಟಂ.

ಎಮುಶಬ್ದಕ್ಕೆ—ನಿಮಗಕ್ಕೆಮು ಅಬ್ಜಗರ್ಭನಾಯುಂ ಶ್ರೀಯುಂ; ಸಿಂಗಮುಕ್ಕೆಮು ಅಂಜೆಂ.

ಗಡಾರ್ಥದಾಕಾರಕ್ಕೆ—ಪಾಲಾ ಅಮರ್ದಾ ಇನಿದು ಗಡಾ ಆನಾ ಇಮ್ಮಡಿಯಾ ಎರಟ್ಟಿಕ್ಕಿದುರೆಯಾ ಇರ್ಬರ್ಗೆರಟ್ಟಿಕ್ಕಿದುವಾ!

ಖೇದಕ್ಕೆ—ಅಯ್ಯೋ ಅಕ್ಕಟಾ ಇಂದ್ರಂಗೆ ಕೇಡಾಯ್ತು!

ಸೂತ್ರಂ ॥ ಪೂಱಗೊಳಗು ಪೊಸತು ಪೞದೆಳ ।
ದೞಿಕೆಯದಂತತೆಯನಾ ಸಮಾಸಾಂತರದೊಳ್ ॥
ನೆೞೆ ತಾಳ್ದು ಸಂಧಿಯಾನವು ।
ತೞಿಸಂದಿದಿರೊಳ್ ಸ್ವರಂಗಳಾವುವು ನಿಲೆಯುಂ ॥ ೫೮ ॥

---

ಟೀಕೆ.—ಮೆಚ್ಚಿನೊಳ್ = ಮೆಚ್ಚಿನಲ್ಲಿ, ಆಕ್ಷೇಪಕದೊಳ್ = ಆಕ್ಷೇಪಕದಲ್ಲಿ, ಬೆಚ್ಚೋ=ಬೆಚ್ಚುಬೆಸುಗೆಯಾದ ಓಕಾರಂ, ಅಭ್ಯುಪಗಮಾರ್ಥದ=ಅಂಗೀಕಾರಾರ್ಥದ, ಎಮುಶಬ್ದಂ=ಎಮು ಎಂಬ ಶಬ್ದಂ, ಕಟ್ಟಚ್ಚರಿಯ=ಕಡಿದಾದಾಶ್ಚರ್ಯದ, ಗಡಾರ್ಥಾತ್ವಂ=ಗಡಾರ್ಥದ ಆಕಾರಂ, ಸ್ವರಂ=ಸ್ವರಾಕ್ಷರಂ,ಅವು, ಇದಿರೊಳ್=ಮುಂದೆ, ಇರೆ, ಖೇದದೊಳಂ=ದುಃಖದಲ್ಲಿಯುಂ, ಬಿಚ್ಚಿರ್ಕುಂ=ಸಂಧಿ ಬಿಚ್ಚಿರ್ಪುದು. ॥೫೭॥

**ವೃತ್ತಿ.**—ಪೊಱಗು ಒಳಗು ಪೊಸತು ಪೞದು ಎಳದು ಎಂಬಿವರ್ಕೆ ಸಮಾಸವಿಷಯದೊಳುಪಾಂತಾಕ್ಷರಕ್ಕೆ ಲೋಪವಾಗಿ, ಅಕಾರಾಂತತೆಯನ್ನೆೈದಿ ನಿಪಾತದಂತೆ, ಪರದೊಳ್ ಸ್ವರಮಾವುವಿರ್ದೊಡಂ, ಸಂಧಿ ಇಲ್ಲ.

**ಪ್ರಯೊಗಂ.**—ಪೊಱ ಅಡಿ, ಒಳ ಅಟ್ಟಂ, ಪೊಸ ಅಡಕೆ, ಪೞ ಅಲಗು, ಎಳ ಅಂಚೆ.

**ಸೂತ್ರಂ** ॥ ಪರಪದಪೂರ್ವಂ ದ್ವಿತ್ವಾ ।
ಕ್ಷರಮಾಗಿರೆ ಪೂರ್ವಪದದ ಚರಮುಂ ಹ್ರಸ್ವಾ ॥
ಕ್ಷರಮಾಗೆ ಸಂಧಿ ದೋಷಂ ।
ಸರೇಫಮಿದಿರಾಗೆ ಶಿಥಿಲಮೆಂದನುಸರಿಪರ್ ॥ ೫೯ ॥

**ವೃತ್ತಿ.**—ಪರಪದದ ಮೊದಲಕ್ಕರಂ ದಿತ್ವಮಾಗಿರೆ, ಪೂರ್ವಪದದ ಕಡೆ ಯಕ್ಕರಂ ಲಘುವಾಗಿರೆ, ಸಂಧಿ ದೋಷಮಕ್ಕುಂ. ಛಂದೋವಿಷಯದೊಳ್ ಪರಪದದ ಪೂರ್ವಾಕ್ಷರಂ ರೇಫೆವೆರಸಿರ್ದೊಡಂ, ಶಿಥಿಲಮಾಗಲಾರ್ಪುದೆಂದು ಕೆಲಂಬರದನಂಗೀಕರಿಸುವರ್.

**ಪ್ರಯೋಗಂ.**—ಸಂಧಿದೋಷಕ್ಕೆ—

ಕಂ ॥ ಬರಿಸಿ ಪ್ರಧಾನರಂ ಕು ।
ಳ್ಳಿರಿಸಿ ಪ್ರಿಯ ಕುಶಲವಾರ್ತೆಯಂ ನೆಱೆ ಕೇಳ್ದು ॥
ಸ್ಥಿರವಿದ್ರ್ದ ಪ್ರಭು ನುಡಿಯೆ ।
ಪ್ರರೂಢಮುದನಾದನಾತನೆಂಬುದಮಾರ್ಗಂ ॥

---

**ಟೀಕೆ.**—ಪೊಱಗು=ಪೊಱಗೆಂಬ ಶಬ್ದಂ, ಒಳಗು=ಒಳಗೆಂಬ ಶಬ್ದಂ, ಪೊಸ ತು=ಪೊಸತೆಂಬ ಶಬ್ದಂ, ಪೞದು=ಪೞದೆಂಬ ಶಬ್ದಂ, ಎಳದು=ಎಳದೆಂಬ ಶಬ್ದಂ, ಅಱಕೆಯ=ಉಪಾಂತದ ಅಕ್ಷರಕ್ಕೆ ಲೋಪವಾಗಿ ಅಕಾರವಂ ಪಡೆವುದೆಂಬ ಅಱಕೆಯು, ಅದಂತತೆಯಂ=ಅಕಾರಾಂತತ್ವಮಂ, ಆ ಸಮಾಸಾಂತರದೊಳ್=ಆ ಸಮಾಸಮಧ್ಯ ದಲ್ಲಿ, ನೆಱೆ=ಚೆನ್ನಾಗಿ, ತಾಳ್ದು = ಧರಿಸಿ, ಇದಿರೊಳ್=ಮುಂದುಗಡೆಯಲ್ಲಿ, ತಱು ಸಂದು=ಚೆನ್ನಾಗಿ ಸಂದು, ಸ್ವರಂಗಳ್=ಸ್ವರಾಕ್ಷರಂಗಳ್, ಅವುವು, ನಿಲೆಯುಂ=ನೆಲೆ ಗೊಂಡಿರೆಯುಂ, ಸಂಧಿಯಾನವು=ಸಂಹಿತೆಯಂ ಪಡೆಯವು. ॥ ೫೮ ॥

**ಟೀಕೆ.**—ಪರಪದ=ಮುಂದಣ ಪದದ, ಪೂರ್ವಂ=ಮೊದಲಕ್ಷರಂ, ದ್ವಿತಾ ಕ್ಷರಂ= ಒತ್ತಿನಕ್ಷರಂ, ಆಗಿ, ಇರೆ, ಪೂರ್ವಪದದ = ಮೊದಲ ಪದದ, ಚರ ಮುಂ=ಅಂತ್ಯಂ, ಹ್ರಸ್ವಾಕ್ಷರಂ = ಹ್ರಸ್ವವಾದಕ್ಷರಂ; ಆಗೆ, ಸಂಧಿ ದೋಷಂ = ಸಂಧಿ ದೋಷವಪ್ಪುದು; ಸರೇಫಂ=ರೇಫೆಯೊಡನೆ ಕೂಡಿದಕ್ಷರಂ, ಇದಿರಾಗೆ=ಮುಂದಾಗೆ, ಶಿಥಿಲಮೆಂದು=ಶಿಥಿಲವಾಗುವುದೆಂದು, ಅನುಸರಿಪರ್=ಅಂಗೀಕರಿಸುವರ್. ॥ ೫೯ ॥

ಸರೇಫಸಂಯೋಗಕ್ಕೆ—ಮಿಱುಗುತ್ತಿರ್ಪ ತ್ರಿಶೂಲದಿಂ ಪ್ರಣಯದೆ ತ್ರಿಪಥಗೆ ನಡೆತರೆ ತ್ರಿಣೇತ್ರನೊಲವಿಂದೆ ತಾಳ್ದಿದಂ ಮಸ್ತಕದೊಳ್.

ಸೂತ್ರಂ॥ * ಬಗೆಯದೆ ಸತೃಣಾಭ್ಯವಹಾ।
ರಿಗಳುಸಿರ್ವರ್ಗದ್ಯಕಾವ್ಯದೊಳ್ ನಿರ್ಬಂಧಂ॥
ಪುಗದೆಂದರೋಚಿಗಳದಂ।
ತೆಗಟಿಂದಾ ಗದ್ಯಪದ್ಯಕಾವ್ಯದೊಳಿಕ್ಕರ್ ॥ ೬೦ ॥

* ವೃತ್ತಿ.—ಸರೇಫಮಿದಿರಾಗೆ ಶಿಥಿಲಮಪ್ಪುದೆಂಬ ಸಂಧಿಯನಜ್ಞರ್ ಗದ್ಯ ಕಾವ್ಯದೊಳ್ಳೈಚ್ಛಿಕವೆಂಬರ್; ಪ್ರಾಜ್ಞರದಂ ದೂಷ್ಯಮೆಂದು ಪದ್ಯಕಾವ್ಯದೊಳೆಂ ತಂತೆ ಗದ್ಯಕಾವ್ಯದೊಳಂ ಪ್ರಯೋಗಿಸರ್.

ಸೂತ್ರಂ॥ ಕರೆಗತ್ವದಿರ್ಗೆಯಲ್ಲದೆ।
ಪರಮಿರೆ ಪದ್ಯಾರ್ಥ ವಾಕ್ಯವೇಷ್ಪನದೆಡೆಗಂ॥
ಸ್ಫುರದನುಕೃತಿಗಂ ಸ್ವರಮವು।
ಪರಮಿರೆ ಋತ್ವಕ್ಕಮಂತೆ ಸಂಧಿವಿಕಲ್ಪಂ ॥ ೬೧ ॥

ವೃತ್ತಿ.—ಕರೆಯೆಂಬ ಶಬ್ದಕ್ಕೆ ಅಲ್ ಪರಮಾದೊಡಂ, ಅದಂತಮಾದ ಇರ್ಗೆ ಅದೆ ಪರಮಾದೊಡಂ, ಪದ್ಯಾರ್ಥಕ್ಕಂ ವಾಕ್ಯವೇಷ್ಪನಕ್ಕಂ ಅನುಕರಣೆಗಂ ಸ್ವರಂ ಪರಮಾದೊಡಂ, ಸಂಧಿ ವಿಕಲ್ಪಂ; ಋಕಾರಂ ಪರಮಾದೊಡಮಂತೆ ಕ್ರಮಂ.

..........

ಟೀಕೆ.—ಸತೃಣ=ತೃಣದೊಡನೆ ಕೂಡಿದ, ಅಭ್ಯವಹಾರಿಗಳ್=ಆಹಾರವನುಳ್ಳ ಕವಿಗಳ್, ಗದ್ಯಕಾವ್ಯದೊಳ್=ಗದ್ಯಕಾವ್ಯದಲ್ಲಿ, ನಿರ್ಬಂಧಂ=ಬಲಾತ್ಕಾರಂ, ಪುಗ ದೆಂದು=ಪ್ರವೇಶವಾಗದೆಂದು, ಬಗೆಯದೆ=ವಿಚಾರಿಸದೆ, ಅದಂ=ಆ ಸರೇಫಮಿದಿರಾಗೆ ಶಿಥಿಲಮಪ್ಪುದೆಂಬ ಸಂಧಿಯುಂ, ಉಸಿರ್ವರ್=ಪೇಳ್ವರ್; ಅರೋಚಿಗಳ್=ಹೇಯ ಬುದ್ಧಿಯುಳ್ಳವರ್, ಅದಂ=ಆ ಸಂಧಿಯುಂ, ತೆಗಟಿಂದು=ನಿಂದೆ ಬರ್ಪುದೆಂದು, ಆ ಗದ್ಯಪದ್ಯ ಕಾವ್ಯದೊಳ್=ಆ ಗದ್ಯಕಾವ್ಯ ಪದ್ಯಕಾವ್ಯಂಗಳಲ್ಲಿ, ಇಕ್ಕರ್=ಪೇೞರ್. ॥೬೦॥

ಟೀಕೆ.—ಕರೆಗೆ=ಕರೆಯೆಂಬ ಧಾತುವಿಂಗೆ, ಅತ್ವದ=ಅಕಾರದ, ಇರ್ಗೆ= ಇರೆಂಬ ಧಾತುವಿಂಗೆ, ಅಲ್=ಅಲ್ ಎಂಬುದು, ಅದೆ=ಅದೆ ಎಂಬುದು, ಪರಮಿರೆ=ಪರ

---

* ಸೂಚನೆ:—ಈ ಸೂತ್ರಕ್ಕೆ ವೃತ್ತಿಯು ಮುದ್ರಿತವಾದ ಪ್ರತಿಗಳಲ್ಲಿಯೂ ನಮಗೆ ದೊರೆತಿರುವ ಓಲೆಯ ಪ್ರತಿಗಳಲ್ಲಿಯೂ ಕಾಣುವುದಿಲ್ಲ. ಇಲ್ಲಿ ಕೊಟ್ಟಿರುವುದು ನಾವು ಹೊಸದಾಗಿ ಬರೆದ ವೃತ್ತಿ.

[ಸಂ॥ ಕ॥ ಸಾ॥ ಪ॥]

ಅಲ್ ಅದೆಗಳ ವಿಸಂಧಿಗೆ–ಕರೆ+ಅಲ್ = ಕರೆಅಲ್; ಇರ+ಅದೆ= ಇರ ಅದೆ. ಬಗೆವೊಡಮಿನಿಸಿನಿಸಿರಅದೆ.

ಅವಜಿ ಸಂಧಿಗೆ— ವೈಗರೆಯಲ್ ಪಾಂಡವರ್ಗೆ ನೆಜಿದುವು ಬರಿಸಂ. ಇರದೆ ಗರ್ಜಿಸಿ ಬೊಪ್ಪಲಂ ತಳರ್ದಂ ಜವಂ ತಳರ್ವಂದದಿಂ.

ಪದ್ಯಾರ್ಧಕ್ಕೆ ವಿಸಂಧಿಯಾದುದರ್ಕೆ—

ಕಂ ‖ ಅಲ್ಲಿಯಿದುಂಟೆಂಬರ್ಥದೊ ।
ಳೆಲ್ಲಿಯುಮುಮುಳ್ಳೊಡೆಯುವಂತ ಶಬ್ದಮುಮುಕ್ಕುಂ ‖
ಎಲ್ಲಂದದೊಳಂ ಪೋಲಿಸು ।
ವಲ್ಲಿ ಗುಣಾಧಿಕರೊಳಂತೆವೋಲೆನಲಕ್ಕುಂ ‖

ಪದ್ಯಾರ್ಧ ಸಂಧಿಗೆ—

ಕಂ ‖ ಬನದೊಳಗೆ ಪೋಗಿ ಪೊಸ ಪೂ ।
ವಿನ ಗೊಂಚಲನಕ್ಕ ನಿನಗೆ ತಂದಪ್ಪೆಂ ನೀ ‖
ನಿನಿತೊಂದು ಬೇಗದಿಂ ನಿಂ ।
ದಿನಿಯನ ಪೞಕ್ಕಿಯೊಳಿರೆಂದು ಸಖಿ ತೊಲಗುವುದುಂ ‖

ವಾಕ್ಯವೇಷ್ಟನ ವಿಸಂಧಿಗೆ—ಕಃ ಕೇನಾರ್ಥೀ ಕೋ [1]ದರಿದ್ರಃ ಎನುತು ಮನಿತುಮಂ [2]ಧರ್ಮಜಂ ಸೂಱಿಗೊಟ್ಟಂ.

ವಾಕ್ಯವೇಷ್ಟನ ಸಂಧಿಗೆ—ನ ದೇವಚರಿತಂ ಚರನೆನಿಸಿದಯ್ ತ್ರಿಲೋಕೇಶ್ವರಾ!

ಅನುಕರಣ ವಿಸಂಧಿಗೆ–ಕವಕ್ಕವ ಎಲೆ ಎಲೆ ಉ ಊ ಪುಗಲ್ ಪುಗಲೆಂದೊಚ್ಚತಮೂಳ್ಪ ಕೋಗಿಲೆಯುಂ.

ಅನುಕರಣ ಸಂಧಿಗೆ—ಘಂಮೆಂಬ; ಘಟಘಟೆಂಬ.

........................................................................................................................

ಮಾಗಿರೆ, ಪದ=ಪದ್ಯಂಗಳ, ಅರ್ಧ=ಅರ್ಧದ, ವಾಕ್ಯವೇಷ್ಟನದ = ಸಂಸ್ಕೃತದ ವಾಕ್ಯವೇಷ್ಟನದ, ಎಡೆಗಂ=ಸ್ಥಾನಕ್ಕೆಯುಂ, ಸ್ಫುರತ್=ಪ್ರಕಾಶಿಸುವ, ಅನುಕೃತಿಗಂ=ಅನುಕರಣ ಶಬ್ದಕ್ಕೆಯುಂ, ಸ್ವರಂ = ಸ್ವರಾಕ್ಷರಂಗಳ್, ಅವು, ಪರಮಿರೆ = ಪರದಲ್ಲಿರೆ, ಋತ್ವಕ್ಕಂ = ಋಕಾರಂ ಪರಮಾದುದರ್ಕೆಯುಂ, ಅಂತೆ=ಹಾಂಗೆ, ಸಂಧಿ=ಸಂಹಿತೆ, ವಿಕಲ್ಪಂ=ವಿಕಲ್ಪವಪ್ಪುದು. ‖ ೩೧ ‖

1. ದರಿದ್ರೋ ಎನುತು. 2. ಸೂಸಿದಂ ಧರ್ಮಪುತ್ರಂ.

ಋಕಾರ ವಿಸಂಧಿಗೆ—ಎಸೆಗುಂ ಋಜ್ವಾಗತಂ ಕಣ್ಗೊಳಿಸುಗುಮಳವಟ್ಟೆರ್ದ ಋಜ್ವಾಗತಂ.

ಋಕಾರ ಸಂಧಿಗೆ—ಸರಸಮೃಜುವೀರನೆಂದಾ ।
ತರುಣಿಯನೊಸೆದಿತ್ತಂ ॥

ವಾಕ್ಯವೇಷ್ಟನ ಶಬ್ದಮುಂ ಅನುಕರಣ ಶಬ್ದಮುಮಿರ್ದಂತಿರ್ಪುವು; ಕನ್ನಡ ವಿಭಕ್ತಿಯಂ ಮಾಡಬೇಡ. "ನವೋ ನವೋ ಭವತಿ ಜಾಯಮಾನೋಽಹ್ನಾಂ" ಎಂಬ ಸಂಸ್ಕೃತವಾಕ್ಯಾಂತಮಂ, ಜಾಯಮಾನೋಽಹ್ನಮೆಂದು ಉಪಸಂಹರಿಸಲಾಗದು; ಧಗಧಗ ಎಂಬುದಂ ಧಗಧಗಂ ಎನಲಾಗದು.

**ಸೂತ್ರಂ** ॥ ಪದಯುಗದ ಸಂಧಿಯಂ ಬೇ ।
ಱದೊಂದಸಹ್ಯೋಕ್ತಿ ಪುಟ್ಟೆ ಮಾಡುವುದುಂ ಮಾ ॥
ರ್ಗದೊಳುಳ್ಳ ಸಂಧಿಯಂ ಕಿಡಿ ।
ಪುದುಮಾಗದು ತಾಂ ಯಥೇಷ್ಟಮೆಂದಱಿವುಳ್ಳರ್ ॥ ೬೨ ॥

**ವೃತ್ತಿ.**—ಎರಡು ಪದಂಗಳ ನಡುವೆ ಬೇಱೊಂದು ದುಷ್ಪ್ರತೀತಿ ಪುಟ್ಟುವೊಡೆ ಸಂಧಿಯಂ ಮಾಡಲಾಗದು; ಸಂಧಿ ಯಥೇಷ್ಟಮೆಂದು ರೂಢಮಪ್ಪ ಸಂಧಿಯಂ ಕಿಡಿಸಿ ಸ್ವರಲೋಪಸಂಧಿಯಂ ಮಾಡಲಾಗದು.

**ಪ್ರಯೋಗಂ.**—ಸಂಧಿದೋಷದ ಲಕ್ಷ್ಯಂ—

ಕಂ ॥ ಬನ್ನಿಯ ತರು ಡಕ್ಕೆಗೆ ಸುರ ।
ಹೊನ್ನೆಯ ತರು ಡಮರುಗಕ್ಕೆ ಕರುವಿಡಿದಿರ್ಪಾ ॥
ಚೆನ್ನಂಗಿಯ ತರು ಡಾಣೆಗೆ ।
ಹೊನ್ನಂ ಕುಡುವೆಡೆಗೆ ಕಲ್ಪತರು ಡಾಕರಸಾ ॥

.................................................................................

**ಟೀಕೆ.**—ಅಱಿವುಳ್ಳರ್=ವಿಚಾರವುಳ್ಳ ಕವಿಗಳ್, ತಾಂ, ಯಥೇಷ್ಟಮೆಂದು= ಸಂಧಿಯಥೇಷ್ಟಮೆಂದು, (ಇಚ್ಛೆ ಬಂದ ಹಾಂಗೆ ಎಂಬರ್ಥಂ) ಪದಯುಗದ=ಪದವೆರಡಱ, ಸಂಧಿಯಂ=ಸಂಹಿತೆಯಂ, ಬೇಱ್=ಅನ್ಯವಾಗಿ, ಅದೊಂದು = ಅದು ತಾನೊಂದು, ಅಸಹ್ಯೋಕ್ತಿ=ಅಸಹ್ಯವಾದ ಪ್ರತೀತಿ, ಪುಟ್ಟೆ=ಹುಟ್ಟೆ, ಮಾಡುವುದುಂ= ಸಂಧಿ ಮಾಡುವುದುಂ, ಮಾರ್ಗದೊಳ್=ಕವಿಮಾರ್ಗದಲ್ಲಿ, ಉಳ್ಳ ಸಂಧಿಯಂ=ರೂಢಮಾಗಿ ಉಳ್ಳ ಸಂಧಿಯಂ, ಕಿಡಿಪುದುಂ = ಸ್ವರಲೋಪಸಂಧಿಯಂ ಮಾಡಿ ಕಿಡಿಸುವುದುಂ, ಆಗದು=ಸಲುವಳಿಯಾಗದು. ॥ ೬೨ ॥

ಸಂಧಿದೋಷದ ಅಸಹ್ಯೋಕ್ತಿಗೆ—ಆಸೆ ಗಣಿತಾ; ಪೂ ಸಲೆಸೊಗಸು; ಹೇ ಲತಾಕೋಮಲಾಂಗ.

* * * * *

ವಿಸಂಧಿ ದೋಷಕ್ಕೆ—

ಕಂ ॥ ಅಸಿಯು ಒಜೆ ಬೆಸೆದ ಪೆಟ್ಟಿಗೆ ।
ಮಿಸುಗುವ ಆಜಂ ತೊಳಪ್ಪ ಕನ್ನವುರಂ ಚಿ ॥
ಲ್ವಿಸೆದಿರೆ ಬಲವರ್ಪ ವಿಟರ್ ।
ಕುಸುಮೇಷುವ ಮೇಳದವರ್ಗಳೆನಿಸಿದರದಱೊಳ್ ॥

'ಪೊನ್ನ ಅಂದಳಂ' ಎಂದಿಂತು ಸಂಧಿಯಂ ಕಿಡಿಸಲಾಗದು.

**ಸೂತ್ರಂ** ॥ ಎರಡುಂ ರೇಫೆಗಳಂ ತಂ ।
ದುರವಣೆಯಿಂ ಕೂಡಿದಂತೆವೋಲ್ ಶ್ರುತಿಕಷ್ಟಂ ॥
ಬರೆ ಸಂಧಿ ಮಾಡಲಾಗದು ।
ಕರಡೆಯ ಗಿರ್ಗಟದ ದನಿವೊಲಮರವವೆಂದುಂ ॥ ೬೩ ॥

**ವೃತ್ತಿ.**—ಪದಂಗಳೆರಡಱಂತರಾಳರೇಫೆಗಳಂ ಕೂಡಿದಂತೆ ಶ್ರುತಿಕಷ್ಟ ಮಾಗೆ ಸಂಧಿಯಂ ಮಾಡಲಾಗದು; ಕರಡೆಯ ಗಿರ್ಗಟದ ಧ್ವನಿಯಂತಿರವು ನೇರ್ಪಡವು.

**ಪ್ರಯೋಗಂ.**— ರೇಫದ್ವಿತಯ ಸಂಧಿದೋಷಕ್ಕೆ— ಬಂದರ್ರಾಮರ್; ದೇವರ್ರಕ್ಷಿಸುಗೆ; ಮೂವರ್ರಾಯರನೆ ಮಾಱುವಂತೆಸೆದಿರ್ಕುಂ.

ಶ್ರುತಿಕಷ್ಟಕ್ಕೆ—'ವಿದ್ವಿಟ್ಸ್ತ್ರೀಯರೆಂದು' ಮಾಡಲಾಗದು.

**ಸೂತ್ರಂ** ॥ ಅವಧಾರಣೆಯನಿಯೋಗ ।
ವ್ಯವಹೃತಿಯಿಂದಿರೆ ನಿಪಾತವಿಷಯದೊಳಲ್ಪಾ ॥
ರ್ಥವನಾಳ್ದರೆ ವಸ್ತುವಿನ ।
ರ್ಥವನುಸಿರುತ್ತಿರೆ ತಗುಳ್ಚುವುದು ಸಂಹಿತೆಯಂ ॥ ೬೪ ॥

---

**ಟೀಕೆ.**—ಎರಡುಂ ರೇಫೆಗಳಂ=ಪೂರ್ವಪದದ ಕಡೆಯಲ್ಲಿ ಪರಪದದ ಮೊದಲಲ್ಲಿ ಇರ್ದ ಎರಡು ರೇಫೆಗಳಂ, ತಂದು=ತಂದು ಕೊಂಡು, ಉರವಣೆಯಿಂ=ಶೀಘ್ರದಿಂದೆ, ಕೂಡಿದಂತೆವೋಲ್ = ಕೂಡಿದ ಹಾಗೆ, ಶ್ರುತಿಕಷ್ಟಂ = ಕರ್ಣಕಠೋರತ್ವಂ, ಬರೆ, ಸಂಧಿ ಮಾಡಲ್=ಸಂಧಿಯಂ ಮಾಡಲ್ಕೆ, ಆಗದು=ಸಲುವಳಿಯಾಗದು; ಅವು,

ವೃತ್ತಿ.—ಅವಧಾರಣೆಯ ಎಕಾರಂ ತನ್ನ ನಿಯತಾರ್ಥಮಂ ಬಿಟ್ಟು ಅನಿಯೋಗಮಾದಲ್ಲಿಯುಂ, ಕಿಱಿದೆಡೆಯಂ ಪೇೞ್ವ ನಿಪಾತಾರ್ಥದರೆಯೆಂಬ ಶಬ್ದಮೊಂದು ವಸ್ತುವಿನ ಸಮಭಾಗಮಂ ಪೇೞ್ವಲ್ಲಿಯುಂ ಸಂಧಿಯುಂಟು.

ಪ್ರಯೋಗಂ.—ಅನಿಯತ ನಿಯೋಗ ಸಂಧಿಗೆ—ಮಾಮರನಲ್ಲದಿಲ್ಲ; ತನಿಗಂಪಿನ ಮಲ್ಲಿಗೆಯಲ್ಲದಿಲ್ಲ.

ಅರೆಯ ಸಂಧಿಗೆ—ಕುರುಪತಿಯಂ ವಿಷ್ಣು ಬೇಡಿದಂ ಧರೆಯುರೆಯಂ.

## ೨. ವ್ಯಂಜನ ಸಂಧಿ

ಸೂತ್ರಂ ॥ ಇರೆ ವರ್ಗಪ್ರಥಮಂಗಳ್ ।
ಪರದೊಳ್ ಚಟವರ್ಗಮುಱಿಯೆ ತಮ್ಮ ತೃತೀಯಾ ॥
ಕ್ಷರಮಕ್ಕುಂ ಪದವಿಧಿಯೊಳ್ ।
ಪರಿಹರಿಸಲ್ಬಾರದಲ್ಲಿ ಬಹುಳಸ್ಥಿತಿಯಂ ॥ ೬೫ ॥

ವೃತ್ತಿ.—ಚಟವರ್ಗದಿಂ ಪಿಂಗಿದ ಕ ತ ಪಂಗಳ್ ಪರಪದದಾದಿಯೊಳಿರ್ದು, ಸಮಾಸ ವಿಷಯದೊಳ್ ತಮ್ಮ ತಮ್ಮ ತೃತೀಯಾಕ್ಷರಂಗಳಂ ಬಹುಳತೆಯಿನೆಯ್ದುಗುಂ.

........................................................................................................

ಎಂದುಂ = ಆವಾಗಳುಂ, ಕರಡೆಯ = ಕರಡೆಯೆಂಬ ವಾದ್ಯದ, ಗಿರ್ಗಟದ=ಗಿರ್ಗಟಿಯೆಂಬ ವಾದ್ಯದ, ದನಿವೊಲ್=ಧ್ವನಿಯ ಹಾಗೆ, ಅಮರವು=ಪೊರ್ದುಗೆಯಾಗವು. ॥ ೬೩ ॥

ಟೀಕೆ.—ಅವಧಾರಣೆ= ಅವಧಾರಣೆಯ ಎಕಾರಂ, ಅನಿಯೋಗ ವ್ಯವಹೃತಿಯಿಂದೆ = ತನ್ನ ನಿಯತಾರ್ಥವಂ ಬಿಟ್ಟು ಅನಿಯೋಗ ವ್ಯವಹಾರದಿಂದೆ, ಇರೆ, ನಿಪಾತ ವಿಷಯದೊಳ್=ನಿಪಾತಾವ್ಯಯ ವಿಷಯದಲ್ಲಿ, ಅಲ್ಪಾರ್ಥವಂ=ಕಿಱಿದೆಂಬಲ್ಪಾರ್ಥವಂ, ಅಳ್ದ=ತಾಳ್ದ, ಅರೆ=ಅರೆಯೆಂಬ ಶಬ್ದಂ, ವಸ್ತುವಿನ=ಒಂದು ವಸ್ತುವಿನ, ಅರ್ಧವಂ=ಸರಿ ಭಾಗವಂ, ಉಸಿರುತ್ತಿರೆ=ಹೇಱುತ್ತಿರೆ, ಸಂಹಿತೆಯಂ=ಸಂಧಿಯಂ, ತಗಳ್ಗುವುದು=ಮಾೞ್ಪುವುದು. ॥ ೬೪ ॥

ಟೀಕೆ.—ಪದವಿಧಿಯೊಳ್=ಸಮಾಸವಿಧಿಯಲ್ಲಿ, ಚಟವರ್ಗಂ=ಚವರ್ಗ ಟವರ್ಗಂಗಳ್, ಉಱಿಯೆ=ಹೊಱತಾಗೆ, ವರ್ಗ=ವರ್ಗಂಗಳ, ಪ್ರಥಮಂಗಳ್= ಕ ತ ಪ ಎಂಬ ಮೊದಲಕ್ಷರಂಗಳ್, ಪರದೊಳ್ = ಪರಪದದಾದಿಯಲ್ಲಿ, ಇರೆ, ತಮ್ಮ, ತೃತೀಯಾಕ್ಷರಂ= ಗ ದ ಬ ಎಂಬ ಮೂಱನೆಯಕ್ಷರಂಗಳ್, ಅಕ್ಕುಂ=ಅಪ್ಪುವು; ಅಲ್ಲಿ=ಆ ತೃತೀಯಾಕ್ಷರವಾಗುವಲ್ಲಿ, ಬಹುಳಸ್ಥಿತಿಯಂ=ಬಹುಳದ ಸ್ಥಿತಿಯಂ, ಪರಿಹರಿಸಲ್ಬಾರದು=ಬಿಡಬಾರದು. ॥ ೬೫ ॥

ಪ್ರಯೋಗಂ.—ಕಕಾರದ ತೃತೀಯತ್ವಕ್ಕೆ—

ಕಂ॥ ಪಱಗನ್ನಡಂ ಪುದುಂಗೊಳೆ।
ಕೊಱಿಸಕ್ಕದಮುಂ ತಗುಳ್ಚಿ ಜಾಣ್ಕೆಡೆ ಮುತ್ತಂ॥
ಷೆಱಸಂ ಕೋದಂತಿರೆ ಪೇ।
ೞ್ವಱಗವಿಗಳ ಕವಿತೆ ಬುಧರನೆರ್ದೆಗೊಳಿಸುಗುಮೇ॥

ಗೞಿಗೂಸಾಡುವರಿಂದ್ರನಂ ಗಿರಿಶನಂ ಸರ್ವಸ್ವಮುಂ ಕೊಂಡು ಮುನ್ನುೞಿವರ್... ಇತ್ಯಾದಿ

ತಕಾರದ ತೃತೀಯತ್ವಕ್ಕೆ—ಕಣ್ದೆಱವು; ಮೇಲ್ದುಡುಗೆ; ಮಣಿಯುಡೆದೊವಲುಂ ಪಿರಿಯ ಪಣೆಗಟ್ಟುಂ; ನಿಱುದಲೆ ನೀಳ್ದವೆತ್ತ ನಗೆಗಣ್; ಬೆಳರ್ಗೆಂಪಿನ ಸೊಂಪನಾಳ್ದ ಬಾಯ್ದೆಱೆ.

ಪಕಾರದ ತೃತೀಯತ್ವಕ್ಕೆ—ಕಣ್ಬನಿ; ತಣ್ಬೞಿಲ್; ತಳದೊಳ್ ರುದ್ರಂ ಕಂಡಲ್ಲಿ ಕಣ್ಬೊಲನಾಗೆ.

ಬಹುಳಮೆಂಬುದಱಿಂದೆ ಕೆಲವೆಡೆಯೊಳಿಲ್ಲ–ತಲೆಕಟ್ಟು; ಬೆಸೆಕೋಲ್; ಒಳಕೆಯ್ಯೊಳಿರ್ದು ಪಲ್ಗಿರಿದೊಳವಾಲಂಗೊಂಡು; ಏದುಪಂದಿ.

ಚಟವರ್ಗಕ್ಕೆ ತೃತೀಯತ್ವಮೆಂದುಮಿಲ್ಲದುದರ್ಕೆ—ಕಡುಚಾಗಿ; ಕಣ್ಚಲ್ಲಂ; ಚಿಕ್ಕಚೋಜಿಗಂ; ಬಱುಚಿನ್ನಂ; ಕಡುಟಕ್ಕು; ಮಾಣಿಕಟಕ್ಕೆ; ಪೊಸಟೊಪ್ಪಿಗೆ; ಕಳ್ಳಟಪ್ಪಣಂ.

ಸೂತ್ರಂ॥ ಒಂದೆರಡರ್ಕೆ ಱಕಾರ।
ಕ್ಕಂದಾದಾದೇಶರೇಫೆಗಂ ಡತ್ವಕ್ಕಂ॥
ಬಂದಾದೇಶ ಱಟಕ್ಕಂ।
ಸಂಧಿಸದು ತೃತೀಯವೃತ್ತಿ ಕತಪಕ್ಕೆಂದುಂ॥ ೬೬ ॥

---

ಟೀಕೆ.—ಇಲ್ಲಿ ಅನುವರ್ತನೆ—'ಪದವಿಧಿಯೊಳ್ ವರ್ಗಪ್ರಥಮಂಗಳ್ ಪರದೊಳಿರೆ' (ಸೂ ೬೫), ಒಂದೆರಡರ್ಕೆ=ಒಂದೆರಡೆಂಬಿವರ್ಕೆ, ಱಕಾರಕ್ಕೆ=ಱತ್ವಕ್ಕೆ, ಅಂದು=ಅ ಸಮಾಸ ಮಾಡುವಂದು, ಆದಾದೇಶರೇಫೆಗಂ=ಆದ ಆದೇಶದ ರೇಫೆಗೆಯುಂ, ಡತ್ವಕ್ಕಂ=ಡಕಾರಕ್ಕೆಯುಂ, ಬಂದ ಆದೇಶ ಱಟಕ್ಕಂ=ಬಂದ ಆದೇಶದ ಱಟಕ್ಕೆಯುಂ, ಕತಪಕ್ಕೆ=ಪರವಾದ ಕತಪಂಗಳ್ಗೆ, ತೃತೀಯವೃತ್ತಿ=ಮೂಱನೆಯಕ್ಷರದ ವೃತ್ತಿ, ಎಂದುಂ=ಅವಾಗಳುಂ, ಸಂಧಿಸದು=ಸಂಘಟನೆಯಾಗದು, ಬಾರದೆಂಬುದರ್ಥಂ. ॥ ೬೬ ॥

ವೃತ್ತಿ.—ಒಂದೆರಡೆಂಬಿವರ್ಕಂ ಱಕಾರಕ್ಕಮಾದೇಶಮಾದ ರೇಫೆಗಂ, ಡಕಾರಕ್ಕಾದೇಶಮಾದ ೞಿಟಿಕ್ಕಂ, ಪರಮಾದ ಕ ತ ಪಂಗಳ್ಗೆಂದುಂ ತೃತೀಯತ್ವಮಿಲ್ಲ.

ಪ್ರಯೋಗಂ.—ಒಂದರ್ಕ್ಕೆ—

ಕಂ॥ ಒರ್ಕೈಸಿ ಬಿಲ್ಲಮುಂಬುಮ।
ನುರ್ಕಾಳ್ಗಳ್ ಸುರಿಗೆಗಿಱ್ತು ಮಾಣ್ದಿರದಾ ಗೋ॥
ವರ್ಕಳಿದಿರ್ಚಿದ ಘೋಟಾ।
ಯ್ತರ್ಕಳೊಳಿಕ್ಕತುಳಮಿಱದು ಕುಱುದೞಯಾದರ್॥

ಒರ್ತುತ್ತೆಂಬಿನಂ ತುತ್ತಿ ದೇವಗಣಕ್ಕಚ್ಚರಿಯಾಗಿ ಪಾಱೆ; ಒರ್ಪಿಡಿಗೂೞಿಂ ಸಿತಗನ ಕಪ್ಪಡಮಱು.

ಎರಡರ್ಕ್ಕೆ—ಇರ್ಕೋಡಿಯಿಂ ತೀವಿ ನಾಲ್ದೆಸೆಗಂ ಸೂಸಿ; ಇರ್ತಲೆಗೊಜ್ಜಂ; ಪಿರಿದಿರ್ಪತ್ತು ತೋಳುಂ ದಶಮುಖ ಕುಹರಾಟೋಪಮುಂ.

ಱಕಾರಕ್ಕಾದೇಶಮಾದ ರೇಫೆಗೆ—ಮಾರ್ಕೊರಲ ಭೈರವಂ; ಮಾರ್ಕಟ್ಟೆ; ಮಾರ್ತಲೆ; ಮಾರ್ತಪ್ಪ ತೆರೆಗಳಿಂ ತರಲಾರ್ತುದು ತನ್ನದಿಗೆ ಸುರನದೀ ವಿಭ್ರಮಮಂ; ಬೇರ್ಪಟ್ಟಂ; ಏರ್ಪತ್ತರೇರ್ಪತ್ತರಂ ಪದುಳಂ ಮಾೞ್ಪುದುಚಿತಂ.

ಡಕಾರಕ್ಕಾದೇಶಮಾದ ೞಿಟಿಕ್ಕೆ—ಕಾೞ್ಕಿಚ್ಚು ತಗುಳೆ ತಮ್ಮೊಳ್ ಕೋೞ್ಕಟ್ಟೆ; ಕಾೞ್ತುಱು ಮಸಗಿದ ಪೋಲ್ ಒಡ್ಡಿದುದು ಕುರುಸೈನ್ಯಂ; ನಾೞ್ಪಿಗರಣಂ; ನಾೞ್ತುಡುಗುಣಿ; ಕಾೞ್ಪುರಮಾಗೆ ಕಾವ್ಯರಸಂ ಅರ್ಥಮುಮಕ್ಕರಮುಂ ಪ್ರತೀತಿಯಂ ಮಾೞ್ಪಿನೆಗಂ.

ಸಮುಚ್ಚಯ ವಶದಿಂದೆ ಕೆಳಗಣ್ಗಾದೇಶಮಾದ ೞಿಟಿಕ್ಕಂ ತೃತೀಯತ್ವಮಿಲ್ಲ, ಕೀೞ್ಕೆಱೆ ಎಂಬಂತೆ.

ಸೂತ್ರಂ॥ ವಿದಿತಸ್ವರದಿನನಾದೇ।
ಶದ ಸಹಜವ್ಯಂಜನಂಗಳಿಂ ಪರದ ಪವ॥
ರ್ಗದ ನೆಲೆಗಕ್ಕುಂ ವತ್ವಂ।
ಪದವಿಧಿಯೊಳ್ ಬಹುಳವೃತ್ತಿಯಿಂ ವಾಕ್ಯದೊಳಂ॥ ೬೭॥

.........................................................................................

ಟೀಕೆ.—ಪದವಿಧಿಯೊಳ್=ಸಮಾಸದ ವಿಧಿಯಲ್ಲಿ, ಬಹುಳವೃತ್ತಿಯಿಂ=ಬಹುಳದ ವರ್ತನೆಯಿಂದೆ, ವಾಕ್ಯದೊಳಂ = ವಾಕ್ಯದಲ್ಲಿಯುಂ, ವಿದಿತ ಸ್ವರದಿಂ = ಪ್ರಸಿದ್ಧಮಾದ ಸ್ವರಾಕ್ಷರಂಗಳಿಂದೆ, ಅನಾದೇಶದ=ಆದೇಶವಲ್ಲದ, ಸಹಜ ವ್ಯಂಜನಂಗಳಿಂ=

**ವೃತ್ತಿ.**—ಸ್ವರಂಗಳಿಂದನಾದೇಶದ ಸಹಜವಾದ ವ್ಯಂಜನಂಗಳಿಂ ಪರದೊಳಿರ್ದ ಪವರ್ಗಕ್ಕೆ ಸಮಾಸವಿಷಯದೊಳ್ ವತ್ವಮಕ್ಕುಂ; ಬಹುಳಮೆಂಬುದಱಿಂ ಕೆಲವಱೊಳಿಲ್ಲ; ವಾಕ್ಯದೊಳಂ ವತ್ವಮುಂಟು.

**ಪ್ರಯೋಗಂ.**—ಸ್ವರಂಗಳ್ಗೆ—

ಪಕಾರಕ್ಕೆ—ಚಂ ॥ ಎಳವೆಱಿ ದಾಡೆ ಕೆಂದಳಿರೆ ನಾಲಗೆ ಮಾಮರದಳ್ಳಿಗೊಂಬಿನೊಳ್ ।
ಮಿಳಿರ್ವೆಳವಳ್ಳಿ ಬಾಲಮಲರ್ದೊಂಗಲೆ ಕೇಸರಮೆಂಬಿನಂ ಮನಂ ॥
ಗೊಳೆ ಮಧುಮಾಸ ಕೇಸರಿ ವಿಯೋಗಿಗಳೆಂಬ ಮೃಗಂಗಳಂ ಭಯಂ।
ಗೊಳಿಸಿದುದುದ್ಧಕೀರ ಮದಕೋಕಿಲ ಗರ್ಜಿತ ತರ್ಜಿತಂಗಳಿಂ ॥

ಬೆಳೆವೊಲನೆತ್ತಲ್ ಕಾಕಿಱದೆ ಪರ್ಬಿದ ಪೆರ್ಬಾಳ್ (?)

ಬಕಾರಕ್ಕೆ—

ಕಂ ॥ ನಡುವಣ ಕರ್ಪುಂ ಕಡೆಯಣ ।
ಕಡುವೆಳ್ಪುಂ ತುದಿಯ ಕೂರ್ಪುಮೆಸೆದಿರೆ ವಿಟರಂ ॥
ಬಿಡದಿಸಲೆ ತೆಗೆದ ಮದನನ ।
ನಿಡಿಯಲರ್ಗಣೆಗಳನೆ ಪೋಲ್ತುವಾಕೆಯ ಕಣ್ಗಳ್ ॥

ಮಕಾರಕ್ಕೆ—

ಕಂ॥ ಮುರವಣೆಗಂ ಬೀಣೆಗಮುಂ ।
ತರಮಾವುದು ದೋಷರಹಿತ ಮೃದು ಲಲಿತ ಪದ ॥
ಸ್ಫುರಿತ ಸರಸೋಕ್ತಿಗಂ ನಿ ।
ಷ್ಠುರ ಕುಕವಿ ಕಟೂಕ್ತಿಗಳ್ಗಮೇನಂತರಮೋ ॥

ಕಳೆಯಲ್ಕಾಗದು ನರಪತಿಕುಳವನಱಿವ ಪಟಿವಾನಿಸನಂ.

ಸಹಜವ್ಯಂಜನಕ್ಕೆ—ಪ—ಬೇರ್ವೆರಸು ಕಾಯ್ತು ಪಲಸೆಳ ।
ನೀರ್ವೊನಲಂ ಕಱಿದು ತೆಂಗು......॥

ಬ—ಮೆಯ್ವಸವೊಂದೆ ಪೂವಿನೊಳೆ ಪೋಗಿ ಮೊಗಂ ಮುರಿದಳ್ಳಿಗೊಂಬಿನೊಳ್ ಪಾರ್ದುದು.

........................................................................................................

ಸಹಜವಾದ ವ್ಯಂಜನಾಕ್ಷರಂಗಳಿಂದೆ, ಪರದ=ಮುಂದಣ, ಪವರ್ಗದ=ಪ ಬ ಮ ಎಂಬ ಪವರ್ಗದ, ನೆಲೆಗೆ=ಸ್ಥಾನಕ್ಕೆ, ವತ್ವಂ=ವಕಾರಂ, ಆಕ್ಕುಂ=ಆಪ್ಪುದು. ॥ ೬೭ ॥

ಮ—ಸಾತಿಶಯಾರ್ಥಮುಮಂ ಮೆಲ್ಪಾತುಮನೊಸೆದಿತ್ತರೊಲಿದು ತವ ಗಿಲ್ಲದುವಂ.

ಪ—ಬೇಟಮಂ ಹಡೆದನೆ ಬಾೞ್ಗೆ ಬಾೞ್ಪಡಿನಿತಿಲ್ಲದ ಬಾೞ್ವಿಣನೇಕೆ ಬೞ್ವಿಪಂ.

ಬ—ಗೇಣ್ವಾಯ್ಗೆವೀೞದೆ; ಆಳ್ವಲ್ಮೆ; ತೋಳ್ವಲ್ಮೆ.

ಆದೇಶ ವ್ಯಂಜನಕ್ಕೆ ವತ್ವಮಿಲ್ಲ—ಬ—ಇರ್ಬಾಳ್ ಮೂನಾಳ್ ಇಕ್ಕಿರ್ದು ಪರಿಯೊಳ್;

ಮ—ಇರ್ಮಡಿ;

ಕಂ॥ ಧರೆಯೊಳ್ವೀರದ ಪೆಂಪಿನ ।
ನರನಿಂದಿರ್ಮಡಿ ಬಕಾರಿಯಿಂ ಮೂವಡಿ ಭಾ ॥
ಸ್ಕರಸುತನಿಂ ನಾಲ್ವಡಿ ಮುರ ।
ಹರನಿಂದೈವಡಿ ನೆಗೞ್ತಿಯುದಟರ ಭೀಮಂ ॥

ಪ—ಕಿೞ್ತೊಡೆ ರಸಭಾವಮಿರ್ಪೊಡೆ ಮುಖಂ ಸುರತೋತ್ಸವ ಗೋಮಿನೀ ಮುಖಂ.

ಬಹುಳಮೆಂಬುದಱಿಂ ಕೆಲವಱೊಳ್ವತ್ವಮಿಲ್ಲ.—

ಪ—ಕಯ್ಪಱಿಗುಟ್ಟೆಯಾಡಿದರ್; ಪೂಪುಣುಂಬು; ಪಲ್ಪಱಿಗುಟ್ಟಿದಂ.

ಬ—ಕಣ್ಬೇಟಂ; ಆ ನಾಡು ಪಿರಿಯ ಕಣ್ಬೇಡು; ಕರ್ಬೇಡರೆ; ಸುಡು ಬಾಡು.

ಮ—ಬಾಳ್ಮೊನೆ; ಪಾಟ್ಮನೆ; ಕತ್ತುರಿಮಿಗಂ.

ವಾಕ್ಯಕ್ಕೆ ವತ್ವಂ—

ಪ್ರಮಿತಾಕ್ಷರಂ॥ ತಮರೂರ್ಗೆವೋಪ ಕುಲಜಾಂಗನೆಯರ್ ।
ಕಮಲೋದರಂಗೆ ಪಡೆದರ್ ಮುದವಂ ॥

ದಿವದಿಂ [1]ಕೆಲಸಕ್ಕೆವರ್ಪ ದಿವಿಜಾಂಗನೆಯರ್; ಬೆಂಗೆವಂದಂ; ತರವೇೞ್ದಿಂ. ನೆಲೆಗೆವಂದಂ; ಕಾಮನ ಗರವಟಿಗೆವರ್ಪಂತೆ ಸುತ್ತಿವರ್ಪುವು ಗಿಳಿಗಳ್.

---

1. ಕೆಲಚಕ್ಕೆ.

**ಸೂತ್ರಂ ॥** ಇರೆ ಯ ಲ ರಹಿತ ವ್ಯಂಜನ ।
ಪರಮಾಗಿ ಸಕಾರಮಲ್ಲಿ ಬಹುಳಂ ಚತ್ವಂ ॥
ಅರೆಎಡೆಯೊಳ್ ಜತ್ವಂ ಮೇ ।
ಣರೆಎಡೆಯೊಳ್ ಸಂಖ್ಯೆಯಾಗೆ ನಿಯತಂ ಛತ್ವಂ ॥ ೬೮ ॥

**ವೃತ್ತಿ.**—ಯಕಾರ ಲಕಾರಂಗಳಂ ಕಳೆದುೞಿದ ವ್ಯಂಜನಂಗಳ್ಗೆ ಪರಮಾಗಿ ನಿಂದ ಸಕಾರಂ ಬಹುಳತೆಯಿಂ ಚತ್ವಮಕ್ಕುಂ; ಕೆಲವೆಡೆಯೊಳ್ ಜತ್ವಮಕ್ಕುಂ; ಕಿಱಿದೆಡೆಯೊಳ್ ಸಂಖ್ಯೆಯಾಗೆ ಛತ್ವಮಕ್ಕುಂ.

**ಪ್ರಯೋಗಂ.**—ಚತ್ವಕ್ಕೆ— ನುಣ್ಚರದ ತಿಣ್ಪು ಘನಘೋಷ ಗಭೀರಂ. ಈಂಚರದಿನಾಣತಿ ಮಾಡಿದುದುನ್ಮದಾಳಿ.

ಜತ್ವಕ್ಕೆ–ಕಟ್ಟದ ಪೊಂಜುರಿಗೆಯೊಳಂ ಜನಮನೇಂ ಮನಂಗೊಳಿಸಿದುದೊ! ಮುಂಜೂರ್; ಮುಂಜೆಱಂಗು; ತಣ್ಜೊಡರ್.

ಛತ್ವಕ್ಕೆ–ಪದಿನೆಣ್ಛಾಸಿರ ಲೋಹವಕ್ಕರೆಯ ಜಾತ್ಯಶ್ವಂಗಳಿರ್ಛಾಸಿರಂ।
ಮದಮಂ ಮುಕ್ಕುಳಿಸಿರ್ದ ದಂತಿಘಟೆಗಳ್ ನೂರ್ಛಾಸಿರಂಗಳ್...

ಬಹುಳಮೆಂಬುದಱಂ ಕೆಲವೆಡೆಯೊಳಿಲ್ಲ—

ಕಂ ॥ ಕಣ್ಸೋಲಮನಱಯಂ ಪೆಱ ।
ವೆಣ್ಸಿರವಧುಗೆಣೆಗೆವರ್ಪೊಡಂ ತೊಡರ್ದಾತಂ ॥
ಮೇಣ್ಸಿರನಕ್ಕೆಮ ಚಲದ ಪ ।
ವಣ್ಸರಿ ಕೀೞ್ ಸರಿಗೆವಾರನಹಿತ ಕೃತಾಂತಂ॥

ಸೋನೆಯ ಕೆಸರ್ಗಳಲರ್ದಲರ ಬೆಳ್ಸರಿ. ಕಳ್ಸವಿಗೆ ಕುಡಿದು ಧನಮಂ.

ಯ ಲ ರಹಿತಕ್ಕೆ–ಬಾಯ್ಸವಿಗೆ· ಮೆಯ್ಸವಿ ಕಣ್ಸವಿಯಪ್ಪ ರೂಪು. ಕೆಯ್ಸುರಿಗೆ.

---

**ಟೀಕೆ.**–ಯ ಲ ರಹಿತ=ಯಕಾರ ಲಕಾರಂಗಳಿಂ ವಿರಹಿತಂಗಳಾದ, ವ್ಯಂಜನ =ವ್ಯಂಜನಂಗಳ್ಗೆ, ಪರಂ=ಮುಂದಣಕ್ಷರಂ, ಆಗಿ, ಸಕಾರಂ=ಸತ್ವಂ, ಇರೆ, ಅಲ್ಲಿ=ಆ ಸ್ಥಾನದಲ್ಲಿ, ಬಹುಳಂ=ಬಹುಳವಾಗಿ, ಚತ್ವಂ=ಚಕಾರವಪ್ಪುದು; ಅರೆಎಡೆಯೊಳ್= ಕೆಲವೆಡೆಯಲ್ಲಿ, ಜತ್ವಂ = ಜಕಾರವಪ್ಪುದು; ಮೇಣ್ = ಅದಲ್ಲದೆ, ಅರೆಎಡೆಯೊಳ್= ಕಿಱುದೆಯಲ್ಲಿ, ಸಂಖ್ಯಾ=ಸಂಖ್ಯಾವಾಚಿ, ಆಗೆ, ನಿಯತಂ=ಕಟ್ಟಾಗಿ, ಛತ್ವಂ=ಛಕಾರ ವಪ್ಪುದು. ॥ ೬೮ ॥

ಚಂ॥ ..........................................ಮಾನಿನೊಳ್ ।
ಮಸಗುತುಮಿರ್ಪ ಬಲ್ಸೊನೆಯ ಸೋನೆಗೆ ಕಾಂಚನಕೇತಕೀವನ ॥
ಪ್ರಸರದಳಂಗಳಾಗಳ್............................ ॥

ಕಲ್ಸೆಜಿ; ಮೆಲ್ಸರಂ.

ಬಹುಳಮೆಂಬುದಱಿಂ ಸ್ವರಂಗಳ ಪರದಲ್ಲಿರ್ದ ಸಕಾರಕ್ಕಂ ಕೆಲವೆಡೆಗಳಲ್ಲಿ ಚಕಾರ ಜಕಾರಂಗಳಪ್ಪುವು—ಮುಚ್ಚಿರೆ; ಮುಚ್ಚಾಲ್; ತುಡುಜೊಡರ್.

**ಸೂತ್ರಂ ॥** ಮೊದಲೊಳ್ ಹ್ರಸ್ವೈಕಸ್ವರ ।
ಮೊದವೆ ಪರಂ ಸ್ವರಮದಾಗೆ ನ ಣ ಲ ಯ ಳಂಗ ॥
ಳ್ಗುದಯಿಸುಗುಂ ದ್ವಿತ್ವಂ ಪೂ ।
ರ್ವದೀರ್ಘಕವ್ಯಯಕೆ ವರ್ಣತತಿಗದ್ವಿತ್ವಂ ॥ ೬೯ ॥

**ವೃತ್ತಿ.**—ಹ್ರಸ್ವಮಪ್ಪೇಕಸ್ವರಂ ಪೂರ್ವಮಾಗೆ, ಸ್ವರಂ ಪರಮಾಗೆ, ನ ಣ ಲ ಯ ಳ ಕಾರಂಗಳ್ಗೆ ದ್ವಿತ್ವಮುಂಟು ; ಪೂರ್ವದೀರ್ಘಮಾದೊಡಂ ಅವ್ಯಯ ಮಾದೊಡಂ ಅನೇಕಾಕ್ಷರಮಾದೊಡಂ ದ್ವಿತ್ವಮಿಲ್ಲ.

**ಪ್ರಯೋಗಂ.**—ಆದಿ ಹ್ರಸ್ವಮಾಗೆ—ನಕಾರ ದ್ವಿರ್ಭಾವಕ್ಕೆ—ಬಿಡುಮುಡಿ ಬೆನ್ನಪ್ಪಳಿಸೆ.

ಣಕಾರಕ್ಕೆ—ಕಣ್ಣಿಂ ಕಾಣಳ್. ಚಿತ್ರದ ಪೆಣ್ಣಂತೆವೊಲ್ ಉಣ್ಣಳ್. ಮನ ದೊಳ್ ದಯೆಯಿಲ್ಲದವನ ಕಣ್ಣೇಂ ಪುಣ್ಣೇಂ. ಎಣ್ಣೆಯೊಳ್ ಅರನೇಱಲ ತನಿ ವಣ್ಣಂ ನುಣ್ಣಿಸಿದನಬ್ಜಭವಂ.

ಕಂ ॥ ಪೊನ್ನುಳ್ಳವನೆ ಕುಲೀನಂ ।
ಚೆನ್ನಂ ಕಲಿ ಸತ್ಯವಾದಿಯೆನಿಸುಗುಮದಱಿಂ ॥
ದಿನ್ನುಂ ಪೊನ್ನನೆ ಪಡೆವುದು ।
ಪೊನ್ನಿಂ ಸಮನಿಸುಗುಮಲ್ತೆ ಪೆಣ್ಣುಂ ಮಣ್ಣುಂ ॥

---

**ಟೀಕೆ.**—ಮೊದಲೊಳ್=ಆದಿಯಲ್ಲಿ, ಹ್ರಸ್ವ=ಹ್ರಸ್ವವಾದ, ಏಕ=ಒಂದು, ಸ್ವರಂ=ಸ್ವರಾಕ್ಷರಂ, ಒದವೆ=ಬರೆ, ಸ್ವರಂ=ಸ್ವರಾಕ್ಷರಂ, ಅದು, ಪರಂ=ಮುಂದು, ಆಗೆ, ನ ಣ ಲ ಯ ಳಂಗಳ್ಗೆ = ನಕಾರ ಣಕಾರ ಲಕಾರ ಯಕಾರ ಳಕಾರಂಗಳ್ಗೆ, ದ್ವಿತ್ವಂ = ದ್ವಿರ್ಭಾವಂ, ಉದಯಿಸುಗುಂ = ಹುಟ್ಟುವುದು ; ಪೂರ್ವದೀರ್ಘಕೆ = ಆದಿ ದೀರ್ಘಕ್ಕೆ, ಅವ್ಯಯಕೆ = ಅವ್ಯಯ ಶಬ್ದಂಗಳ್ಗೆ, ವರ್ಣತತಿಗೆ= ಅನೇಕಾಕ್ಷರಕ್ಕೆ, ಅದ್ವಿತ್ವಂ=ದ್ವಿತ್ವಮಿಲ್ಲ. ॥ ೬೯ ॥

ಕಂ॥ ಕಲ್ಲೆಲ್ಲಂ [1]ಸಸಿಗಲ್ ಮರ ।
ನೆಲ್ಲಮವಿಮ್ಮಾವು ಬಳ್ಳಿಯೆಲ್ಲಂ ಲತೆ ಮು ॥
ಳ್ಳೆಲ್ಲಂ ಕೇದಗೆ ಬೆಳಗೆ ।
ಯ್ಯೆಲ್ಲಂ ಫಲಶಾಲಿ ಯೆಂದೊಡೇಪೊಗೞ್ವುದದಂ ॥

ಲಕಾರಕ್ಕೆ— ನೆಲ್ಲುಂ ಕೌಂಗುಂ ಮಾವುಂ ಮಲ್ಲಿಗೆಯುಂ. ಹುಲ್ಲುಂ ಹುಟ್ಟಗೆಯುಂ ಬಿೞ್ದಲ್ಲಿಯುಮವನ ಬೀಡಿನೊಳ್.

ಯಕಾರಕ್ಕೆ—ಮೆಯ್ಯ ಮಸಿ ಕೊರಲ ಬಕ್ಕಳಿ ಪೊಯ್ಯೆ ಘರಿಲ್ಗರೆವ ಕೆಯ್ಯ ಕಂಕರಿಕೆ.

ಳಕಾರಕ್ಕೆ—ಮುಳ್ಳಾಗಿ; ಕಳ್ಳಾಟಂ; ಒಳ್ಳಾಳಿಡೆಗೊಡನೊದಱ ಭಟ್ಟನೊಳೊವಜಂ. [2]ಬೇಟ್ಪಿರೆಳ್ಳಂ ಕೊದಳಿವೆರಸು ತಿಂಬಂ ನಾಗದೇವಂ.

ಪೂರ್ವದೀರ್ಘಮಾಗೆ—ನಕಾರಕ್ಕೆ-ತಾನೆ ಗಡಱಿಪಂ ಮೂರ್ಖಂ ವಿಾನಾಗಿಯುಮೆಸಡಿಯಾಗಿಯೇನಾಗಿರೆಯುಂ ತಾನೆಲ್ಲಂ. ಬಾನುದ್ದಂ; ಏನಾಯ್ತು.

ಣಕಾರಕ್ಕೆ—ನಾಣಂ ಪಿಂಗಿಸಿ ಮುಗ್ಧೆಗೆ ಜಾಣಂ ಕೈಗೊಳಿಸುವಂತೆ. ಏಣುಂಟು.

ಲಕಾರಕ್ಕೆ—ಕೀಲಂ ಮಾಡುವ ತಿಗುರಿಯ ।
ಕೋಲಂತೆವೊಲ್ ಇರ್ದ ದಿಟ್ಟಿಜಂತ್ರದ ಕೀಲಂ ॥
ತಳೆದಂತಿರಾಯ್ತು........ ।

ಯಕಾರಕ್ಕೆ= ಈಯಲಿಱಯಲ್ ಶರಣ್ಬುಗೆ ಕಾಯಲ್. ತಾಯೊರ್ವಳೆ ತಂದೆ ಬೇಱೆ. ಬಾಯೂರ್ವಳ್.

ಳಕಾರಕ್ಕೆ— ಆಳೋಳಿಯ ಮಾನಸಂಗೆ ಬಡವಂಗೆ. ತೋಳಾಟಂ; ಬಾಳೊಪ್ಪಂ.

ಅವ್ಯಯಕ್ಕೆ—ಕಲಿ ದಲಿವಂ ಜವನಲ್ಲಿಯುಂಡಿಗೆದಂದನೊ.

ಅನೇಕಾಕ್ಷರಕ್ಕೆ—ಸರಣಾರುವೊಳರೆ [3]ಖಳಸಂಸರಣದೊಳ್. ಪರಲೆಲ್ಲಂ ಮುತ್ತುಮಾಣಿಕಂ ಪಾಸಱಿಗಳ್ ಪರುಸಂಗಳ್. ಎನ್ನ ಮಾತಿನೊಳ್ ತೊದಳುಂಟೆ. ಪವಣಿಲ್ಲಂ.

---

1. ಕಿಸುಗಲ್. 2. ನೋಟಿತ್ಪೊಡೆಳ್ಳಂ. 3. ಖಳಸಂಹರಣದೊಳ್. ಕ. ಖ.

ಅನ್ವಯಕ್ಕೆ ಕೆಲವು ಶಬ್ದಂಗಳೊಳ್ ದ್ವಿತ್ವಮುಂಟು—

ಇನ್ನಾವುದು ಕಜ್ಜಮೆಂದು ತಲೆಯಂ ಜನ ರಂಜನೆಗೇೞ; ಇನ್ನೇನಂಪೇೞ್ವೆಂ.

**ಸೂತ್ರಂ ||** ಧಾತುಗಲುಂ ಪರಮಾದೊಡ ।
ಜಾತಂ ದ್ವಿತ್ವಂ ಯಕಾರದಲ್ಲಿ ವಿಕಲ್ಪಂ ॥
ಮಾತೇನುಯ್ನೆಯ್ಸುಯ್ಬ ।
ಯ್ಧಾತುಗಳೊಳ್ ದ್ವಿತ್ವಮಲ್ಲದಿಲ್ಲ ವಿಕಲ್ಪಂ ॥ ೭೦ ॥

**ವೃತ್ತಿ.**—ನ ಣ ಲ ಯ ಳ ಕಾರಂಗಳಂತ್ಯಮಾದ ಧಾತುಗೆ ಅಲ್ಪರಮಾದೊಡಂ ದ್ವಿತ್ವಮಿಲ್ಲ; ಯಕಾರಾಂತದಲ್ಲಿ ವಿಕಲ್ಪಂ; ಉಯ್ ನೆಯ್ ಸುಯ್ ಬಯ್ ಎಂಬಿವರ್ಕೆ ಅಲ್ಪರಮಾದೊಡಂ ವಿಭಕ್ತಿಸ್ವರಂ ಪರಮಾದೊಡಂ ದ್ವಿತ್ವಂ ನಿತ್ಯಂ.

**ಪ್ರಯೋಗಂ.**—ಅದ್ವಿತ್ವಕ್ಕೆ–ಎನಲ್ತಕ್ಕಂ; ತಿನಲ್ಕೊಂಡಂ; ಉಣಲ್ಬಂದಂ; ಮೆಲಲ್ವೋದಂ; ಕೊಲಲ್ಬಗೆವಂ; ಕೊಳಲ್ಸಾರ್ದಂ; ಕಳಲ್ನೋಡಿದಂ.

ಯತ್ವಕ್ಕೆ—ಪೊಯಲುಂ, ಪೊಯ್ಯಲುಂ; ಕೊಯಲುಂ, ಕೊಯ್ಯಲುಂ.—ಆದಿ ದೀರ್ಘಮಾದೊಡಂ ಅನೇಕಾಕ್ಷರಮಾದೊಡಂ ವಿಭಕ್ತಿಸ್ವರಮುಂ ಪರಮಾದೊಡಂ ಆರಯ್ ಎಂಬ ಧಾತುಗೆ ದ್ವಿತ್ವವಿಕಲ್ಪಂ—ಆರಯಲುಂ, ಆರಯ್ಯಲುಂ; ಆರಯಿಂ, ಆರಯ್ಯಿಂ; ಆರಯೆ, ಆರಯ್ಯೆ—ಎಂಬಂತೆ.

ಉಯ್ಯಾದಿ ನಿತ್ಯದ್ವಿತ್ವಕ್ಕೆ–ಉಯ್ಯಂ; ನೆಯ್ಯರ್; ಸುಯ್ಯಯ್; ಬಯ್ಯೆವು; ಉಯ್ಯಲುಂ, ನೆಯ್ಯಲುಂ—ಎಂಬಂತೆ.

ಸಮುಚ್ಚಯ ವಶದಿಂದೆಕಾರಾದಿಸ್ವರಂ ಪರಮಾದೊಡೆ ದ್ವಿತ್ವಮಿಲ್ಲ—ಎನೆ; ಕೊಲೆ; ಉಣೆ.

**ಸೂತ್ರಂ ||** ಪ್ರತಿಷೇಧದ ಧಾತುಗೆ ಮುಂ ।
ದೆ ತಱುಂಬೆ ವಿಭಕ್ತಿ ಪೂರ್ವಕಾಲಕ್ರಿಯೆಯೊಳ್ ॥
ಪ್ರತಿಷೇಧದದೆಂಬುದು ಮುಂ ।
ದೆ ತೋಱೆ ಮೇಣ್ ದ್ವಿತ್ವವೃತ್ತಿ ನಿತ್ಯಮೆನಿಕ್ಕುಂ ॥ ೭೧ ॥

.................................................................................................

**ಟೀಕೆ.**—(ಅನುವರ್ತನೆ—ನ ಣ ಲ ಯ ಳ ಕಾರಂಗಳಂತ್ಯವಾದ) ಧಾತುಗೆ= ಧಾತುಗಳ್ಗೆ, ಅಲುಂ=ಅಲ್ ಎಂಬುದುಂ, ಉಂ ಎಂಬ ಸಮುಚ್ಚಯದಿಂದೆ ಎಕಾರಾದಿ ಸ್ವರಂಗಳುಂ, ಪರಂ=ಮುಂದು, ಆದೊಡೆ=ಆದರೆ, ದ್ವಿತ್ವಂ=ದ್ವಿರ್ಭಾವಂ, ಅಜಾತಂ= ಹುಟ್ಟದು ; ಯಕಾರದಲ್ಲಿ = ಯಕಾರಾಂತ ಧಾತುವಿನಲ್ಲಿ, ವಿಕಲ್ಪಂ = ವಿಕಲ್ಪವಾಗಿ ಬರ್ಪುದು; ಮಾತೇಂ=ಹೇೞ್ವುದೇಂ, ಉಯ್ನೆಯ್ಸುಯ್ಬಯ್ಧಾತುಗಳೊಳ್ = ಉಯ್,

**ವೃತ್ತಿ.**—ಪ್ರತಿಷೇಧದರ್ಥದೊಳೆ ಧಾತುವಿಂಗೆ ವಿಭಕ್ತಿ ಪರಮಾದೊಡಂ, ಭೂತಕಾಲಕ್ರಿಯೆಯೊಳ್ ಪ್ರತಿಷೇಧಮನುಸಿರ್ವ ಅದೆ ಎಂಬುದು ಪರಮಾದೊಡಂ ನ ಣ ಲ ಯ ಳಂಗಳ್ಗೆ ದ್ವಿತ್ವವೃತ್ತಿ ನಿತ್ಯಂ.

**ಪ್ರಯೋಗಂ.**—ವಿಭಕ್ತಿಗೆ—ಎನ್ನಂ, ಎನ್ನರ್; ಉಣ್ಣಂ, ಉಣ್ಣರ್; ಮೆಲ್ಲಯ್, ಮೆಲ್ಲರ್; ಬಯ್ಯೆನ್, ಬಯ್ಯೆವು; ಕೊಳ್ಳೆನ್, ಕೊಳ್ಳೆವು.

ಅದೆಗೆ—ಎನ್ನದೆ, ತಿನ್ನದೆ, ಉಣ್ಣದೆ, ಒಲ್ಲದೆ, ಬಯ್ಯದೆ, ಕೊಳ್ಳದೆ.

ಮೇಣೆಂಬುದಱಿಂ ಕಳ್ ಎಂಬ ಧಾತುವಿಂಗೆಲ್ಲಿಯುಂ ದ್ವಿತ್ವವಿಲ್ಲ—ಕಳಲ್ವೋದಂ, ಕಳಲ್ಬಂದಂ, ಕಳದೆ ಬಂದಂ—ಇಂತಱಿವುದು.

ಇದು ಸಮಸ್ತ ಶಾಬ್ದಿಕಜನ ಮನೋಜನಿತ ಶಬ್ದಸಂದೇಹಶಲ್ಯ
ಚಾರುಚುಂಬಕಾಯಮಾನಾನೂನ ಕರ್ಣಾಟಕ ಲಕ್ಷಣ
ಶಿಕ್ಷಾಚಾರ್ಯ ಸುಕವಿ ಕೇಶಿರಾಜ ವಿರಚಿತ
ಮಪ್ಪ ಶಬ್ದಮಣಿದರ್ಪಣದೊಳ್
ಸಂಧಿಕಾರ್ಯಮೆಂಬ
ಪ್ರ ಥ ಮ ಸ ಂ ಧಿ
ಸಂಪೂರ್ಣಂ.

---

ನೆಯ್, ಸುಯ್, ಬಯ್ ಎಂಬ ಧಾತುಗಳಲ್ಲಿ, ದ್ವಿತ್ವಮಲ್ಲದೆ = ದ್ವಿರ್ಭಾವಮಲ್ಲದೆ, ವಿಕಲ್ಪಂ, ಇಲ್ಲ=ಉಂಟಾಗದು. ॥ ೭೦ ॥

**ಟೀಕೆ.**— (ಅನುವರ್ತನೆ—ನ ಣ ಲ ಯ ಳ ಕಾರಂಗಳಂತ್ಯವಾದ) ಪ್ರತಿಷೇಧದ=ಪ್ರತಿಷೇಧಾರ್ಥದ, ಧಾತುಗೆ=ಧಾತುಗಳ್ಗೆ, ಮುಂದೆ=ಮುಂದುಗಡೆಯಲ್ಲಿ, ವಿಭಕ್ತಿ=ಪ್ರತ್ಯಯಂ, ತಱುಂಬೆ=ಸಿಂದಿರೆ, ಮೇಣ್=ಅದಲ್ಲದೆ, ಪೂರ್ವಕಾಲ ಕ್ರಿಯೆಯೊಳ್=ಭೂತಕಾಲ ಕ್ರಿಯೆಯಲ್ಲಿ, ಪ್ರತಿಷೇಧದ=ಪ್ರತಿಷೇಧಾರ್ಥದ, ಅದೆ ಎಂಬುದು, ಮುಂದೆ=ಮುಂಗಡೆಯಲ್ಲಿ, ತೋಱೆ = ಕಾಣಿಸೆ, ದ್ವಿತ್ವವೃತ್ತಿ = ದ್ವಿರ್ಭಾವದ ವೃತ್ತಿ, ನಿತ್ಯಂ, ಎನಿಕ್ಕುಂ=ಎನಿಸುವುದು. ॥ ೭೧ ॥

## ಎರಡನೆಯ ಸಂಧಿ

---

### ನಾಮಪ್ರಕರಣಂ

**ಸೂತ್ರಂ** ‖ ಕ್ರಿಯೆಯಂ ನುಡಿಯದುದು ವಿಭ ।
ಕ್ತಿಯನಿಲ್ಲದುದರ್ಥಮುಳ್ಳುದಂತದು ಲಿಂಗಂ ‖
ನಿಯತ ಚತುರ್ಭೇದಮದಾ ।
ರಯೆ ಕೃತ್ತದ್ಧಿತ ಸಮಾಸ ನಾಮ ಸ್ಥಿತಿಯಿಂ ‖ ೭೨ ‖

**ವೃತ್ತಿ.**—ಕ್ರಿಯಾವಾಚಕಮಾಗಿ ಸಲ್ಲದುದು, ಸಪ್ತವಿಭಕ್ತಿಗಳನಿಲ್ಲದುದು, ನಿರರ್ಥಮಾಗಿ ಸಲ್ಲದುದು ಲಿಂಗಮೆನಿಸುಗುಂ; ಆ ಲಿಂಗಂ ಕೃತ್ತೆಂದು, ತದ್ಧಿತಮೆಂದು, ಸಮಾಸಮೆಂದು, ನಾಮಮೆಂದು, ನಾಲ್ಕು ತೆಱನಕ್ಕುಂ.

**ಪ್ರಯೋಗಂ.**—ನಾಮವಿಭಕ್ತಿ ಪತ್ತಿಸುವುದು.

ಕೃತ್ತಿಂಗೆ.—ಮಾಡಿದ, ಬೇಡಿದ, ನೋಡಿದ, ಕೂಡಿದ— ಎಂದಿರಿಸಿ, ಕೃತ್ತನಱಿವುದು; ತಱುವಾಯಿಂ—ಮಾಡಿದಂ, ಮಾಡಿದನಂ, ಮಾಡಿದನಿಂ, ಮಾಡಿದಂಗೆ, ಮಾಡಿದನತ್ತಣಿಂ, ಮಾಡಿದನ, ಮಾಡಿದನೊಳ್ ಎಂದೀಪರಿ ವಿಭಕ್ತಿಮಾಲೆಯಕ್ಕುಂ.

ತನ್ನ ನೀಳ್ದ ಜಸದಿಂ ಬೆಳ್ದಿಂಗಳಂ ಮಾಡಿದಂ. ಬೇಡಿದನಿಷ್ಟಮುಂ ಸಲಿಪುದುಂ ಕರ್ಣಂಗೆ ಜನ್ಮವ್ರತಂ. ಕೂಡಿದಂಗೆರಡಂ ಬಗೆವಾತನುಂ ನರಕದೊಳ್ ಬೀೞ್ವಲ್ಲಿಗೇಂ ಸಂದೆಯಂ.

ತದ್ಧಿತಕ್ಕೆ.— ಅಡಪವಳ, ಮಡಿವಳ—ಎಂದಿರಿಸಿ, ತದ್ಧಿತಮನಱಿವುದು ; ತಱುವಾಯಿಂ—ಅಡಪವಳಂ, ಅಡಪವಳನಂ, ಅಡಪವಳನಿಂ, ಅಡಪವಳಂಗೆ, ಅಡಪವಳನತ್ತಣಿಂ, ಅಡಪವಳನ, ಅಡಪವಳನೊಳ್— ಇಂತಕ್ಕುಂ.

ಷಟ್ಸಮಾಸಂಗಳ್ಗಂ ಸಪ್ತವಿಭಕ್ತಿಯಂ ಪತ್ತಿಸುವುದು.

---

**ಟೀಕೆ.**—ಕ್ರಿಯೆಯಂ=ಕ್ರಿಯಾರ್ಥವಂ, ನುಡಿಯದುದು=ಹೇಳದುದು, ವಿಭಕ್ತಿಯಂ=ಸಪ್ತವಿಭಕ್ತಿಗಳಂ, ಇಲ್ಲದುದು=ಇಲ್ಲದೆ ಇರ್ದುದು, ಅರ್ಥಂ=ಪುರುಳ್, ಉಳ್ಳುದು=ಉಂಟಾದುದು, ಅಂತು=ಹಾಗೆ, ಅದು, ಲಿಂಗಂ=ಲಿಂಗವೆನಿಸುವುದು ; ಅದು=ಆ ಲಿಂಗಂ, ಆರಯೆ=ವಿಚಾರಿಸೆ, ಕೃತ್ತದ್ಧಿತ ಸಮಾಸ ನಾಮ=ಕೃಲ್ಲಿಂಗ ಮೆಂಬ, ತದ್ಧಿತಲಿಂಗಮೆಂಬ, ಸಮಾಸಲಿಂಗಮೆಂಬ, ನಾಮಲಿಂಗಮೆಂಬ, ಸ್ಥಿತಿಯಿಂ=ಇರ್ಕೆಯಿಂದೆ, ನಿಯತ=ನಿಶ್ಚಿತವಾದ, ಚತುರ್ಭೇದಂ=ನಾಲ್ಕು ಭೇದವಾಗಿರ್ಪುದು. ‖ ೭೨ ‖

ಕನ್ನಡ ಸಮಾಸಕ್ಕೆ—ತೆಂಗಾಳಿ, ತೆಂಗಾಳಿಯಂ, ತೆಂಗಾಳಿಯಿಂ, ತೆಂಗಾಳಿಗೆ, ತೆಂಗಾಳಿಯತ್ತಣಿಂ, ತೆಂಗಾಳಿಯ, ತೆಂಗಾಳಿಯೊಳ್.—ಇಮ್ಮಾವು; ಈರೈದು; ಕುಡುವಿಲ್ಲಂ; ಮರ ಗಿಡು ಬಳ್ಳಿ ಪುಲ್ಪೊದಱ್ ಪಕ್ಕಿ ಮಿಗಂಗಳ್; ಮುಂಗಯ್.

ಸಂಸ್ಕೃತ ಸಮಾಸದಲ್ಲಿ— ಪುರವನ, ನೀಲೋತ್ಪಲ, ತ್ರಿಶೂಲ, ಸದಯ, ತರುಲತೆ, ಜಿತಮದನ—ಎಂಬಿವುಮವಱಂತೆ ಸಮಾಸಲಿಂಗಂಗಳಪ್ಪುವು; ಇವರ್ಕಂ ವಿಭಕ್ತಿಯಂ ಪತ್ತಿಸುವುದು—ಪುರವನಂ, ಪುರವನಮಂ, ಪುರವನದಿಂ ಪುರವನಕ್ಕೆ, ಪುರವನದತ್ತಣಿಂ, ಪುರವನದ, ಪುರವನದೊಳ್.

'ಆದವಿಷ್ಣು' ಎಂಬ (ಕನ್ನಡದ) ಗಮಕ ಸಮಾಸಮುಂ 'ಪಿರಿದೀವಂ' ಎಂಬ (ಕನ್ನಡದ) ಕ್ರಿಯಾ ಸಮಾಸಮುಂ ಕೃತ್ಪ್ರವಿಷ್ಟ ಲಿಂಗಂಗಳ್; ಇವುಮವಱಂತೆ ಸಲ್ವುವು—ಜಲದನಿಭೋರಸ್ಥಲನಾದವಿಷ್ಣು ವಿಜಯಾದಿತ್ಯಂ; ಪಿರಿದೀವಂ ನಿಲೆ ನುಡಿವಂ ಸೆರಗಂ ಬೆರಗಂ ಪ್ರತಾಪಿ.

ನಾಮಲಿಂಗಕ್ಕೆ.—ಅರಸ, ಇಂದ್ರ, ಮೊಲ, ವರಾಹ, ಹರಿಣ, ಮೂಷಕ—ಎಂದಿರಿಸಿ ಸಪ್ತವಿಭಕ್ತಿಯಂ ಪತ್ತಿಸುವುದು—ಅರಸಂ, ಅರಸನಂ, ಅರಸನಿಂ, ಅರಸಂಗೆ, ಅರಸನತ್ತಣಿಂ, ಅರಸನ, ಅರಸನೊಳ್—ಈ ಪರಿಯಿನಱಿವುದು. ಅರಸಂ ಮೂರ್ಖಂ ಸಚಿವರ್ ಸರಸ್ವತೀದ್ರೋಹರ್. ಆಡಿದನಿಂದ್ರನಿಂದ್ರರನಿತುಂ ಕೈವಾರಮಂ ಮಾಡಿದರ್. ಇಂದುಬಿಂಬದ ಮೊದಲಂ ಕಲಿಘೂಕವರಾಹ ನಗ್ನಿಮಿತ್ರನ ಹರಿಣಂ. ವಿನಾಯಕನ ಮೂಷಕಂ. 'ಅರಸ' ನೆಂಬುದರ್ಕೆ 'ಅರಸು' ಎಂದುಮುಂಟು.

ಕ್ರಿಯಾರ್ಥಮಂ ನುಡಿವ ಧಾತು ಲಿಂಗಮಲ್ಲದು—ತೀಡು, ನೋಡು, ಬೇಡು, ಇಸು, ಪಸು—ಎಂಬಿವು ಮೊದಲಾದುವು.

**ಸೂತ್ರಂ** ॥ ಭೂತ ಭವಿಷ್ಯತ್ಕ್ರಿಯೆಗಳು ।
ಪೇತ ವಿಭಕ್ತಿಗಳನುಱಿಯೆ ಕೃತ್ತಪ್ಪುವಸಂ ॥
ಭೂತಂ ಸಂಪ್ರತಿ ವಿಧಿಗಳೊ ।
ಳಾ ತೆಱದಿಂ ಮಧ್ಯಮೋತ್ತಮ ಕ್ರಿಯೆಗಳೊಳಂ ॥ ೭೩ ॥

---

**ಟೀಕೆ.**—ಭೂತ=ಭೂತಕಾಲದ, ಭವಿಷ್ಯತ್=ಭವಿಷ್ಯತ್ಕಾಲದ, ಕ್ರಿಯೆಗಳ್=ಕ್ರಿಯಾಪದಂಗಳ್, ಉಪೇತ=ತಮ್ಮಲ್ಲಿ ಕೂಡಿರ್ದ, ವಿಭಕ್ತಿಗಳಂ=ಕ್ರಿಯಾವಿಭಕ್ತಿಗಳಂ; ಉಱಿಯೆ=ಕಳೆಯೆ, ಕೃತ್ತು=ಕೃಲ್ಲಿಂಗಂ, ಅಪ್ಪುವು=ಆಗುವುವು; ಸಂಪ್ರತಿ=ವರ್ತಮಾನ ಕಾಲಕ್ರಿಯೆಗಳಲ್ಲಿ, ವಿಧಿಗಳೊಳ್=ವಿಧಿಕ್ರಿಯೆಗಳಲ್ಲಿ, ಆ ತೆಱದಿಂ=ಆ ರೀತಿಯಿಂದೆ,

**ವೃತ್ತಿ.**—ಭೂತಕಾಲ ಕ್ರಿಯೆಯುಂ ಭವಿಷ್ಯಂತಿಯ ಕ್ರಿಯೆಯುಂ ತಮ್ಮ ತಮ್ಮಂತರ್ಗತಾಗಮಂಗಳಂ ಬೆರಸಿರ್ದು, ವಿಭಕ್ತಿಮಾತ್ರಮಂ ಕಳೆಯೆ, ಕೃಲ್ಲಿಂಗಮಪ್ಪುವು; ವರ್ತಮಾನಕ್ರಿಯೆಯುಂ ವಿಧಿಕ್ರಿಯೆಯುಂ ಮಧ್ಯಮ ಪುರುಷಕ್ರಿಯೆಯುಂ ಉತ್ತಮಪುರುಷಕ್ರಿಯೆಯುಂ ಕೃಲ್ಲಿಂಗಮಾಗವು; ಅವರ್ಕೆ (ನಾಮ) ವಿಭಕ್ತಿಯಂ ಪತ್ತಿಸಲಾಗದು.

**ಪ್ರಯೋಗಂ.**—ಭೂತವತಿಯ ಕೃತ್ತಿಂಗೆ—'ನಲಿದಂ' ಎಂಬಲ್ಲಿ ಅಮ್ ಎಂಬ ವಿಭಕ್ತಿಯಂ ಕಳೆದು, ನಲಿದ ಎಂಬ ಕೃತ್ತನಿರಿಸಿ, ನಾಮವಿಭಕ್ತಿಯಂ ಪತ್ತಿಸಿ, ನಲಿದಂ, ನಲಿದನಂ, ನಲಿದನಿಂ ಎಂದು ಮಾಳ್ಪುದು.

ಬಾಳ್ದನೆಂದು ಮದನಂ ನಲಿದಂ ನಡೆ ನೋಡಿ ಚೂತಮಂ.

ಕಂ॥ ಮದಗಜವೆರಡಱ ಬಾಲದ ।
ಮೊದಲಂ ಪಿಡಿದೆತ್ತಿಯೊತ್ತಿ ಸುರ್ಗುತ್ತಿರೆಯಾ ॥
ಸ್ಯದಿನುಗುವ ರಕ್ತಮುರಿಯೆನೆ ।
ತಿದಿಯೊತ್ತುವ ಕಮ್ಮಱಂಬೊಲಿರ್ದಂ ಭೀಮಂ ॥

ಬಾಲವಣಂ ಬೇಡುವನೊಂದೆ ಗೊಂದೆಗಮನಂಗಾರಾತಿಯಂ ಹೈಹಯಂ.

ಬಂದನೀಗಳ್ ಪೆಱನಲ್ಲಂ ದುರ್ಜಯಂ ಕೌರವ ಕುಳ ನಳಿನೀ ಕುಂಜರಂ ಭೀಮಸೇನಂ.

ಭವಿಷ್ಯಂತಿಯ ಕೃತ್ತಿಂಗೆ–ಬೇಡುವಂ, ಪೊಯ್ವಂ. ಆ ವೇಶ್ಯಾವಾಟದೊಳ್ ಧೂರ್ಜಟಿಯ ನೊಸಲ ಕಣ್ಣಿಂ ಸ್ಮರಂ ನಂದೆ ಪೊಯ್ವಂ.

ಕೃತ್ತಾಗದವರ್ಕೆ—ನೋಡಿದಪಂ, ಮಾಡಿದಪಂ; ಕುಡು, ತುಡು; ಬೇಡಿದಯ್, ಬೇಡಿದಿರ್; ಪಾಡುವೆನ್, ಪಾಡುವೆವು—ಎಂಬಂತೆ.

**ಸೂತ್ರಂ** ॥ ವಿನುತ ಕ್ರಿಯಾತ್ಮಕಂಗಳು ।
ಮೆನಿಸುವ ಸಂಸ್ಕೃತದ ಭಾವವಚನಂಗಳನಾ ॥
ಯ್ದನಿತರ್ಕಮಿಸು ಪ್ರತ್ಯಯ ।
ವನೆ ಪತ್ತಿಸಿ ನಿಱಿಸೆ ಬರ್ಕುಮಾ ಕೃಲ್ಲಿಂಗಂ ॥ ೭೪ ॥

..............................

ಮಧ್ಯಮ=ಮಧ್ಯಮ ಪುರುಷದ, ಉತ್ತಮ=ಉತ್ತಮ ಪುರುಷದ, ಕ್ರಿಯೆಗಳೊಳಂ= ಕ್ರಿಯೆಗಳಲ್ಲಿಯುಂ, ಅಸಂಭೂತಂ=ಕೃತ್ತು ಹುಟ್ಟದು. ॥ ೭೩ ॥

**ವೃತ್ತಿ.**—ಕನ್ನಡಕ್ಕೆ ಕ್ರಿಯಾತ್ಮಕಂಗಳಪ್ಪ ಸಂಸ್ಕೃತದ ಭಾವ ವಚನಂಗಳ ನಾಯ್ಪು ಕೊಂಡು, ಇಸುಪ್ರತ್ಯಯಮಂ ಪತ್ತಿಸಿ, ಕೃಲ್ಲಿಂಗಮಂ ಮಾಱ್ಪುದು.

**ಪ್ರಯೋಗಂ.**—ಭಾವಿಸಿದಂ, ಭಂಗಿಸಿದಂ, ಭಾಗಿಸಿದಂ, ರಂಗಿಸಿದಂ, ರಾಗಿಸಿದಂ, ಭೋಗಿಸಿದಂ, ಪ್ರೇರಿಸಿದಂ, ವರ್ಣಿಸಿದಂ, ವರ್ತಿಸಿದಂ, ತರ್ಜಿಸಿದಂ; ಚರಿಸಿದಂ, ಚರಯಿಸಿದಂ; ಧರಿಸಿದಂ, ಧರಯಿಸಿದಂ.

**ಸೂತ್ರಂ ॥** ಸಮುಪಾತ್ತಕ್ರಿಯೆಯುಂ ವಾ ।
ಕ್ಯಮಾಲೆಯುಂ ಸುಕವಿ ರಚಿತ ನಾಮಮುದಾದಂ ॥
ದಮುಗುರ್ಱಂ ಲಿಂಗಂ ಮಾರ್ಗ ।
ಕ್ರಮಮಂ ಕಾಣಲ್ಕೆ ಬರ್ಪುದಾದ್ಯರ ಕೃತಿಯೊಳ್ ॥ ೭೫ ॥

**ವೃತ್ತಿ.**—ಎಯ್ದಲ್ಪಟ್ಟ ಕ್ರಿಯೆಯುಂ ವಾಕ್ಯಮಾಲೆಯುಂ ಕವೀಶ್ವರರಿಂ ರಚಿತವಾಗಿ ನಾಮಮಾದಲ್ಲಿ ಲಿಂಗಮಪ್ಪುವು; ಅವಱ ತೆಱಮಂ ಪುರಾತನ ಕೃತಿಗಳಲ್ಲಿ ಕಾಣಬರ್ಪುದು.

**ಪ್ರಯೋಗಂ.**—ಕ್ರಿಯೆಗೆ–ನಮೋಸ್ತುಗಳಿರ್ಪಂದದಿನಿರ್ದಂ. (ನಮೋಸ್ತುಗಳೆಂದು ಸವಣರ್ಗೆ ಪೆಸರಾಯ್ತು).

ವಾಕ್ಯಮಾಲೆಗೆ—ಅಹಿಂಸಾ ಪರಮೋ ಧರ್ಮವೆಂಬುದನೀ ತತ್ಸವಿತು
ವರ್ರೇಣ್ಯರಱಿದರ್ ತ್ರೈಲೋಕ್ಯಚೂಡಾಮಣೀ (ತತ್ಸವಿತು
ವರ್ರೇಣ್ಯರೆಂದು ಶ್ರೌತರ್).

---

**ಟೀಕೆ.**—ವಿನುತ=ಕೊಂಡಾಡಲ್ಪಟ್ಟ, ಕ್ರಿಯಾತ್ಮಕಂಗಳುಂ=ಕ್ರಿಯಾಸ್ವರೂಪಂಗಳುಂ, ಎನಿಸುವ, ಸಂಸ್ಕೃತದ=ಸಕ್ಕದದ, ಭಾವ ವಚನಂಗಳಂ=ಭಾವ ವಾಚಿಗಳಂ, ಆಯ್ದು=ಆಯ್ದುಕೊಂಡು, ಅನಿತರ್ಕಂ=ಅಷ್ಟರ್ಕೆಯುಂ, ಇಸು ಪ್ರತ್ಯಯವನೆ=ಇಸು ಎಂಬ ಪ್ರತ್ಯಯವನೆ, ಪತ್ತಿಸಿ=ಪೊರ್ದುಗೆಯಂ ಮಾಡಿ, ನಿಱಿಸೆ=ನಿಱುಗೆ ಮಾಡೆ, ಆ ಕೃಲ್ಲಿಂಗಂ=ಆ ಹಿಂದೆ ಪೇೞ್ದ ಕೃಲ್ಲಿಂಗಂ, ಬರ್ಕುಂ=ಬರ್ಪುದು.–ಅದೆಂತೆಂದೊಡೆ.* ॥೭೪॥

**ಟೀಕೆ.**—ಸಂ=ಲೇಸಾಗಿ, ಉಪಾತ್ತ = ಎಯ್ದಲ್ಪಟ್ಟ, ಕ್ರಿಯೆಯುಂ, ವಾಕ್ಯಮಾಲೆಯುಂ=ವಾಕ್ಯಂಗಳ ಸಮೂಹಮುಂ, ಸುಕವಿ= ಸತ್ಕವೀಶ್ವರರಿಂದೆ, ರಚಿತ= ರಚಿಸಲ್ಪಟ್ಟ, ನಾಮಂ=ಪೆಸರ್, ಅದು, ಆದಂದು=ಆದ ಕಾಲದಲ್ಲಿ, ಲಿಂಗಂ=ಲಿಂಗವೆಂಬ ಸಂಜ್ಞೆ, ಅಮುಗುರ್ಱಂ=ಪೊರ್ದುಗೆಯುಪ್ಪುದು; ಮಾರ್ಗಕ್ರಮಮಂ= ಅವಱ

* ವಿಚಾರಂ.–ಭಾವ, ಭಂಗ, ಭಾಗ, ಭೋಗ, ಧ್ಯಾನ—ಎಂಬಿವಾದಿಯಾದ ಭಾವವಾಚಿಗಳ ಮೇಲೆ ಇಸು ಪ್ರತ್ಯಯಂ ಪತ್ತೆ, ಭಾವಿಸು, ಭಂಗಿಸು, ಭಾಗಿಸು, ಭೋಗಿಸು, ಧ್ಯಾನಿಸು—ಎಂದು ಕನ್ನಡಕ್ಕೆ ಧಾತುವಾದಲ್ಲಿ ಆಖ್ಯಾತದಲ್ಲಿ ಕ್ರಿಯಾಪದಂಗಳಾಗೆ, ಭೂತಭವಿಷ್ಯತ್ಕ್ರಿಯೆಗಳುಪೇತ ವಿಭಕ್ತಿಗಳನುಱುಯೆ, ಕೃತ್ತ್ರಪ್ಪುವೆಂದಱಿವುದು.

ತೋಳ್ಗೊಪ್ಪುವನಾಳ್ದರ ಕೈದುವೊತ್ತರ ದೇವಂ, ಗುಣಕ್ಕೆ ನಲ್ಲಗಣೇಶಂ, ಸೊರ್ಕಾನೆಗಳಂಕಂ.

ಸೂತ್ರಂ ॥ ಕ್ಷಿತಿಯೊಳೆ ರೂಢಾನ್ವರ್ಥಾಂ ।
ಕಿತಮೆಂದಾ ನಾಮಮಱಿಗೆ ಮೂದೆಱನಸಮಾ ॥
ಸತೆಯೊಳ್ ನೆಲಸಿರ್ಪುದು ನಿ ।
ಶ್ಚಿತನಾಮಂ ಪಂಚವರ್ಣ ಕೃತ ಪರಿಮಾಣಂ ॥ ೬೬ ॥

ವೃತ್ತಿ.—ರೂಢನಾಮಮೆಂದುಂ, ಅನ್ವರ್ಥನಾಮಮೆಂದುಂ, ಅಕಿಂತ ನಾಮಮೆಂದುಂ, ನಾಮಂ ಮೂದೆಱನಾಗಿರ್ಪುದು. ರೂಢನಾಮಂ ಪ್ರಸಿದ್ಧ ತೆಱ ನಾಗಿರ್ಪುದು. ಅನ್ವರ್ಥನಾಮಂ ಗುಣಾನುರೂಪಮೆಂದುಂ, ಅರ್ಥಾನುರೂಪ ಮೆಂದುಮಿರ್ತೆಱನಾಗಿರ್ಪುದು. ಅಂಕಿತನಾಮಂ ಪೆಸರನ್ನಿಡುವನಿಷ್ಟದಿನೆಂತಾ ದೊಡಮಿರ್ಪುದು. ದಿಟದ ನಾಮಂ ಸಮಾಸಮಿಲ್ಲದೊಂದಕ್ಕರಂ ಮೊದಲಾಗಿ ಅಯ್ದಕ್ಕರಂಬರಮುಂಟು.

ಪ್ರಯೋಗಂ.—ರೂಢನಾಮಕ್ಕೆ—ನೆಲಂ, ಪೊಲಂ, ಜಲಂ—ಎಂಬಂತೆ.

ಗುಣಾನುರೂಪಾನ್ವರ್ಥಕ್ಕೆ—ದಾನಿ ದಯಾಪರನತ್ಯಭಿ ।
ಮಾನಿ ಪರಾಕ್ರಮಿ ಯಶೋರ್ಥಿ ನೀತಿಜ್ಞಂ ವಿ ॥
ದ್ಯಾನಿಲಯನೆನಿಪ್ಪ ನೃಪಂ ।

ಅರ್ಥಾನುರೂಪಾನ್ವರ್ಥಕ್ಕೆ— ಹೆಟಿಗಾಲಂ, ನಿಡುಮೂಗಂ, ಕುಸಿಗೊರಲಂ, ಸವಟಿವಾಯಂ, ಗುಳ್ಳಿಗಂಣಂ, ಹಱಿವಲೆಯಂ —ಎಂಬಂತೆ.

ಅಂಕಿತನಾಮಕ್ಕೆ—ಕಾಟಂ, ಕಸವಂ, ದೂಡಿಗಂ, ಮಾಚಂ, ಮಾರಂ—ಎಂಬಿವು ಮೊದಲಾದುವು. ಸಾರ್ಥಕಮಲ್ಲದುದೆಲ್ಲಾ ಭಾಷೆಗಮಿಾ ತೆಱದೆ ಸಲ್ವುದು.

.................................................................................

ಮಾರ್ಗದ ರೀತಿಯುಂ, ಆದ್ಯರ=ಪೂರ್ವಕವಿಗಳ, ಕೃತಿಯೊಳ್=ಕಾವ್ಯಂಗಳಲ್ಲಿ, ಕಾಣ ಲ್ಕೆ=ಕುಱುಹಿಡಲ್ಕೆ, ಬರ್ಪುದು. ॥ ೬೫ ॥

ಟೀಕೆ.—ಕ್ಷಿತಿಯೊಳೆ=ಭೂಲೋಕದಲ್ಲಿ, ರೂಢ=ರೂಢನಾಮಮೆಂದು, ಅನ್ವರ್ಥ= ಅನ್ವರ್ಥನಾಮಮೆಂದು, ಅಂಕಿತಂ = ಅಂಕಿತನಾಮಮೆಂದು, ಆ ನಾಮಂ = ಆ ಪಿಂದೆ ಪೇೞ್ದ ನಾಮಲಿಂಗಂ, ಮೂದೆಱಂ=ಮೂಱು ತೆರನೆಂದು, ಅಱಿಗೆ=ತಿಳಿಗೆ; ನಿಶ್ಚಿತನಾಮಂ=ರೂಢನಾಮಂ, ಪಂಚವರ್ಣ=ಐದಕ್ಷರದಿಂದೆ, ಕೃತ=ಮಾಡಲ್ಪಟ್ಟ, ಪರಿಮಾಣಂ=ಪ್ರಮಾಣವನುಳ್ಳುದಾಗಿ, ಅಸಮಾಸತೆಯೊಳ್ = ಸಮಾಸವಲ್ಲದುದಱಲ್ಲಿ, ನೆಲಸಿರ್ಪುದು=ನೆಲೆಗೊಂಡಿರ್ಪುದು. ॥ ೬೬ ॥

ದಿಟದ ನಾಮಂಗಳ ಅಕ್ಷರವೃತ್ತಿಗೆ—ಪೂ, ಮರಂ, ಹೊತ್ತಗೆ, ಕವಳಿಗೆ, ಕಟ್ಟವತ್ತಿಗೆ.

**ಸೂತ್ರಂ ||** ಒಳ್ಳಿತು ಮೆಲ್ಲಿತು ಬೆಟ್ಟಿತು ।
ತೆಳ್ಳಿತು ಬಸಿದಸಿದು ಕಡಿದು ನಿಡಿದಿನಿದೆಂಬಂ ॥
ತುಳ್ಳುವು ತು ದು ಕಡೆಯೆನೆ ಕೈ ।
ಕೊಳ್ಳಿಂ ಗುಣವಾಚಿ ಮೇಣ್ ತುಕಾರಂ ದ್ವಿತ್ವಂ ॥ ೬೭ ॥

**ವೃತ್ತಿ.**—ತುಕಾರ ದುಕಾರಂಗಳೆ ಕಡೆಯಾಗಿ ಪಲವು ಗುಣವಚನಂಗಳೊಳವು; ಅವಱೊಳ್ ತುಕಾರಾಂತಕ್ಕೆ ವಿಕಲ್ಪದಿಂ ದ್ವಿತ್ವಮುಂಟು.

**ಪ್ರಯೋಗಂ.**—ಬೆಟ್ಟಿತು, ಬೆಟ್ಟಿತ್ತು; ದಟ್ಟಿತು, ದಟ್ಟಿತ್ತು; ಒಳ್ಳಿತು, ಒಳ್ಳಿತ್ತು; ಮೆಲ್ಲಿತು, ಮೆಲ್ಲಿತ್ತು; ತೆಳ್ಳಿತು, ತೆಳ್ಳಿತ್ತು; ತೋರಿತ್ತು; ನೇರಿತ್ತು; ಕೂರಿತ್ತು; ಉದ್ದಿತ್ತು; ನುಣ್ಣಿತ್ತು; ತಣ್ಣಿತ್ತು; ಬಿಣ್ಣಿತ್ತು; ಗುಂಡಿತ್ತು; ಅಗಲಿತ್ತು, ದೊಡ್ಡಿತ್ತು; ಬಲ್ಲಿತ್ತು—ಎಂಬಂತೆ ನೋಡಿಕೊಳ್ವುದು.

ದುಕಾರಾಂತಕ್ಕೆ—ಬಸಿದು, ಅಸಿದು, ಕಡಿದು, ನಿಡಿದು, ಕರಿದು, ಬಿಳಿದು—ಎಂಬಂತಱಿವುದು.

**ಸೂತ್ರಂ ||** ಅದುವಿದುವುದುವಾವುದುವೆ ।
ಲ್ಲದು ಪೆಱತೇನ್ಪೆಱದೆನಿಪ್ಪ ಶಬ್ದಂಗಳ್ ತ ॥
ಪ್ಪದೆ ಸರ್ವನಾಮಮಕ್ಕುಂ ।
ವಿದಗ್ಧರಿವನಱಿದು ನಿಱಿಕೆ ಲಿಂಗಸ್ಥಿತಿಯೊಳ್ ॥ ೬೮ ॥

**ವೃತ್ತಿ.**—ಅದು, ಇದು, ಉದು, ಆವುದು, ಎಲ್ಲದು, ಪೆಱತು, ಏನ್, ಪೆಱದೆಂಬಿವಾದಿಯಾದುವು ಸರ್ವನಾಮಂಗಳ್.

---

**ಟೀಕೆ.**—ಒಳ್ಳಿತು, ಮೆಲ್ಲಿತು, ಬೆಟ್ಟಿತು, ತೆಳ್ಳಿತು, ಬಸಿದು, ಅಸಿದು, ಕಡಿದು, ನಿಡಿದು, ಇನಿದು, ಎಂಬಂತೆ=ಎಂಬ ಹಾಂಗೆ, ಉಳ್ಳುವು=ಉಂಟಾದ ಶಬ್ದಂಗಳ್, ತು ದು ಕಡೆಯೆನೆ = ತುಕಾರಾಂತ ದುಕಾರಾಂತವೆನೆ, ಗುಣವಾಚಿ=ಗುಣವಚನಂಗಳೆಂದು, ಕೈಕೊಳ್ಳಿಂ = ಒಡಂಬಡಿಂ; ಮೇಣ್ = ವಿಕಲ್ಪದಿಂದೆ, ತುಕಾರಂ = ತುಕಾರಾಂತಂ, ದ್ವಿತ್ವಂ=ದ್ವಿರ್ಭಾವಂ. ॥ ೬೭ ॥

**ಟೀಕೆ.**—ಅದು, ಇದು, ಉದು, ಆವುದು, ಎಲ್ಲದು, ಪೆಱತು, ಏನ್, ಪೆಱದು, ಎನಿಪ್ಪ ಶಬ್ದಂಗಳ್ = ಎನಿಸುವ ಶಬ್ದಂಗಳ್, ತಪ್ಪದೆ = ತೊಲಗದೆ, ಸರ್ವನಾಮಂ= ಸರ್ವನಾಮಂಗಳ್, ಅಕ್ಕುಂ=ಅಪ್ಪುವು; ವಿದಗ್ಧರ್=ವಿದ್ವಾಂಸರ್, ಇವಂ=ಈ ಸರ್ವ

**ಸೂತ್ರಂ ||** ಏನೆಂಬ ಸರ್ವನಾಮಂ ।
ತಾನದು ದಲ್ಲಿಂಗದೇಕವಚನಂ ನಿಜದಿಂ ॥
ಪೀನಂ ಬಹುವಚನಾರ್ಥಮ ।
ನಾನಲ್ ಸಾಲ್ದತ್ತು ಮತ್ತೆ ಕೃತಿಪದ್ಧತಿಯೊಳ್ ॥ ೭೯ ॥

* **ವೃತ್ತಿ.**—ಏನ್ ಎಂಬ ಸರ್ವನಾಮಂ ಸ್ವಭಾವದಿಂ ಲಿಂಗತ್ರಯದೇಕವಚನಂ; ಇದರ್ಕೆ ಬಹುವಚನದೊಳಂ ಬಹುಳದಿಂ ಕಾವ್ಯಮಾರ್ಗದೊಳ್ ಪ್ರಯೋಗಮುಂಟು.

* [ ಸಂ॥ ಕ॥ ಸಾ॥ ಪ॥ ]

**ಪ್ರಯೋಗಂ.**—ಏಕವಚನಕ್ಕೆ— ಅವನೇನ್, ಅವಳೇನ್, ಅದೇನ್.

ಬಹುವಚನಾರ್ಥಕ್ಕೆ—ತತ್ಪರಿಜನಾಲಾಪಂಗಳೇನ್.

**ಸೂತ್ರಂ ||** ಸಮುದಿತ ಸಂಖ್ಯಾವ್ಯಯ ರಹಿ ।
ತಮೆನಿಸಿ ವರ್ತಿಪ ನಿಘಂಟುವಿನ ನಾಮಪದೋ ॥
ತ್ತಮ ವರ್ಣಪ್ರಕೃತಿಗಳಂ ।
ಸಮಸಂಸ್ಕೃತವೆಸರನಿಟ್ಟು ಲಿಂಗಂ ಮಾಳ್ಪರ್ ॥ ೮೦ ॥

**ವೃತ್ತಿ.**—ಸಂಖ್ಯಾವ್ಯಯಂಗಳಂ ಕಳೆದುಳಿದ ನಿಘಂಟುವಿನ ಸುಲಲಿತಾಕ್ಷರಂಗಳಪ್ಪ ನಾಮಪ್ರಕೃತಿಗಳಂ ಕನ್ನಡಕ್ಕೆ ಸರಿಮಾಡಿ, ಸಮಸಂಸ್ಕೃತಮೆಂಬ ಪೆಸರನಿಟ್ಟು, ಶಬ್ದಜ್ಞರ್ ಲಿಂಗಮಂ ಮಾಳ್ಪರ್.

**ಪ್ರಯೋಗಂ.**–(ಕಾಮ) ಕಾಮಂ, (ಭೀಮ) ಭೀಮಂ, (ರಾಮ) ರಾಮಂ, ( ಸೋಮ) ಸೋಮಂ, ( ನಾರದ) ನಾರದಂ. (ನಾರಾಯಣ) ನಾರಾಯಣಂ—ಎಂಬಂತೆ.

---

ನಾಮಂಗಳಂ, ಅಱಿದು = ತಿಳಿದು, ಲಿಂಗಸ್ಥಿತಿಯೊಳ್ = ತ್ರಿವಿಧ ಲಿಂಗಸ್ಥಿತಿಯೊಳ್, ನಿಜಱಿಕೆ=ನಿಜಱಿಗೆ ಮಾಡುಗೆ. ॥ ೭೮ ॥

**ಟೀಕೆ.**—ಏನ್=ಏನೆಂದು, ಎಂಬ ಸರ್ವನಾಮಂ=ಎಂಬ ಸರ್ವನಾಮಶಬ್ದಂ, ತಾನದು=ಅದು ತಾಂ, ದಲ್=ನಿಶ್ಚಯವಾಗಿ, ನಿಜದಿಂ = ಸ್ವಭಾವದಿಂದೆ, ಲಿಂಗದ=ಲಿಂಗತ್ರಯದ, ಏಕವಚನಂ = ಏಕವಚನಮೆನಿಪುದು; ಮತ್ತೆ = ಬಳಿಕಂ, ಕೃತಿಪದ್ಧತಿಯೊಳ್=ಕಾವ್ಯಪದ್ಧತಿಯಲ್ಲಿ, ಪೀನಂ=ವಿಶೇಷವಾಗಿ, ಬಹುವಚನಾರ್ಥಮಂ, ಆನಲ್=ಧರಿಸಲ್, ಸಾಲ್ದತ್ತು=ಸಲುವಳಿಯಾಯ್ತು. ॥ ೭೯ ॥

**ಟೀಕೆ.**—ಸಂ=ಲೇಸಾಗಿ, ಉದಿತ=ಉಂಟಾದ, ಸಂಖ್ಯಾ = ಸಂಖ್ಯಾವಾಚಿಗಳಿಂದೆ, ಅವ್ಯಯ=ಅವ್ಯಯ ಶಬ್ದಂಗಳಿಂದೆ, ರಹಿತಂ=ವಿರಹಿತಂ, ಎನಿಸಿ, ವರ್ತಿಪ=ವರ್ತಿಸುವ, ನಿಘಂಟುವಿನ=ಅಮರಸಿಂಹ ಮೊದಲಾದವರ ಸಂಸ್ಕೃತ ನಿಘಂಟುಗಳ,

ಆ ಸಮಸಂಸ್ಕೃತಂಗಳನಚ್ಚಗನ್ನಡದೊಳ್ ಬೆರಸಿ ಸಮಾಸಮಂ ಮಾಡಲಾಗದು; ಅದರ್ಕುದಾಹರಣೆ—ಮುಖತಾವರೆ, ಕಣ್ಕಮಲಂ—ಎಂಬಂತೆ.

* ಕಂ॥ ಅರಸುಕುಮಾರನನಾಯತ ।
ತರ ಕಡೆಗಣ್ಣಿಂದೆ ನೋಡಿ ಕೆಳದಿಸಮೇತಂ ॥
ಪರಿಗತ ನಗೆಯಿಂದಿರ್ದಂ ।
[1]ಗುರುನಾಣ್ಭರದಿಂದಮೆಱಗಿ ಮುಖತಾವರೆಯಂ ॥

**ಸೂತ್ರಂ ||** ವಿದಿತಮೆನಿಪ್ಪವ್ಯಯಮುಂ ।
ತ್ಯದಾದಿಯುಂ ಶತೃಇಾಂತಮುಂ ಸಂಸ್ಕೃತದೊಳ್ ॥
ಪದವಿಧಿಯಂ ನೆಱೆ ತಳೆದ ।
ಲ್ಲದೆ ಕನ್ನಡದಲ್ಲಿ ಲಿಂಗಮಾಗವು ನಿಜದಿಂ ॥ ೮೧ ॥

**ವೃತ್ತಿ.**—ಪ್ರಸಿದ್ಧಮಪ್ಪವ್ಯಯಂಗಳುಂ ತ್ಯದಾದಿಯುಂ ಶತೃಇಾಂತಮುಂ ಸಂಸ್ಕೃತದೊಳ್ ಸಮಾಸಮಂ ಪಡೆದಲ್ಲದೆ ಕನ್ನಡದೊಳ್ ಸ್ವಭಾವದಿಂ ಲಿಂಗಮಾಗವು.

**ಪ್ರಯೋಗಂ.**—ಅವ್ಯಯಕ್ಕೆ-ಅಂತರ್, ಬಹಿರ್, ಉಚ್ಚೈಸ್, ನೀಚೈಸ್, ಮುಹುರ್, ಪುನರ್, ಅಹಸ್, ಈಷತ್, ಯುಗಪತ್, ಪೃಥಕ್—ಇವು ಮೊದಲಾದ ಸಹಜಾವ್ಯಯಂಗಳನಿಱಿಸಿ ವಿಭಕ್ತಿಯಂ ಪತ್ತಿಸಲಾಗದು.

............................................................

ನಾಮಪದ=ಅಭಿಧಾನ ಪದಂಗಳಾದ, ಉತ್ತಮವರ್ಣ=ಸುಲಲಿತಾಕ್ಷರಂಗಳಾದ, ಪ್ರಕೃತಿಗಳಂ=ವಿಭಕ್ತಿರಹಿತಮಾದ ಶಬ್ದಂಗಳಂ, ಸಮಸಂಸ್ಕೃತವೆಸರನಿಟ್ಟು = ಸಮಸಂಸ್ಕೃತವೆಂಬ ಹೆಸರಿಟ್ಟು, ಲಿಂಗಂ ಮಾಳ್ಪರ್=ಶಬ್ದಜ್ಞರ್ ಲಿಂಗವಂ ಮಾಡುವರ್. ॥ ೮೦ ॥

**ಟೀಕೆ.**—ವಿದಿತಂ=ಪ್ರಸಿದ್ಧಂ, ಎನಿಪ್ಪ=ಎನಿಸುವ, ಅವ್ಯಯಮುಂ=ಅವ್ಯಯಶಬ್ದಂಗಳುಂ, ತ್ಯದಾದಿಯುಂ=ತ್ಯತ್ ಎಂಬುದಾದಿಯಾದ ಸರ್ವನಾಮಶಬ್ದಂಗಳುಂ, ಶತೃಇಾಂತಮುಂ = ಶತೃಇಾಂತಶಬ್ದಮುಂ, ಸಂಸ್ಕೃತದೊಳ್=ಸಂಸ್ಕೃತದಲ್ಲಿ, ಪದವಿಧಿಯಂ=ಸಮಾಸವಿಧಿಯಂ, ನೆಱೆ=ಚೆನ್ನಾಗಿ, ತಳೆದಲ್ಲದೆ=ಧರಿಸಿದಲ್ಲದೆ, ಕನ್ನಡದಲ್ಲಿ=ಕರ್ಣಾಟಕದಲ್ಲಿ, ನಿಜದಿಂ=ಸ್ವಭಾವದಿಂದೆ, ಲಿಂಗಂ=ಲಿಂಗಂಗಳ್, ಆಗವು=ಸಲುವಳಿಯಾಗವು. ॥ ೮೧ ॥

* ಕಂ || ನರಪತಿ ತನಯನನಾಯತ ।
ತರಳಾಪಾಂಗದೊಳೆ ನೋಡಿ ಕೆಳದಿಯರೊಡನಾಂ ॥
ಪರಿಗತ ಹಾಸ್ಯದೊಳಿರ್ದ್ದಂ ।
ಗುರು ಲಜ್ಜಾಭರದಿನೆಱಗಿ ಮುಖಸರಸಿಜಮಂ ॥

ಕವಿರಾಜಮಾರ್ಗ 1. 59.

1. ಗುರುನಾಣಾಭರದಿನೆಱಗಿ ಮುಖತಾವರೆಯಂ ॥

ಅವ್ಯಯಸಮಾಸಕ್ಕೆ—ಅಂತರ್ಮುಖ, ಬಹಿರಂಗ, ಉಚ್ಚೈರ್ಧ್ಯಾನ, ನೀಚೈರ್ಗತ, ಮುಹುರ್ನಿರೀಕ್ಷಣ, ಪುನಃಪಾಕ, ಪ್ರಾತಃಕಾಲ, ಅಹರ್ನಿಶ, ಈಷದ್ಭೇದ, ಯುಗಪತ್ಸಂಭ್ರಮ, ಪೃಥಕ್ಚರಿತ್ರ–ಎಂದು ಸಮಾಸಮಂ ಮಾಡಿ–ಅಂತರ್ಮುಖಂ, ಅಂತರ್ಮುಖನಂ, ಅಂತರ್ಮುಖನಿಂ, ಅಂತರ್ಮುಖಂಗೆ, ಅಂತರ್ಮುಖನತ್ತಣಿಂ, ಅಂತರ್ಮುಖನ, ಅಂತರ್ಮುಖನೊಳ್—ಎಂಬಂತೆಲ್ಲಕ್ಕಂ ವಿಭಕ್ತಿಯಂ ಪತ್ತಿಸುವುದು.

ತ್ಯದಾದಿಯಾದ ಸರ್ವನಾಮಂಗಳ್ಗೆ—ತ್ಯದ್, ತದ್, ಯದ್, ಏತದ್, ಇದಮ್, ಅದಸ್, ಯುಷ್ಮದ್, ಅಸ್ಮದ್, ಭವತ್, ಕಿಂ—ಎಂದೀ ತ್ಯದಾದಿ ಶಬ್ದಂಗಳನಿಱಿಸಿ ವಿಭಕ್ತಿಯಂ ಕುಡದೆ,

ಇವಱ ಸಮಾಸಕ್ಕೆ—ತ್ಯತ್ಕಥನ, ತದ್ವಚನ, ಯತ್ಸುಖ, ಏತತ್ಸೌಖ್ಯ, ಇದನ್ನಿಮಿತ್ತ, ಅದಃಪುತ್ರ (ಅದಃಪುತ್ರನೆಂದೀತನ ಪುತ್ರನೆಂಬುದರ್ಥಂ), ಇದಂದೇವ (ಇದಂದೇವನೆಂದೀತನೆ ದೇವನೆಂದರ್ಥಂ), ಯುಷ್ಮದ್ಗುಣ, ಅಸ್ಮದ್ದೌಹಿತ್ರ, ಭವದ್ರಾಜ್ಯ; ಕಿಂವಾರ್ತೆ (ಕಿಂವಾರ್ತೆಯೆಂದಾರ ವಾರ್ತೆಯೆಂಬರ್ಥ),–ಈತೆಱದಿ ನಿಱಿಸಿ ಸಮಾಸಮಂ ಮಾಡಿ ವಿಭಕ್ತಿಯಂ ಪತ್ತಿಸುವುದು—ತ್ಯತ್ಕಥನಂ, ತ್ಯತ್ಕಥನಮಂ, ತ್ಯತ್ಕಥನದಿಂ—ಎಂಬಂತಱಿವುದು.

ಶತೃಇಂತಕ್ಕೆ— ಕ್ವಣತ್, ಝಣತ್, ಭ್ರಮತ್, ರಟತ್, ಚಳತ್, ದಳತ್, ಮಿಳತ್, ಲಸತ್, ಮುಂಚತ್, ಚಂಚತ್, ಘೋಷತ್—ಎಂಬೀ ಶತೃಇಂತಗಳ್ಗೆ ವಿಭಕ್ತಿಯಂ ಪತ್ತಿಸದೆ,

ಇವಱ ಸಮಾಸಕ್ಕೆ—ಕ್ವಣತ್ಕಂಕಣ, ಝಣನ್ನೂಪುರ, ಭ್ರಮದ್ಭ್ರಮರ. ರಟತ್ಕೋಕಿಲ, ಚಳತ್ಕುಂತಳ, ದಳತ್ಕೈರವ, ಮಿಳದ್ವಿಷ್ಕಿರ, ಲಸದ್ವಚನ, ಮುಂಚತ್ಕಂಚುಕ, ಚಂಚದ್ರೂಪ, ಗರ್ಜನ್ಮೇಘ, ಘೋಷದರ್ಣವ–ಎಂದಿರಿಸಿ ಸಮಾಸಮಂ ಮಾಡಿ, ಎಲ್ಲಕ್ಕಂ ವಿಭಕ್ತಿಯಂ ಪತ್ತಿಸುವುದು–ಕ್ವಣತ್ಕಂಕಣಂ, ಕ್ವಣತ್ಕಂಕಣಮಂ, ಕ್ವಣತ್ಕಂಕಣದಿಂ, ಕ್ವಣತ್ಕಂಕಣಕ್ಕೆ, ಕ್ವಣತ್ಕಂಕಣದತ್ತಣಿಂ, ಕ್ವಣತ್ಕಂಕಣದ, ಕ್ವಣತ್ಕಂಕಣದೊಳ್.

**ಸೂತ್ರಂ ॥** ಏಕದ್ವಿತ್ರ್ಯಾದಿ ಸಮಾ ।
ಸಾಕೃತಿಯಿಂ ಪ್ರತ್ಯಯಾಂತದಿಂದಿರೆ ಲಘುವ ॥
ಷ್ಪೇಕಾರಮನತ್ವಮನಿರ ।
ದಾಕಾರಂ ಬಹುಳದಿಂದೆ ತಳೆದಿರೆ ಲಿಂಗಂ ॥ ೮೨ ॥

**ವೃತ್ತಿ.**—ಏಕ, ದ್ವಿ, ತ್ರಿ, ಚತುರ್, ಪಂಚ, ಷಟ್, ಸಪ್ತ, ಅಷ್ಟ, ನವ, ದಶ–ಎಂಬಿವು ಸಹಜದಿಂ ಲಿಂಗಮಾಗವು; ಸಮಾಸಮಂ ಮೇಣ್ ಪ್ರತ್ಯಯಾಂತಮಂ ಮಾಡೆ ಲಿಂಗಮಕ್ಕುಂ. ಆಕಾರಾಂತಂ ಹ್ರಸ್ವಮಪ್ಪೇತ್ವಮಂ ಪಡೆದೊಡಂ ಅಕಾರಾಂತತೆಯಂ ಪಡೆದೊಡಂ ಲಿಂಗಮಕ್ಕುಂ.

**ಪ್ರಯೋಗಂ.**— ಸಂಖ್ಯಾವಾಚಿ ಸಮಾಸಕ್ಕೆ— ಏಕಾಂಗ, ದ್ವಿಮುಖ, ತ್ರಿಲೋಕ, ಚತುರ್ವೇದ, ಪಂಚಭೂತ, ಷಟ್ಕರ್ಮ, ಸಪ್ತದ್ವೀಪ, ಅಷ್ಟಭುಜ, ನವನಿಧಿ, ದಶವ್ಯಾಕರಣ—ಎಂದು ಸಮಾಸಮಾಗಲೊಡಂ,

ಮೇಣ್ ಸಂಖ್ಯಾವಾಚಿ ಪ್ರತ್ಯಯಾಂತಕ್ಕೆ—ದ್ವಿತಯ, ತ್ರಿತಯ, ಚತುಷ್ಕ, ಪಂಚಕ, ಷಟ್ಕ, ಸಪ್ತಕ, ಅಷ್ಟಕ, ನವಮ, ದಶಮ—ಎಂದು ಪ್ರತ್ಯಯಂ ಪತ್ತಲೊಡಂ—ಎಲ್ಲಕ್ಕಂ ವಿಭಕ್ತಿಯಂ ಪತ್ತಿಸುವುದು.

ಆಕಾರಮೆಕಾರಮಾದುದರ್ಕೆ— ಮಾಲಾ, ಬಾಲಾ, ಶಾಲಾ, ಏಲಾ, ಲೀಲಾ, ಜ್ವಾಲಾ, ಅಳಕಾ, ಕಳಿಕಾ, ತ್ರೇತಾ, ಸೀತಾ, ಯಾತ್ರಾ, ಮಾತ್ರಾ, ನಿದ್ರಾ, ಮುದ್ರಾ, ಕಶಾ, ಶಾಖಾ, ವೇಳಾ, ಜ್ವಾಲಾ, ರೇಖಾ, ಭಾಷಾ, ಮೂಷಾ, ದ್ರಾಕ್ಷಾ, ಲಾಕ್ಷಾ—ಎಂಬಿವು ಮೊದಲಾದುವು ಎಕಾರಾಂತಮಂ ಪಡೆಯಲೊಡಂ ವಿಭಕ್ತಿ ಪತ್ತುಗುಂ: ಮಾಲೆ, ಬಾಲೆ, ಲೀಲೆ, ಭಾಷೆ, ಯಾತ್ರೆ—ಎಂಬಂತೆ.

ಆಕಾರಮೆಕಾರಮುಂ ಅಕಾರಮುಮಾದುದರ್ಕೆ—ಗ್ರೀವಾ, ಭಿಕ್ಷಾ—ಎಂಬೆರಡು ಶಬ್ದಂಗಳ್ಗೆ ಗ್ರೀವ, ಗ್ರೀವೆ; ಭಿಕ್ಷ, ಭಿಕ್ಷೆ—ಎಂದು ನಿಱಿಸುವುದು.

ಆಕಾರಂ ಅಕಾರಮಾದುದರ್ಕೆ—ಕಂಧರಾ, ಉಪತ್ಯಕಾ, ಕರುಣಾ, ಅಧಿತ್ಯಕಾ, ದಂಷ್ಟ್ರಕಾ, ವಾಲುಕಾ–ಎಂಬಿವು ಮೊದಲಾದುವು, ಕಂಧರ, ಉಪತ್ಯಕ, ಕರುಣ—ಎಂದು ಅಕಾರಾಂತಮಂ ಪಡೆಯಲೊಡಂ ಲಿಂಗಮಾಗಿ ವಿಭಕ್ತಿ ಪತ್ತುಗುಂ.

........................................................................................................

**ಟೀಕೆ.**—ಏಕದ್ವಿತ್ರ್ಯಾದಿ=ಏಕ, ದ್ವಿ, ತ್ರಿ ಎಂಬಿವಾದಿಯಾದ ಸಂಖ್ಯಾವಾಚಿ ಶಬ್ದಂ, ಸಮಾಸಾಕೃತಿಯಿಂ = ಸಮಾಸಾಕಾರದಿಂದೆ, ಪ್ರತ್ಯಯಾಂತದಿಂದೆ= ತಯ ಪ್ರತ್ಯಯಂ ಮೊದಲಾದ ಪ್ರತ್ಯಯಾಂತದಿಂದೆ, ಇರೆ, ಲಿಂಗಮಪ್ಪುವು; ಆಕಾರಂ= ಆಕಾರಾಂತ ಶಬ್ದಂ, ಲಘುವಪ್ಪೇಕಾರಮಂ=ಲಘುವಾದೇಕಾರಮಂ, ಅತ್ವಮಂ= ಅಕಾರಮಂ, ಇರದೆ=ನಿಲ್ಲದೆ, ಬಹುಳದಿಂದೆ, ತಳೆದು=ಧರಿಸಿ, ಇರೆ, ಲಿಂಗಂ=ಕನ್ನಡಕ್ಕೆ ಲಿಂಗಮಪ್ಪುವು. ॥ ೮೨ ॥

**ಸೂತ್ರಂ ॥** ಆದಂ ಹ್ರಸ್ವೈದಂತಮು ।
ದಾದತ್ವಂ ಹ್ರಸ್ವಮೆನಿಸಿದೀದೂದಂತಂ ॥
ಜ್ಯಾದಿ ಸಮಸ್ತೈಕಾಕ್ಷರ ।
ಮಾದವಿಕೃತಿಶಬ್ದಮುಕ್ತಿವಿದರಿಂ ಲಿಂಗಂ ॥ ೮೩ ॥

**ವೃತ್ತಿ.**— ಆದವೆಂಬ ಬಹುಳಗ್ರಹಣದಿಂದಾಕಾರಾಂತಮಲ್ಲದಕಾರಾಂತ ಮುಂ ಹ್ರಸ್ವಮಪ್ಪೇತ್ವಮಂ ಪಡೆದೊಡಂ ಲಿಂಗಮಕ್ಕುಂ; ಈಕಾರಾಂತ ಊಕಾರಾಂತಂಗಳ್ ಹ್ರಸ್ವಮಾದೊಡಂ ಲಿಂಗಮಕ್ಕುಂ; ಜ್ಯಾಶಬ್ದಂ ಮೊದಲಾದೇಕಾಕ್ಷರ ಶಬ್ದಂಗಳಿರ್ದತೆಱದಿಂ ಲಿಂಗಮಪ್ಪುವು.

**ಪ್ರಯೋಗಂ.**—ಅಕಾರಾಂತಕ್ಕೆ—ವಧ, ಅಭಿಲಾಷ, ಉದಾಹರಣ, ದರ್ಭ, ಪ್ರಶ್ನ, ಊಹ, ಅಳಕ—ಎಂಬಿವು, ವಧೆ, ಅಭಿಲಾಷೆ—ಎಂಬಂತೆ ಎತ್ವಮಂ ಪಡೆದೊಡಂ ಲಿಂಗಮಪ್ಪುವು.

ಈಕಾರಾಂತಕ್ಕೆ— ಲಕ್ಷ್ಮೀ, ಗೌರೀ, ಸರಸ್ವತೀ, ಶಚೀ, ಭಾಮಿನೀ, ಗೋಮಿನೀ, ಕಾಮಿನೀ, ನಾರೀ, ಕುಮಾರೀ, ಕಾವೇರೀ, ಗೋದಾವರೀ, ಗಾಂಧಾರೀ—ಎಂಬೀಕಾರಾಂತಕ್ಕೆ, ಲಕ್ಷ್ಮಿ, ಗೌರಿ, ಸರಸ್ವತಿ—ಎಂಬಂತೆ ಹ್ರಸ್ವಮಾದೊಡಂ,

ಊಕಾರಾಂತಕ್ಕೆ—ಸರಯೂ, ಕಂಡೂ, ಖರ್ಜೂ, ಕುಹೂ, ಜಂಬೂ, ಸ್ವಯಂಭೂ, ಖಲಪೂ, ಅಲಾಬೂ, ಅಭ್ರಮೂ, ಚಮೂ—ಎಂಬೂಕಾರಾಂತಂಗಳ್, ಸರಯು, ಕಂಡು—ಎಂಬಂತೆ ಹ್ರಸ್ವಮಾದೊಡಂ,—ಲಿಂಗಮಕ್ಕುಂ.

ಏಕಾಕ್ಷರಕ್ಕೆ—ಜ್ಯಾ, ಮಾ, ಸ್ನಾ, ಶ್ರೀ, ಸ್ತ್ರೀ, ಭೀ, ಭ್ರೂ, ಕೂ-ಎಂಬಿವು ಮೊದಲಾದ ಏಕಾಕ್ಷರಶಬ್ದಂಗಳಿರ್ದತೆಱದಿಂ ವಿಭಕ್ತಿಯಂ ಪಡೆವುವು.

**ಸೂತ್ರಂ ॥** ಅತ್ವಾಂತಮುಮಿತ್ವಾಂತಮು ।
ಮುತ್ವಾಂತಮುಮಾ ಋದಂತಮುಂ ನಿಜಲಿಂಗಂ ॥
ಋತ್ವಕ್ಕಾರಾದೇಶಂ ।
ತತ್ವಂ ಪೀನಂ ವಿಧಾತೃಶಬ್ದಂ ರಾಂತಂ ॥ ೮೪ ॥

---

**ಟೀಕೆ.**—ಆದಂ=ಪೀನ ಗ್ರಹಣದಿಂದೆ, ಹ್ರಸ್ವೈದಂತಂ=ಕನ್ನಡಕ್ಕೆ ಹ್ರಸ್ವವಾದ ಏಕಾರಾಂತಮುಂ, ಅದು, ಆ ದತ್ವಂ=ಆ ದಕಾರಾಂತ ಶಬ್ದಮುಂ, ಹ್ರಸ್ವಂ=ಕನ್ನಡಕ್ಕೆ ಹ್ರಸ್ವಂ, ಎನಿಸಿದೀದೂದಂತಂ=ಎನಿಸಿದ ಈಕಾರಾಂತ ಊಕಾರಾಂತಂ, ಜ್ಯಾದಿ= ಜ್ಯಾ ಎಂಬ ಶಬ್ದವಾದಿಯಾದ, ಸಮಸ್ತ = ಬಹುಳವಾದ, ಏಕಾಕ್ಷರವಾದ =

**ವೃತ್ತಿ.**—ಅಕಾರಾಂತಮುಮಿಕಾರಾಂತಮುಮುಕಾರಾಂತಮುಂ ಋಕಾರಾಂತಮುಂ ಸ್ವಭಾವದಿಂ ಲಿಂಗಮಪ್ಪುವು; ಪೀನಗ್ರಹಣದಿಂ ಋಕಾರಾಂತಕ್ಕೆ ಆರಾದೇಶಮೊರ್ಮೆಯುಂಟು; 'ದಾತೃ' ಶಬ್ದಕ್ಕೆ ತಕಾರಮುಂ 'ವಿಧಾತೃ' ಶಬ್ದಕ್ಕೆ ರೇಫಮುಮಕ್ಕುಂ.

**ಪ್ರಯೋಗಂ.**—ಅಕಾರಾಂತಕ್ಕೆ—ಭುವನ, ಭವನ, ನಳಿನ, ಶಯನ, ನಯನ, ಕುಲಿಶ, ಕಲಶ, ಕರಣ, ಚರಣ, ದೇಶ, ಕೋಶ, ಧ್ಯಾನ, ಮೌನ.

ಇಕಾರಾಂತಕ್ಕೆ—ಶ್ರುತಿ, ಸ್ಮೃತಿ, ಧೃತಿ, ಕೃತಿ, ಗತಿ, ಪತಿ, ಯತಿ, ಮತಿ, ಶುದ್ಧಿ, ಸಿದ್ಧಿ, ಬುದ್ಧಿ, ವೃದ್ಧಿ, ಕವಿ, ರವಿ, ಪವಿ, ಅರಿ, ಗಿರಿ, ಹರಿ, ಲಿಪಿ, ಕಪಿ, ಧ್ವನಿ, ಮುನಿ.

ಉಕಾರಾಂತಕ್ಕೆ—ಪಶು, ಶಿಶು, ರಿಪು, ಭಾನು, ಧೇನು, ಸಾನು, ಸೇತು, ಕೇತು, ಬಂಧು, ಸಿಂಧು, ದಾರು, ಭೀರು.

ಋಕಾರಾಂತಕ್ಕೆ—ಪಿತೃ, ಸವಿತೃ, ನಪ್ತೃ, ಕರ್ತೃ, ನೇತೃ, ಹೋತೃ, ಜಾಮಾತೃ, ದುಹಿತೃ, ಭರ್ತೃ, ನನಾಂದೃ, ಯಾತೃ, ಮಾತೃ, ಧಾತೃ.

ಆರಾದೇಶಕ್ಕೆ—ಸವಿತಾರ, ಕರ್ತಾರ, ನೇತಾರ, ಹೋತಾರ, ದುಹಿತಾರ, ಭರ್ತಾರ, ಜೇತಾರ.

ದಾತೃಶಬ್ದದ ತಕಾರಕ್ಕೆ— ದಾತ; ಭೀತನ ದಾತನ ಸತ್ಯೋಪೇತನ.

'ಮಾಂಧಾತೃ' ಶಬ್ದಕ್ಕೆ 'ಮಾಂಧಾತ' ನೆಂದು ಪ್ರಯೋಗಮುಂಟು; ಮಾಂಧಾತನ ದೊರೆಯಪ್ಪ ಧೀರರುಂ ಚಾಗಿಗಳುಂ.

'ವಿಧಾತೃ' ಶಬ್ದದ ರಾಂತಕ್ಕೆ—ವಿಧಾತ್ರ; ಭೀತನಿಕಾಯಕ್ಕೆ ವಿಧಾತ್ರನುಂಡಿಗೆ ಜವಂ ಕೊಟ್ಟೋಲೆ.

......................................................................

ಏಕಾಕ್ಷರವಾದ, ಅವಿಕೃತಿಶಬ್ದಂ=ವಿಕಾರವಿಲ್ಲದ ಶಬ್ದಂಗಳ್, ಉಕ್ತಿವಿದರಿಂ=ವಾಕ್ಯವಿದರಿಂದೆ, ಲಿಂಗಂ=ಲಿಂಗಮಪ್ಪುವು. ॥ ೮೩ ॥

**ಟೀಕೆ.**—ಅತ್ಪಾಂತಮುಂ=ಅಕಾರಾಂತ ಶಬ್ದಮುಂ, ಇತ್ಪಾಂತಮುಂ=ಇಕಾರಾಂತ ಶಬ್ದಮುಂ, ಉತ್ಪಾಂತಮುಂ=ಉಕಾರಾಂತ ಶಬ್ದಮುಂ, ಆ ಋದಂತಮುಂ=ಆ ಋಕಾರಾಂತ ಶಬ್ದಮುಂ, ನಿಜಲಿಂಗಂ=ನಿಜದಿಂ ಲಿಂಗಮಪ್ಪುವು, ಇರ್ದ ಹಾಂಗೆ ಲಿಂಗವಪ್ಪುವೆಂಬರ್ಥಂ; ಋತ್ವಕ್ಕೆ=ಋಕಾರಾಂತಕ್ಕೆ, ಆರಾದೇಶಂ=ಆರ ಎಂಬಾದೇಶವಪ್ಪುದು; ತತ್ವಂ = ತಕಾರಾಂತವಪ್ಪುದು; ಪೀನಂ=ವಿಶೇಷವಾಗಿ, ವಿಧಾತೃಶಬ್ದಂ=ವಿಧಾತೃವೆಂಬ ಶಬ್ದಂ, ರಾಂತಂ=ರೇಫಾಂತವಪ್ಪುದು. ॥ ೮೪ ॥

**ಸೂತ್ರಂ** ॥ ಪಿತೃಶಬ್ದದೆಡೆಗರಾದೇ ।
ಶತೆ ಸಖಿಶಬ್ದಕ್ಕೆ ನೆಟ್ಟನತ್ವಾದೇಶ ॥
ಸ್ಥಿತಿಯಾಗೆ ಲಿಂಗಮಕ್ಕುಂ ।
ವಿತರ್ಕಮೇಂ ಪೇಟ್ ಸ್ವರಾಂತಮಿವು ಲಿಂಗಂಗಳ್ ॥ ೭೫ ॥

**ವೃತ್ತಿ.**—ಸ್ವರ್ಗಸ್ಥರಪ್ಪ ಪಿತೃಗಳ್ಗರಾದೇಶಮುಂ, ಸಖಿಶಬ್ದದಿಕಾರಕ್ಕಕಾರ ಮುಮಾಗೆ ಲಿಂಗಮಕ್ಕುಂ.

**ಪ್ರಯೋಗಂ.**—ಪಿತೃಶಬ್ದಕ್ಕೆ—ಪಿತರಂ; ಬಡವರ ಪಿತರರನ್ತೆ ಮಱುಗು ತ್ತಿರ್ಕುಂ.

ಸಖಿಶಬ್ದಕ್ಕೆ.—ಸಖಂ; ನಿಮಗೆ ಸಖಂ ಕಮಲಸಖಂ.

ಇವು ಸಂಸ್ಕೃತ ಸ್ವರಾಂತ ಲಿಂಗಂಗಳ್.

---

**ಸೂತ್ರಂ** ॥ ಜನಮುಲಿವ ಸಂಸ್ಕೃತ ವ್ಯಂ ।
ಜನಾಂತ ಲಿಂಗಂಗಳತ್ವಮುಂ ದ್ವಿತ್ವದಿನು ॥
ತ್ವ ನಿಯೋಗಮನಂತ್ಯಾದ ।
ರ್ಶನಮುಂ ಮೇಣ್ ತಾಳ್ದು ಕನ್ನಡಕ್ಕಿವು ಲಿಂಗಂ* ॥ ೭೬ ॥

.....................................................................................

**ಟೀಕೆ.**—ಪಿತೃಶಬ್ದದ=ಪಿತೃ ಎಂಬ ಶಬ್ದದ, ಎಡೆಗೆ=ಸ್ಥಾನಕ್ಕೆ, ಅರಾದೇಶತೆ= ಅರ ಎಂಬಾದೇಶತ್ವಂ, ಸಖಿಶಬ್ದಕ್ಕೆ=ಸಖಿಯೆಂಬ ಶಬ್ದಕ್ಕೆ, ನೆಟ್ಟನೆ=ವ್ಯಕ್ತವಾಗಿ, ಅತ್ವಾ ದೇಶಸ್ಥಿತಿ=ಅಕಾರಾದೇಶಸ್ಥಿತಿ, ಆಗೆ, ಲಿಂಗಂ, ಅಕ್ಕುಂ=ಅಪ್ಪುದು; ವಿತರ್ಕಮೇಂ= ವಿವಾದವೇಂ; ಪೇಟ್=ಹೇಟ್; ಲಿಂಗಂಗಳ್, ಇವು=ಈ ಪೇೞ್ದುವು, ಸ್ವರಾಂತಂ= ಸ್ವರಾಂತ ಲಿಂಗಂಗಳ್ ಅಪ್ಪುವು. ॥ ೭೫ ॥

**ಟೀಕೆ.**—ಜನಂ=ವಿದ್ವಜ್ಜನಂ, ಉಲಿವ=ಪೇೞ್ವ, ಸಂಸ್ಕೃತ=ಸಂಸ್ಕೃತದ, ವ್ಯಂಜ ನಾಂತ=ವ್ಯಂಜನಾಂತಂಗಳಾದ, ಲಿಂಗಂಗಳ್=ಪ್ರಕೃತಿಸಂಜ್ಞೆಯುಳ್ಳ ಲಿಂಗಂಗಳ್, ಅತ್ವಮುಂ=ಅಕಾರಮುಂ, ದ್ವಿತ್ವದಿಂ=ದ್ವಿರ್ಭಾವದೊಡನೆ, ಉತ್ವನಿಯೋಗಮುಂ=ಉಕಾ ರದ ನಿಯೋಗಮುಂ, ಅಂತ್ಯ=ಕಡೆಯಕ್ಷರದ, ಅದರ್ಶನಮುಂ=ಲೋಪಮುಂ, ಮೇಣ್= ವಿಕಲ್ಪದಿಂದೆ, ತಾಳ್ದು=ಧರಿಸಿ, ಕನ್ನಡಕ್ಕೆ=ಕರ್ಣಾಟಕಕ್ಕೆ, ಇವು=ಈ ಪೇೞ್ದುವು, ಲಿಂಗಂ=ಲಿಂಗಮಪ್ಪುವು. ॥ ೭೬ ॥

***ವಿಚಾರಂ.**—ಸಕಾರಾಂತ ಪ್ರಕೃತಿಗಳ್ಗೆ ದ್ವಿತ್ವದಿಂ ಉತ್ವಮುಮಂತ್ಯಲೋಪಮುಂ ವಿಕಲ್ಪದಿಂದಕ್ಕುಂ ಶಬ್ದಾನುಶಾಸನದಲ್ಲಿ ಸೂತ್ರಂ ॥ ೧೩೫ ॥ ಉಗಬಾ ದೀನಾಂ ॥ ವೃತ್ತಿ ॥ ಅಬಾ ದೀನಾಂ ಶಬ್ದಾನಾಂ ಉಗಾಗಮೋ ಭವತಿ॥ ಎಂದುದಾಗಿ, ಅಬಾದಿಗಳ್ಗೆ (ಅಪ್ ಮುಂತಾದ ಶಬ್ದಂಗಳ್ಗೆ) ಉಗಾಗಮುಂ ಬರ್ಪುದು; ಉಗಾಗಮುಂ ಬಂದಲ್ಲಿ ದ್ವಿತ್ವಮುಂಟು. ಅಪ್, ವಿಯತ್, ಸಂಯತ್, ವಿದ್ಯುತ್, ಜಗತ್, ದ್ಯುತ್ಸ್ ಪುರಿತತ್, ಅಗ್ನಿಚಿತ್, ಯಜುಸ್, ಸದಸ್, ತಟಿತ್—

**ವೃತ್ತಿ.**—ಸಂಸ್ಕೃತದ ವ್ಯಂಜನಾಂತ ಲಿಂಗಂಗಳತ್ವಮಂ ಪಡೆದುಂ ದ್ವಿತ್ವಂ ಬೆರಸಿದುತ್ವಮಂ ಪಡೆದುಂ ಅಂತ್ಯಲೋಪಮಂ ಮೇಣ್ಬಡೆದುಂ ಲಿಂಗಮಕ್ಕುಂ.

**ಪ್ರಯೋಗಂ.**—ದಿವ್, ಸ್ರಜ್, ಚತುರ್, ಮರುತ್, ಬುಧ್, ಕಕುಭ್, ವೇದವಿದ್, ಮುದ್, ಸಮವಯಸ್, ಗುಣಭಾಜ್, ವಿಹಾಯಸ್, ಸಂಪದ್—ಇವು ಮೊದಲಾದ ವ್ಯಂಜನಾಂತಕ್ಕೆ ದಿವ, ಸ್ರಜ, ಚತುರ—ಎಂಬಂತತ್ವಮಾದೊಡಂ,

ಅಪ್, ಕ್ಷುತ್, ಪ್ರತಿಪತ್, ಋಕ್, ಯಜುಸ್, ವಿದ್ಯುತ್, ದ್ವಿಟ್, ಪ್ರಾವೃಟ್, ವಾಕ್—ಇವು ಮೊದಲಾದುವರ್ಕೆ ಉತ್ವಂ ಬೆರಸಿ ದ್ವಿರ್ಭಾವಮಾಗಿ ಅಪ್ಪು, ಕ್ಷುತ್ತು—ಎಂಬಂತಾದೊಡಂ,

ರಾಜನ್, ಮೂರ್ಧನ್, ಪೂಷನ್, ಅರ್ಯಮನ್, ಮಘವನ್, ಕರಿನ್, ಧಾಮನ್, ಸೀಮನ್, ಊಷ್ಮನ್, ಕರ್ಮನ್, ಚರ್ಮನ್, ಬ್ರಹ್ಮನ್, ಪುರೂರವಸ್, ಅಧ್ವನ್, ಯುವನ್—ಇವು ಮೊದಲಾದ ಶಬ್ದಂಗಳಂತ್ಯಲೋಪಮಾಗಿ ರಾಜ, ಪೂಷ, ಮೂರ್ಧ–ಎಂಬಂತಾದೊಡಂ ಲಿಂಗಮಪ್ಪುವು; ಸೀಮೋಷ್ಮಂಗಳದಂತತೆಗೆ ಸೀಮೆ, ಊಷ್ಮೆ—ಎಂದು ಎತ್ವಮುಮುಂಟು.

ಮೇಣೆಂಬ ವಿಕಲ್ಪಾರ್ಥದಿಂ ಸಕಾರಾಂತದಲ್ಲಿ—ಯಶ, ಯಶಸ್ಸು; ತೇಜ, ತೇಜಸ್ಸು; ವಯ, ವಯಸ್ಸು; ಪಯ, ಪಯಸ್ಸು; ಮನ, ಮನಸ್ಸು; ಶ್ರೇಯ, ಶ್ರೇಯಸ್ಸು—ಎಂದು ಸಲ್ವುದು.

........................................

ಇವಾದಿಯಾದುವು ಅಬಾದ್ಯಾಕೃತಿಗಣಂ; ಇವರ್ಕೆ ದ್ವಿತ್ವದಿಂ ಉತ್ವಮುಂಟು. ಸೂತ್ರಂ ॥ ೧೩೬ ॥ ವಾಗಾದೀನಾಂ ಸ್ವಾಂತವಚ್ಚ ॥ ವೃತ್ತಿ ॥ ವಾಕ್ ಇತ್ಯೇವಮಾದೀನಾಂ ಶಬ್ದಾನಾಂ ಸ್ವಾಂತವತ್ ಪ್ರಥಮೈಕವಚನವದ್ ರೂಪಮತಿದಿಶ್ಯತೇ. ಉಗಾಗಮಶ್ಚ ಭವತಿ ॥ ಎಂದುದಾಗಿ ವಾಗಾದಿ ಗಣಕ್ಕೆ ಸಂಸ್ಕೃತ ಪ್ರಥಮೈಕವಚನದ ಮೇಲೆ ದ್ವಿತ್ವದಿನುತ್ವಮಕ್ಕುಂ; ವಾಕ್ಕು, ದಿಕ್ಕು, ತ್ವಕ್ಕು, ಋಕ್ಕು, ಉಷ್ಣಿಕ್ಕು, ಕ್ಷುತ್ತು, ಪ್ರತಿಪತ್ತು, ಪರಿಷತ್ತು—ಎಂಬಂತೆ. ವಾಚ್, ತ್ವಚ್, ಕ್ಷುಧ್, ವೀರುಧ್, ಸಮಿಧ್, ಸಂಪದ್, ಪ್ರತಿಪದ್, ಪರಿಷದ್, ವಿಪದ್, ಉಷ್ಣಿಹ್, ಋಚ್, ಸ್ರಜ್, ದ್ವಿಟ್, ದಿಶ್, ವಿಶ್—ಇವಾದಿಯಾದುವು ವಾಗಾದ್ಯಾಕೃತಿಗಣಂ. ಸೂತ್ರಂ ॥ ೧೩೭ ॥ ಮಹದಾದೀನಾಮಪಿ ॥ ವೃತ್ತಿ ॥ ಮಹದಾದೀನಾಂ ಶಬ್ದಾನಾಂ ಸ್ವಾಂತವದ್ ರೂಪಮತಿದಿಶ್ಯತೇ ಉಗಾಗಮಶ್ಚ ಭವತಿ ನಪುಂಸಕಲಿಂಗ ವಿಷಯೇ ॥ ಎಂದುದಾಗಿ, ಮಹದಾದಿಗಣಕ್ಕೆ ನಪುಂಸಕಲಿಂಗದಲ್ಲಿ ಪ್ರಥಮೈಕ ವಚನದ ಮೇಲೆ ದ್ವಿತ್ವದಿಂ ಉತ್ವಮಕ್ಕುಂ. ಮಹತ್ತು, ಬೃಹತ್ತು, ಪ್ರಾಕ್ಕು, ಅವಾಕ್ಕು, ಸಮ್ಯಕ್ಕು—ಎಂಬಂತೆ; ಪುಲ್ಲಿಂಗದಲ್ಲಿ—ಮಹಾಂತಂ, ಬೃಹಂತಂ, ಪ್ರಾಂಚಂ, ಸಮ್ಯಂಚಂ, ಪ್ರತ್ಯಂಚಂ—ಎಂದಕ್ಕುಂ. ಮಹತ್, ಬೃಹತ್, ಪ್ರಾಚ್, ಅವಾಚ್, ಪ್ರತ್ಯಚ್, ಉದಚ್, ತಿರ್ಯಚ್, ವಿಷ್ವಚ್,ನ್ಯಚ್, ಅಮುದ್ರ್ಯಚ್, ಅದದ್ರ್ಯಚ್, ಅಮುಮುಯಚ್, ಅದಮುಯಚ್, ಸಧ್ರ್ಯಚ್, ಸಮ್ಯಚ್—ಇವಾದಿಯಾದುವು ಮಹದಾದ್ಯಾಕೃತಿಗಣಂ.

ಮೇಣೆಂಬುದಱಿಂ ಸಹಜ ವ್ಯಂಜನವಾಗಿಯೆ ಕೆಲವಿರ್ಪುವು—ವಾಕ್, ಗೀರ್; ಯುಗಪದ್. ಶ್ರುತದೇವಿ ವಾಣಿ ವಾಗ್ ಭಾರತಿ ವಚನಂ ಭಾಷೆ. ಮೇಣೆಂಬುದಱಿಂ ಗೀರ್ ಎಂಬುದರ್ಕೆ ಗಿರೆ ಎಂದೆತ್ವಮುಮುಂಟು.

ಸೂತ್ರಂ ॥ ಪ್ರಚುರತೆಯಿಂ ಪ್ರಥಮಾ ಬಹು ।
ವಚನಂಗಳವೇಕವಚನ ಕೃತ ಲಿಂಗಂಗಳ್ ॥
ನಿಚಿತ ವಿಸರ್ಗಮನುೞಿದಂ ।
ದುಚಿತಜ್ಞರ್ ತಿಳಿವುದಿವನುದಾಹೃತಿ ಮುಖದಿಂ ॥ ೮೭ ॥

ವೃತ್ತಿ.—ಸಂಸ್ಕೃತದ ಪ್ರಥಮಾ ಬಹುವಚನಂಗಳ್ ತಮ್ಮ ವಿಸರ್ಗಮಂ ಕಳೆಯೆ ಕನ್ನಡದೊಳೇಕವಚನಮಾಗಿ ಲಿಂಗಮಪ್ಪುವು.

ಪ್ರಯೋಗಂ.—ಶ್ವಾನ, ಯುವಾನ, ಅಧ್ವಾನ, ಸಖಾಯ, ಜ್ಯಾಯಾಂಸ, ಕನೀಯಾಂಸ, ವಿದ್ವಾಂಸ, ಭಾಸ್ವಂತ, ಶ್ರೀಮಂತ, ಹನುಮಂತ— ಇವು ಮೊದಲಾದುವು.

ಸೂತ್ರಂ ॥ ನೀನಱಿ ಕರ್ಣಾಟಕದೊಳ್ ।
ಪೀನಂ ಸ್ತ್ರೀ ಪುಂ ನಪುಂಸಕೋಭಯ ಪುಂಸ್ತ್ರೀ ॥
ಸ್ತ್ರೀನಪ್ಸಮುಸ್ತ ವಾಚ್ಯಾ ।
ನ್ಯೂನಾವ್ಯಯಮೆಂದು ಲಿಂಗವೊಂಬತ್ತು ತೆಱಂ ॥ ೮೮ ॥

ವೃತ್ತಿ.—ಕನ್ನಡದೊಳ್ ಪಿರಿದುಂ ಸ್ತ್ರೀಲಿಂಗಮೆಂದುಂ, ಪುಲ್ಲಿಂಗಮೆಂದುಂ, ನಪುಂಸಕ ಲಿಂಗಮೆಂದುಂ, ಪುಂಸ್ತ್ರೀ ಲಿಂಗಮೆಂದುಂ, ಸ್ತ್ರೀನಪುಂಸಕ ಲಿಂಗಮೆಂದುಂ, ಪುಂನಪುಂಸಕ ಲಿಂಗಮೆಂದುಂ, ತ್ರಿವಿಧ ಲಿಂಗಮೆಂದುಂ, ವಿಶೇಷ್ಯಾಧೀನ ಲಿಂಗಮೆಂದುಂ, ಅವ್ಯಯ ಲಿಂಗಮೆಂದುಂ—ಲಿಂಗವೊಂಬತ್ತು ತೆಱಂ.

---

ಟೀಕೆ.—ಪ್ರಚುರತೆಯಿಂ = ಪ್ರಸಿದ್ಧಿಯಿಂದೆ, ಪ್ರಥಮಾಬಹುವಚನಂಗಳ್ = ಸಂಸ್ಕೃತದ ಪ್ರಥಮಾವಿಭಕ್ತಿಯ ಬಹುವಚನಂಗಳ್, ಅವು, ನಿಚಿತ ವಿಸರ್ಗಮಂ= ನಿಶ್ಚಯಿಸಲ್ಪಟ್ಟ ವಿಸರ್ಜನೀಯವಂ, ಉೞಿದಂದು=ಬಿಟ್ಟಂದು, ಏಕವಚನ=ಏಕವಚನವಾಗಿ, ಕೃತ=ಮಾಡಲ್ಪಟ್ಟ, ಲಿಂಗಂಗಳ್=ಲಿಂಗಂಗಳೆನಿಸುವುವು; ಉಚಿತಜ್ಞರ್=ಇಂಗಿತಜ್ಞರ್, ಇವಂ=ಈ ಶಬ್ದಂಗಳಂ, ಉದಾಹೃತಿ ಮುಖದಿಂ=ಉದಾಹರಣೆಯ ಮುಖದಿಂದೆ, ತಿಳಿವುದು=ಅಱಿವುದು. ॥ ೮೭ ॥

ಟೀಕೆ.—ಕರ್ಣಾಟಕದೊಳ್=ಕನ್ನಡದಲ್ಲಿ, ಪೀನಂ=ವೆಗ್ಗಳವಾಗಿ, ಸ್ತ್ರೀ=ಸ್ತ್ರೀಲಿಂಗವೆಂದು, ಪುಂ=ಪುಲ್ಲಿಂಗವೆಂದು, ನಪುಂಸಕ=ನಪುಂಸಕಲಿಂಗವೆಂದು, ಉಭಯಂ= ಪುಂನಪುಂಸಕ ಲಿಂಗವೆಂದು, ಪುಂಸ್ತ್ರೀ=ಪುಂಸ್ತ್ರೀಲಿಂಗವೆಂದು, ಸ್ತ್ರೀನಪ್=ಸ್ತ್ರೀನಪುಂಸಕ

**ಪ್ರಯೋಗಂ.**—ಸ್ತ್ರೀಲಿಂಗಕ್ಕೆ—ಅರಸಿ, ದೇವಿ.

ಪುಲ್ಲಿಂಗಕ್ಕೆ—ಅರಸಂ, ದೇವಂ, ನರಂ, ಸುರಂ.

ನಪುಂಸಕ ಲಿಂಗಕ್ಕೆ—ಕನ್ನಡಿ, ಕಳಸಂ, ಜೆಡೆ, ಕೊಡೆ.

ಪುಂನಪುಂಸಕ ಲಿಂಗಕ್ಕೆ—ರವಿ ಮೂಡಿದಂ, ರವಿ ಮೂಡಿದುದು; ವಿಧುವಿವಂ, ವಿಧುವಿದು; ಇವಱಂತೆ ಮಂಗಳ, ಬುಧ, ಬೃಹಸ್ಪತ್ಯಾದಿ ನವಗ್ರಹಂಗಳೆಲ್ಲಂ ಪುಂನಪುಂಸಕ ಲಿಂಗಂಗಳ್; ಆಳಿವಂ, ಆಳಿದು; ಬಸಂತಂ ಬಂದಂ, ಬಸಂತಂ ಬಂದುದು; ಮಲಯಾನಿಲಂ ತೀಡಿದಂ, ಮಲಯಾನಿಲಂ ತೀಡಿದುದು; ಕಾಮಂಗೆಯುಂ ಕಾಮುಕ್ಕಮೇಕತ್ವಮುಳ್ಳುದಱಿಂ ಕಾಮನೆಚ್ಚಂ, ಕಾಮಂ ಪೆರ್ಚಿದುದು—ಇವೆಲ್ಲಂ ಪುಂನಪುಂಸಕಂ.

ಪುಂಸ್ತ್ರೀಲಿಂಗಕ್ಕೆ—ಇವರ್ ಪುರುಷರ್, ಇವರ್ ಸ್ತ್ರೀಯರ್; ಅವರ್ ಗಂಡರ್, ಅವರ್ ಪೆಂಡಿರ್; ಉವರ್ ದೇವರ್, ಉವರ್ ದೇವಿಯರ್. ತೊಟ್ಟಿಂಬುದುಮಂತೆ—ಇವಂ ದೇವರ ತೊಟ್ಟು, ಇವಳ್ ದೇವರ ತೊಟ್ಟು.

ಸ್ತ್ರೀನಪುಂಸಕಕ್ಕೆ—ಆ ಪೆಣ್ಬಾಣೆ, ಆ ಪೆಣ್ಬಂದುದು; ಆ ಕನ್ನಿಕೆ ಸಲಕ್ಷಣೆ, ಆ ಕನ್ನಿಕೆ ಪೊಲ್ಲದು. ಸಿರಿ, ಸರಸ್ವತಿ, ದೇವತೆ—ಎಂಬಿವುಮಂತೆ: ಸಿರಿಯೊಲ್ವಳೆ ಹೃದ್ಯವಿದ್ಯರಂ; ಸಿರಿಯೊಂದಾಗದೊಡಮೇನೊ ಸುಜನೋತ್ತಂಸಾ; ಸರಸ್ವತಿ ಕಯ್ನೆರವಾಗೆ ಪೇಟ್ದಪಳ್; ಪರಮಜಿನೇನ್ದ್ರವಾಣಿಯೆ ಸರಸ್ವತಿ ಬೆಱೆದು ಪೆಣ್ರೂಪಮಂ ಧರಿಯಿಸಿ ನಿಂದುದಲ್ತುದುವೆ; ದೇವತೆಯರ್ ಮೆಚ್ಚಿ ವರಮನರಸಂಗಿತ್ತರ್; ಬಾರಿಸಿದುವು ಬಿಡದೆ ಜಡಿದು ವನದೇವತೆಗಳ್; ಅವಳ್ ಸಜ್ಜನವೆಣ್; ಅದು ಸಜ್ಜನವೆಣ್.

ತ್ರಿಲಿಂಗಕ್ಕೆ—ನೀನರಸಂ, ನೀನರಸಿ, ನೀಂ ಪಶು; ತಾನ್, ಆನ್, ಏನ್, ಏತರ್ಕೆ, ಆವರ್ಕೆ, ಶಿಶು, ಹಸುಳೆ, ಮಗು, ಕೂಸು, ಸೊಂದಿ, ಪಗೆ, ಕೆಳೆ, ಅರಸು, ತರುವಲಿ—ಎಂಬಿವೆಲ್ಲಮಂತೆ.

ವಾಚ್ಯಲಿಂಗಮೆಂದು ವಿಶೇಷ್ಯಾಧೀನಲಿಂಗಕ್ಕೆ— ನೇರಿದನಿವಂ, ನೇರಿದಳಿ

.......................................................................................................

ಲಿಂಗವೆಂದು, ಸಮಸ್ತ=ತ್ರಿವಿಧ ಲಿಂಗವೆಂದು, ವಾಚ್ಯ=ವಿಶೇಷ್ಯಾಧೀನ ಲಿಂಗವೆಂದು, ಅನೂನ=ಕೊರತೆಯಿಲ್ಲದ, ಅವ್ಯಯಂ=ಅವ್ಯಯ ಲಿಂಗಮೆಂದು, ಲಿಂಗಂ=ಲಿಂಗಂಗಳ್, ಒಂಬತ್ತು ತೆಱಂ=ಒಂಬತ್ತು ಪ್ರಕಾರವೆಂದು, ನೀಂ, ಅಱಿ=ತಿಳಿ. ॥ ೮೮ ॥

ವಳ್, ನೇರಿತ್ತಿದು; ಅಭಿಮಾನಿ, ದಾನಿ, ಸಾಧು, ಪಟು, ಹಡಣ, ಚಂಡಿ, ರಾಗಿ, ಭೋಗಿ, ಸುಖಿ, ಹೇಡಿ, ಕಲಿ, ಗುರು, ಲಘು—ಇವುಮಾತಿಱದೆ ಸಲ್ವುವು.

ಅವ್ಯಯಲಿಂಗಕ್ಕೆ—ಕಂಮಿದಂ, ಕಂಮಿದಳ್, ಕಂಮಿತು; ಭೋಂಕನೆ ಬಂದಂ, ಭೋಂಕನೆ ಬಂದಳ್, ಭೋಂಕನೆ ಬಂದುದು; ತೊಟ್ಟನೆ, ಮೆಲ್ಲನೆ, ಕಮ್ಮನೆ, ಇಮ್ಮನೆ, ಸುಮ್ಮನೆ, ಸಿಯ್ಯನೆ, ಕೆಚ್ಚನೆ, ಪಚ್ಚನೆ, ಪೆಳ್ಳನೆ, ತೆಳ್ಳನೆ, ಬೆಳ್ಪಳಂ, ಬೆಚ್ಚರಂ, ನಿರ್ನೆರಂ, ಸೋಡಂಬಾಡಂ (ಎಂದು ಬಱಿದೆಂಬರ್ಥಂ), ಅಂತೆವೋಲ್, ಮಿಗೆ, ದಲ್, ವಲಂ, ತೆಱಂ, ಕೆಂನಂ, ಮತ್ತೆ, ಬಲ್ಲೆ—ಇವಾದಿಯಾಗಱಿವುದು.

ಸೂತ್ರಂ ॥ ಬಗೆ ನೀನಾನ್ತಾನೆಂಬು ।
ಕ್ತಿಗಳುಂ ಗುಣವಚನ ಸರ್ವನಾಮ ಬಹುವ್ರೀ ॥
ಹಿಗಳುಂ ಕೃತ್ತದ್ಧಿತ ಸಂ ।
ಖ್ಯೆಗಳುಂ ಸಲೆ ವಾಚ್ಯಲಿಂಗಮೆಂದೀ ಕ್ರಮದಿಂ ॥ ೮೯ ॥

ವೃತ್ತಿ.—ನೀನ್, ಆನ್, ತಾನ್—ಎಂಬಿವುಂ, ಗುಣವಚನಮುಂ, ಸರ್ವನಾಮಮುಂ, ಬಹುವ್ರೀಹಿಯುಂ, ಕೃತ್ತುಂ, ತದ್ಧಿತಮುಂ, ಸಂಖ್ಯೆಯುಂ, ವಿಶೇಷ್ಯಾಧೀನ ಲಿಂಗಮೆಂದಱಿವುದು.

ಪ್ರಯೋಗಂ.—ನೀನ್, ಆನ್, ತಾನ್ ಎಂಬಿವರ್ಕೆ—ನೀಂ ಕಾಮಂ, ನೀಂ ರತಿ, ನೀಂ ಗಿಳಿ; ಆಂ ಶಿವಂ, ಆಂ ಗೌರಿ, ಆಂ ನಂದಿ; ತಾನವಂ, ತಾನವಳ್, ತಾನದು.

ಗುಣವಚನಕ್ಕೆ—ಇನಿಯಂ, ಇನಿಯಳ್, ಇನಿದು.

ಸರ್ವನಾಮಕ್ಕೆ—ಪೆಱಂ, ಪೆಱಳ್, ಪೆಱತು.

ಬಹುವ್ರೀಹಿಗೆ—ಅವಂ ವಿಮಲಮತಿ, ಅವಳ್ ವಿಮಲಮತಿ, ಅದು ವಿಮಲಮತಿ; ಅವಂ ಕುಸಿಗೊರಲಂ, ಅವಳ್ ಕುಸಿಗೊರಲಿ, ಅದು ಕುಸಿಗೊರಲ್.

---

ಟೀಕೆ.—ನೀಂ, ಆಂ, ತಾಂ, ಎಂಬುಕ್ತಿಗಳುಂ=ಎಂಬ ವಾಕ್ಯಂಗಳುಂ, ಗುಣವಚನ=ಗುಣವಚನಂಗಳುಂ, ಸರ್ವನಾಮ=ಸರ್ವನಾಮಂಗಳುಂ, ಬಹುವ್ರೀಹಿಗಳುಂ=ಬಹುವ್ರೀಹಿ ಶಬ್ದಂಗಳುಂ, ಕೃತ್=ಕೃತ್ತುಗಳುಂ, ತದ್ಧಿತ=ತದ್ಧಿತಂಗಳುಂ, ಸಂಖ್ಯೆಗಳುಂ=ಸಂಖ್ಯಾವಾಚಿಗಳುಂ, ಸಲೆ=ಚೆನ್ನಾಗಿ, ವಾಚ್ಯಲಿಂಗಂ=ವಿಶೇಷ್ಯಾಧೀನ ಲಿಂಗಮೆಂದು, ಈ ಕ್ರಮದಿಂ=ಈ ರೀತಿಯಿಂದೆ, ಬಗೆ=ಭಾವಿಸು. ॥ ೮೯ ॥

ಕೃತ್ತಿಂಗೆ—ಪಾಡಿದಂ, ಪಾಡಿದಳ್, ಪಾಡಿದುದು.

ತದ್ಧಿತಕ್ಕೆ—ಓದಾಳಿ ಇವಂ, ಓದಾಳಿ ಇವಳ್, ಓದಾಳಿ ಇದು.

ಸಂಖ್ಯೆಗೆ—ಸಾಸಿರ ಗಂಡರ್, ಸಾಸಿರ ಪೆಂಡಿರ್, ಸಾಸಿರ ಮನೆಗಳ್.

**ಸೂತ್ರಂ** ॥ ದೊರೆವಡೆದವ್ಯಯಲಿಂಗಂ ।
ಸರಿ ಸರ್ವವಿಭಕ್ತಿಗಂ ತ್ರಿಲಿಂಗಕ್ಕಂ ತಾಂ ॥
ಸರಿ ವಚನತ್ರಿತಯಕ್ಕಂ ।
ಸರಿಯೆನಿಸಿ ವಿಕಾರಮಿಲ್ಲದರ್ಥಮನೀಗುಂ ॥ ೯೦ ॥

**ವೃತ್ತಿ.**— ಅವ್ಯಯಲಿಂಗಂ ಸಪ್ತವಿಭಕ್ತಿಗಂ ಲಿಂಗತ್ರಯಕ್ಕಂ ವಚನತ್ರಯಕ್ಕಂ ಸರಿಯಾಗಿರ್ದ ತೆಱದಿನರ್ಥಮಂ ಕುಡುಗುಂ.

**ಪ್ರಯೋಗಂ.**—ಪ್ರಥಮಾವಿಭಕ್ತಿಗೆ—ನಿರ್ನೆರಂ ಬಂದನೆಂಬಲ್ಲಿ ನಿರ್ನಿಮಿತ್ತಂ ಬಂದನೆಂಬ ಪ್ರಥಮೆಯನಱಿವುದು.

ಚಂ॥ ಸುರ ತರು ನಂದನಂಗಳಿರ ರತ್ನ ಪಿನದ್ಧ ವಿಮಾನ ಕುಟ್ಟಿಮಾಂ ।
ತರ ಸುರಸಾಲಯಂಗಳಿರ ಚಾರು ವಿಲೋಲ ಕಟಾಕ್ಷ ಪಾತ ಸುಂ ॥
ದರ ಪರಿವಾರ ದೇವಿಯರಿರಾ ಕಡುಕೈದು ಕೃತಾಂತನಿಂತು ನಿ ।
ರ್ನೆರಮೊಱೆದುಯ್ಯೆ ಬಾರಿಸದೆ ಕೆಮ್ಮನುಪೇಕ್ಷಿಸಿ ನೋಡುತಿರ್ಪಿರೇ ॥

ದ್ವಿತೀಯಾವಿಭಕ್ತಿಗೆ—ಚೆಚ್ಚರಂ ನುಡಿದನೆಂಬಲ್ಲಿ ಚೆಚ್ಚರಮಂ ನುಡಿದನೆಂಬ ದ್ವಿತೀಯೆಯನಱಿವುದು.

ತೃತೀಯಾವಿಭಕ್ತಿಗೆ—ಅವರ್ಕೆ ಅಂತಱಿಂದೆಂಬವಱಲ್ಲಿ ಪರಿವಿಡಿಯಿಂ ಅದಱಿಂದೆ ಎಂಬ ತೃತೀಯೆಯನಱಿವುದು. ಅಂತಱಿಂದವರನಾ ಪೊಟಿಲೊಳ್ ಕಾಣಲ್ಬಂದತ್ತು. ಅವರ್ಕೆಯ್ದೆ ಕವಲ್ಕವಲ್ತು ಪಲವುಂ ಕೊಂಬಾದುವೊಳ್ಗೊಂಬುಗಳ್.

ಚತುರ್ಥಿಗೆ—ಪಚ್ಚನೆ ಕೆಚ್ಚನೆ ಬಗೆಯನೆಂಬಲ್ಲಿ ಚತುರ್ಥಿಯನಱಿವುದು.

---

**ಟೀಕೆ.**—ದೊರೆವಡೆದ=ಪ್ರಸಿದ್ಧಿವಡೆದ, ಅವ್ಯಯಲಿಂಗಂ=ಅವ್ಯಯಲಿಂಗಂಗಳ್, ಸರ್ವವಿಭಕ್ತಿಗಂ = ಸಪ್ತವಿಭಕ್ತಿಗೆಯುಂ, ಸರಿ=ಸಮಾನಂ; ತ್ರಿಲಿಂಗಕ್ಕಂ = ಮೂಱು ಲಿಂಗಕ್ಕೆಯುಂ, ತಾಂ, ಸರಿ=ಸಮಾನಂ; ವಚನತ್ರಿತಯಕ್ಕಂ=ಏಕವಚನ ದ್ವಿವಚನ ಬಹುವಚನಂಗಳ್ಗೆಯುಂ, ಸರಿಯೆನಿಸಿ=ಸಮಾನವೆನಿಸಿ, ವಿಕಾರವಿಲ್ಲದೆ= ರೂಪಾಂತರವನೆಯ್ದದೆ, ಅರ್ಥಮಂ, ಈಗುಂ=ಕುಡುವುವು. ॥ ೯೦ ॥

ಷಷ್ಠಿಗೆ—ಮುತ್ತಿನ ಎಂಬಲ್ಲಿ ಷಷ್ಠಿ; ಮುತ್ತಿನ ಮುತ್ತಿನ ಬೇರ್ಗಳ ಬಿತ್ತುಗಳಾವೆಡೆಯೊಳೇನೊ ಸುಜನೋತ್ತಂಸಾ.

ತ್ರಿಲಿಂಗಕ್ಕೆ—ಮಿಗೆ ಬಟಿಲ್ದಂ, ಮಿಗೆ ಬಟಿಲ್ದಳ್, ಮಿಗೆ ಬಟಿಲ್ದುದು; ಮುತ್ತೆ ನೋಡಿದಂ, ಮುತ್ತೆ ನೋಡಿದಳ್, ಮುತ್ತೆ ನೋಡಿದುದು.

ವಚನತ್ರಯಕ್ಕೆ—ಭೋಂಕನೊರ್ವಂ ಬಂದಂ, ಮೆಲ್ಲನಿರ್ವರ್ ನುಡಿದರ್, ನೆಟ್ಟನೆಲ್ಲರುಂ ಪೋದರ್.

**ಸೂತ್ರಂ** ॥ ಪುರುಷರೆ ಪುಲ್ಲಿಂಗಂ ಸ್ತ್ರೀ।
ಯರೆ ತಾಂ ಸ್ತ್ರೀಲಿಂಗಮುೞಿದುವೆಲ್ಲಂ ನಪ್ಪಾ ॥
ಗಿರೆ ಸಲ್ಗುಂ ಕನ್ನಡದೊಳ್।
ಪರಿವರ್ತಿಸವುೞಿದ ಲಿಂಗಮೊಳವಾಗಿರ್ದುಂ ॥ ೯೧ ॥

**ವೃತ್ತಿ.**—ಪುರುಷರಂ ಪೇೞ್ವ ಶಬ್ದಂಗಳ್ ಪುಲ್ಲಿಂಗಂಗಳ್; ಸ್ತ್ರೀಯರಂ ಪೇೞ್ವ ಶಬ್ದಂಗಳ್ ಸ್ತ್ರೀಲಿಂಗಂಗಳ್; ಉೞಿದುವೆಲ್ಲಂ ನಪುಂಸಕ ಲಿಂಗಂಗಳ್.

**ಪ್ರಯೋಗಂ.**—ಪುಲ್ಲಿಂಗಕ್ಕೆ—ಶಿವ, ಶಂಕರ, ಭೀಮ, ರಾಮ, ಅರಸ—ಇವು ಮೊದಲಾದುವು.

ಸ್ತ್ರೀಲಿಂಗಕ್ಕೆ—ಗೌರಿ, ಪಾರ್ವತಿ, ಲಕ್ಷ್ಮಿ, ಸರಸ್ವತಿ, ಶಚಿ, ರೋಹಿಣಿ, ಕಾಮಿನಿ, ಭಾಮಿನಿ, ರಮಣಿ—ಇವು ಮೊದಲಾದುವು.

ನಪುಂಸಕ ಲಿಂಗಕ್ಕೆ—ಮರ, ಗಿಡು, ಬಳ್ಳಿ, ಪುಲ್, ಪೊದಱ್, ಪುಲಿ, ಕರಡಿ, ಗಟ್ಟ, ಬೆಟ್ಟ, ಜೆಡೆ, ಕೊಡೆ, ಕನ್ನಡಿ, ಕಳಸ—ಇಂತಪ್ಪ ಚೇತನಾಚೇತನ ವಸ್ತುಗಳೆಲ್ಲಂ ನಪುಂಸಕಮೆ.

ಇಂತು ಲಿಂಗತ್ರಯಂ ಕನ್ನಡದೊಳ್ ಪಿರಿದುಂ ಪ್ರಸಿದ್ಧಂ; ಮಿಕ್ಕ ಲಿಂಗಂಗಳೆಲ್ಲಂ ಕ್ವಚಿತ್ಪ್ರಯೋಗಂಗಳೆ.

---

**ಟೀಕೆ.**—ಪುರುಷರೆ=ಪುರುಷರಂ ಪೇೞ್ವ ಶಬ್ದಂಗಳೆ, ಪುಲ್ಲಿಂಗಂ=ಪುಲ್ಲಿಂಗವೆನಿಪುವು; ಸ್ತ್ರೀಯರೆ=ಸ್ತ್ರೀಯರಂ ಪೇೞ್ವ ಶಬ್ದಂಗಳೆ, ತಾಂ, ಸ್ತ್ರೀಲಿಂಗಂ=ಸ್ತ್ರೀಲಿಂಗವೆನಿಪುವು; ಉೞಿದುವು=ಪುರುಷರಂ ಸ್ತ್ರೀಯರಂ ಪೇೞದೆ ಉೞಿದ ಶಬ್ದಂಗಳ್, ಎಲ್ಲಂ=ಎಲ್ಲವು, ನಪ್ಪಾಗಿರೆ=ನಪುಂಸಕಲಿಂಗವಾಗಿರೆ, ಸಲ್ಗುಂ=ಸಲ್ಲುವು; ಕನ್ನಡದೊಳ್=ಕರ್ಣಾಟಕದಲ್ಲಿ, ಉೞಿದ ಲಿಂಗಂ=ಮಿಕ್ಕ ಲಿಂಗಂಗಳ್, ಒಳವಾಗಿರ್ದುಂ=ಉಂಟಾಗಿರ್ದುಂ, ಪರಿವರ್ತಿಸವು=ಪ್ರವರ್ತಿಸವು. ॥ ೯೧ ॥

ಸೂತ್ರಂ ॥ ಜನಶಬ್ದಮದು ನಪುಂಸಕ ।
ಮೆನಿಕುಂ ದುಸ್ಸತ್ಸುಕಾರಮವು ಪೆಱಗಿರೆ ನೆ ॥
ಟ್ಟನೆ ಪುಲ್ಲಿಂಗಂ ಮತ್ತಾ ।
ಜನಂ ಮಹಚ್ಛಬ್ದಮಿರೆ ನಪುಂಸಕಮಕ್ಕುಂ ॥ ೯೨ ॥

ವೃತ್ತಿ.—ಜನಶಬ್ದಂ ನಿಜದಿಂ ನಪುಂಸಕಂ; 'ದುಸ್' ಎಂಬುದುಂ, 'ಸತ್' ಎಂಬುದುಂ, 'ಸು' ಎಂಬುದುಂ ಪೆಱಗಿರೆ ಪುಲ್ಲಿಂಗಮಕ್ಕುಂ; ಮಹಚ್ಛಬ್ದಂ ಪೆಱಗಿರ್ದೊಡಂ ಮಹಾಜನಮೆಂದು ನಪುಂಸಕಮಕ್ಕುಂ.

ಪ್ರಯೋಗಂ.—ಪುಲ್ಲಿಂಗಕ್ಕೆ—ದುರ್ಜನಂ, ಸಜ್ಜನಂ, ಸುಜನಂ.

ನಪುಂಸಕಕ್ಕೆ—ಜನಂ, ಮಹಾಜನಂ.

ಸೂತ್ರಂ ॥ ಸಂದಿಸಿ ಮಮಿಂಕೆಯದದೊಳೆ ।
ಯೆಂದಿರ್ಪುವು ಸಪ್ತವಿಧ ವಿಭಕ್ತಿಗಳವು ಮಾ ॥
ರ್ಗಂದಪ್ಪದರ್ಥವಶದಿಂ ।
ಪಿಂದೆಣಿಸಿದ ವಿವಿಧ ವಿಧದ ಲಿಂಗಕ್ಕೆಲ್ಲಂ ॥ ೯೩ ॥

ವೃತ್ತಿ —ಪಿಂತೆ ಪೇೞ್ದ ನಾನಾತೆಱದ ಲಿಂಗಂಗಳ್ಗೆ ಪರವಾಗಿ ನಾಮವಿಭಕ್ತಿಗಳ್, ಮ್(ಸೂ. ೧೦೫), ಅಮ್(ಸೂ. ೧೦೪, ೧೦೬), ಇಮ್(ಸೂ. ೧೦೭), ಕೆ (ಸೂ. ೧೧೩, ೧೧೪), ಅತ್ (ಸೂ. ೧೦೬, ೧೧೬), ಅತ್ (ಸೂ. ೧೦೬, ೧೧೭), ಒಳ್ (ಸೂ. ೧೧೯) ಎಂದು, ಪ್ರಥಮೆಗಂ, ದ್ವಿತೀಯೆಗಂ, ತೃತೀಯೆಗಂ, ಚತು

---

ಟೀಕೆ.—ಜನಶಬ್ದಂ=ಜನಮೆಂಬ ಶಬ್ದಂ, ಅದು, ನಪುಂಸಕಂ = ನಪುಂಸಕ ಲಿಂಗಂ, ಎನಿಕುಂ=ಎನಿಸುವುದು; ದುಸ್, ಸತ್, ಸುಕಾರಂ = ದುಃ ಎಂಬುದುಂ, ಸತ್ ಎಂಬುದುಂ, ಸು ಎಂಬುದುಂ, ಅವು, ಪೆಱಗೆ = ಪಿಂದೆ, ಇರೆ, ನೆಟ್ಟನೆ= ವ್ಯಕ್ತವಾಗಿ, ಪುಲ್ಲಿಂಗಂ ಎನಿಸುವುದು; ಮತ್ತೆ = ಅದಲ್ಲದೆ, ಆ ಜನಂ = ಆ ಜನಶಬ್ದಂ, ಮಹಚ್ಛಬ್ದಂ = ಮಹತ್ ಎಂಬ ಶಬ್ದಂ, ಇರೆ = ಪಿಂದಿರೆ, ನಪುಂಸಕಂ=ನಪುಂಸಕ ಲಿಂಗಂ, ಅಕ್ಕುಂ=ಅಪ್ಪುದು. ॥ ೯೨ ॥

ಟೀಕೆ.—ಪಿಂದೆ=ಹಿಂದೆ, ಎಣಿಸಿದ ವಿವಿಧ ವಿಧದ=ಹೇೞಿದ ನಾನಾಪ್ರಕಾರದ, ಲಿಂಗಕ್ಕೆ=ಲಿಂಗಂಗಳ್ಗೆ, ಸಪ್ತವಿಧ=ಏೞು ತೆರನಾದ, ವಿಭಕ್ತಿಗಳ್=ಪ್ರತ್ಯಯಂಗಳ್, ಅವು, ಎಲ್ಲಂ=ಎಲ್ಲವು, ಮಾರ್ಗಂದಪ್ಪದೆ = ಕವಿಮಾರ್ಗಂ ತಪ್ಪದೆ, ಅರ್ಥವಶದಿಂ= ಅರ್ಥವಶದಿಂದೆ, ಸಂದಿಸಿ = ಪೊರ್ದುಗೆಯಾಗಿ, ಮಮಿಂಕೆಯದದೊಳೆ = ಮ್, ಅಮ್, ಇಮ್, ಕೆ, ಅತ್, ಅತ್, ಒಳ್ ಎಂಬಿವೆ, ಎಂದು = ಹೀಗೆಂದು, ಇರ್ಪುವು. ॥ ೯೩ ॥

ರ್ಥಿಗಂ, ಪಂಚಮಿಗಂ, ಷಷ್ಠಿಗಂ, ಸಪ್ತಮಿಗಂ—ಏೞಾಗಿ, ಕಾರಕವಶದಿಂ ಪತ್ತು ಗುಂ. ಆ ಕಾರಕಮೆಂಬುದು ಕ್ರಿಯಾನಿಮಿತ್ತಂ; ಅದು ಕರ್ತೃವೆಂದುಂ, ಕರ್ಮ ವೆಂದುಂ, ಕರಣಮೆಂದುಂ, ಸಂಪ್ರದಾನಮೆಂದುಂ, ಅಪಾದಾನಮೆಂದುಂ, ಅಧಿ ಕರಣಮೆಂದುಂ ಷಡ್ವಿಧಮಾಗಿರ್ಪುದು; ಷಷ್ಠಿಯೆಂದು ಸಂಬಂಧಾರ್ಥಂ.

**ಪ್ರಯೋಗಂ.**—ಮರಂ, ಮರನಂ, ಮರದಿಂ, ಮರಕ್ಕೆ, ಮರದತ್ತಣಿಂ, ಮರದ, ಮರದೊಳ್, (ಮರನೆ, ಸಂ.)—ಇಂತರ್ಥವಶದಿಂ ವಿಭಕ್ತಿ ಪರಿಣಮಿ ಪುವು. ವಿಭಕ್ತಿಕಾರಕಮನೆಯ್ದುವುದಱಿಂ ಪದಂ ನಾನಾರೂಪಮಪ್ಪುದು.

ಕಂ॥ ಮರನಿರ್ದುದು ಮರನಂ ಕಡಿ।
ಮರದಿಂ ಮಾಡಾನೆಯುಂ ಮರಕ್ಕೆಱೆ ನೀರಂ॥
ಮರದತ್ತಣಿನೆಲೆಯುದಿರ್ದುದು।
ಮರದದು ಪಣ್ ಮರದೊಳಿರು ತಳಿರ್ತಿರು ಮರನೇ॥

**ಸೂತ್ರಂ॥** ಏಕ ದ್ವಿತ್ವ ಬಹುತ್ವಮ।
ನೇಕ ದ್ವಿ ಬಹುತ್ವ ವಸ್ತುಗಳೊಳಾಚರಿಪರ್॥
ಸ್ವೀಕಾರ್ಯಂ ಕನ್ನಡದೊಳ।
ಗೇಕ ಬಹುತ್ವಂ ದ್ವಿವಚನಮುಚಿತದೆ ಬರ್ಕುಂ॥ ೯೪॥

**ವೃತ್ತಿ.**— ಒಂದೆರಡು ಮೂಱೆಂದು ಪದಾರ್ಥಮನೆಣಿಸುವೆಡೆಯೊಳ್ ಏಕವಚನ, ದ್ವಿವಚನ, ಬಹುವಚನಂಗಳಂ ಸ್ವೀಕರಿಸುವರ್; ಏಕವಚನ ಬಹು ವಚನಂಗಳ್ ಕನ್ನಡದೊಳತಿವ್ಯಕ್ತಂಗಳ್; ದ್ವಿವಚನಮನೌಚಿತ್ಯದಿನಱಿವುದು.

**ಪ್ರಯೋಗಂ.**-ಏಕ ದ್ವಿ ಬಹುತ್ವಂಗಳ್ಗೆ—ಮೇರುವಿದು; ಕಣ್ಗಳಿವು; ಕುರು ಳ್ಗಳಿವು. ಕವಿಯಿವಂ; ಕವಿಗಳಿವರ್.

ಔಚಿತ್ಯದ ದ್ವಿವಚನಕ್ಕೆ—ಭೀಮಾರ್ಜುನರ್, ರಾಮಲಕ್ಷ್ಮಣರ್, ನಕುಲ ಸಹದೇವರ್—ಎಂಬಂತಱಿವುದು.

---

**ಟೀಕೆ.**—ಏಕ ದ್ವಿ ಬಹುತ್ವ ವಸ್ತುಗಳೊಳ್=ಏಕವಸ್ತು, ದ್ವಿವಸ್ತು, ಬಹುವಸ್ತು ಗಳಲ್ಲಿ, ಏಕ ದ್ವಿತ್ವ ಬಹುತ್ವಮಂ=ಏಕವಚನ, ದ್ವಿವಚನ, ಬಹುವಚನಮಂ, ಆಚರಿಪರ್= ಪೇೞ್ವರ್; ಕನ್ನಡದಲ್ಲಿ=ಕರ್ಣಾಟ ಭಾಷೆಯಲ್ಲಿ, ಏಕಬಹುತ್ವಂ=ಏಕವಚನ ಬಹುವಚ ನಂಗಳ್, ಸ್ವೀಕಾರ್ಯಂ = ಅಂಗೀಕಾರ್ಯಂ; ದ್ವಿವಚನಂ, ಉಚಿತದೆ = ಉಚಿತದಿಂದೆ, ಬರ್ಕುಂ=ಬರ್ಪುದು. ॥ ೯೪ ॥

ಸೂತ್ರಂ ॥ ಸಮನಿಸುಗುಮಾ ವಿಭಕ್ತಿಗ ।
ಳ ಮೊದಲೊಳಾದಂ ಗಳಾಗಮಂ ದ್ವಿತ್ವ ಬಹು ॥
ತ್ವಮದಾಗೆ ಗಳಾಗಮಕವು ।
ಸಮನಿಸುಗುಂ ಸರ್ವನಾಮ ಗುಣವಚನದೊಳಂ ॥ ೯೫ ॥

ವೃತ್ತಿ. — ದ್ವಿವಚನ ಬಹುವಚನ ವಿವಕ್ಷೆಯಾದೊಡೆ ವಿಭಕ್ತಿಗಳ ಮೊದಲೊಳ್ ಗಳಾಗಮಮಕ್ಕುಂ; ಸರ್ವನಾಮ ಗುಣವಚನಂಗಳೊಳ್ ಗಳಾಗಮಕ್ಕಾದೇಶಮಾಗವುಮಕ್ಕುಂ.

ಪ್ರಯೋಗಂ.—ದ್ವಿವಚನಕ್ಕೆ—ತೊಡೆಗಳ್, ಕಣ್ಗಳ್, ತೋಳ್ಗಳ್.

ಕಂ ॥ ತೊಡೆಗಳ್ ರಂಭಾಸ್ತಂಭದ ।
ಗೆಡೆಗಳ್ ಕಣ್ಗಳ್ ಮನೋಜವೀರನ ಗೇಣ್ಗಳ್ ॥
ನಿಡುದೋಳ್ಗಳ್ ದಿಕ್ಕರಿಕರ ।
ದೊಡನಾಡಿಗಳೆನಿಸಿ ಮೆಱೆವುದಾತನ ರೂಪಂ ॥

ಬಹುವಚನಕ್ಕೆ—ಕೊಳಂಗಳ್ ದಳಿತಾಬ್ಜಂಗಳ್ ಸಮೃದ್ಧಮಧುಗಳ್
ಚಲದಳಿಕುಲಾಕುಲಂಗಳ್.

ಸರ್ವನಾಮದ ಅವುವಿಂಗೆ—ಅವು, ಇವು, ಉವು.

ಕಂ ॥ ಅವು ಪಿರಿಯವು ಭಾವಿಪೊಡಿಂ ।
ತಿವು ಕಿಱಿಯವೆನಿಪ್ಪುದಿದುವೆ ಭೇದಂ ನಿಮಗಾ ॥
ವುವು ಮನಕೇಱುವುವಱ್ಱಿಱ ।
ನವನಾಯ್ಕುಳಿಗೊಳ್ಳಿಮೆಂದು ನವರತ್ನಮುಮಂ ॥

ಗುಣವಚನಂಗಳ್ಗೆ—ಇನಿಯವು, ಮೆಲ್ಲಿದುವು, ಬೆಟ್ಟಿದುವು.

ಇನಿಯವು ವಿಷಯಸುಖಂ ನಂಜಿನ ಸವಿವೋಲ್. ಮೆಲ್ಲಿದುವಪ್ಪ ಕಾಲತಳಮುಂ ಕಡುವೆಟ್ಟಿದುವಪ್ಪ ಹಸ್ತಮುಂ.

---

ಟೀಕೆ.—ದ್ವಿತ್ವಬಹುತ್ವಂ = ದ್ವಿವಚನ ಬಹುವಚನಂ, ಅದು, ಆಗೆ, ಆ ವಿಭಕ್ತಿಗಳ = ಆ ಸಪ್ತವಿಭಕ್ತಿಗಳ, ಮೊದಲೊಳ್ = ಆದಿಯಲ್ಲಿ, ಆದಂ = ಆದನೆಂಬ ವಿಶೇಷದಿಂದೆ, ಗಳಾಗಮಂ = ಗಳ್ ಎಂಬಾಗಮಂ, ಸಮನಿಸುಗುಂ=ಬರುವುದು; ಸರ್ವನಾಮ ಗುಣವಚನದೊಳಂ=ಸರ್ವನಾಮ ಗುಣವಚನಂಗಳಲ್ಲಿ, ಗಳಾಗಮಕೆ= ಗಳೆಂಬಾಗಮಕ್ಕೆ, ಅವು=ಅವು (ಇವು, ಉವು) ಎಂಬಾಗಮಂ, ಸಮನಿಸುಗುಂ=ಬರುವುದು. ॥ ೯೫ ॥

ಸೂತ್ರಂ ॥ ಸಂಗಡಿಸಿ ಸರ್ವನಾಮದ ।
ಲಿಂಗಾಂತ್ಯಾಕ್ಷರಕಮವುವಿನಾದ್ಯಕ್ಷರಕಂ ॥
ಪಿಂಗದೆ ಲೋಪಂ ಗುಣವಚ ।
ನಂಗಳೊಳಂತ್ಯಂ ದುಕಾರಮಾದೊಡೆ ಲೋಪಂ ॥ ೯೬ ॥

ವೃತ್ತಿ.—ಸರ್ವನಾಮಶಬ್ದದ ಲಿಂಗದ ಕಡೆಯಕ್ಕರಕ್ಕಂ ಪರದ ಅವುವಿನ ಮೊದಲಕ್ಕರಕ್ಕಂ ಸಂಗಡದಿಂ ಲೋಪಮಕ್ಕುಂ; ದುಕಾರಾಂತಮಾದ ಗುಣ ವಚನದ ಕಡೆಗೆ ಲೋಪಂ.

ಪ್ರಯೋಗಂ.—ಸರ್ವನಾಮಕ್ಕೆ—ಪೆಱವಱ, ಪೆಱವಱೊಳ್, ಎಲ್ಲವಱ.

ಕಂ ॥ ಪೆಱವಱ ಧರ್ಮಂಗಳನೇ ।
ತೆಱದಿಂದಂ ತಂದು ಪೆಱವಱೊಳ್ ಪತ್ತಿಸಿ ಕ ॥
ಟ್ಟಿದಱಿಯೆ ಚತುರೋಕ್ತಿಕೃತಿಯೊಳ್ ।
ನೆಱೆದಿರೆ ಪೇೞ್ವುದು ಸಮಾಧಿಯೆನೆ ಪೆಸರ್ವಡೆಗುಂ ॥

ಗುಣವಚನಕ್ಕೆ—ಕರಿಯವು, ಪಿರಿಯವು, ಅಸಿಯವು, ಬಿಳಿಯವು.

ಕಂ ॥ ಬಿರಯಿಗಳ ಸುಯ್ಗಳೊಡನೆಯೆ ।
ಪಿರಿಯವು ದಿವಸಂಗಳಾದುವವರವರ ಪರಿ ॥
ಸ್ಫುರಿತಂಗಳೊಡನೆ ಕುಂದಿದು ।
ವಿರುಳ್ಗಳವುಂ ಮುಂಚಿ ಬಂದ ಜಲದಾಗಮದೊಳ್ ॥

ಸೂತ್ರಂ ॥ ಅಕ್ಕುಂ ಕೂಡೆ ತುಕಾರಾಂ ।
ತಕ್ಕೆ ತೃತೀಯತ್ವಮವುವಿನಾದಿಗೆ ಲೋಪಂ ॥
ಮಿಕ್ಕಾ ಸ್ತ್ರೀಪುಲ್ಲಿಂಗದೊ ।
ಳಕ್ಕುಮಿರರ್ದಿರ್ವರೆಂದು ಲೋಕೋಕ್ತಿಗಳೊಳ್ ॥ ೯೭ ॥

---

ಟೀಕೆ.—ಸರ್ವನಾಮದ=ಸರ್ವನಾಮಶಬ್ದದ, ಲಿಂಗ=ಲಿಂಗದ, ಅಂತ್ಯ=ಕಡೆ ಯಣ, ಅಕ್ಷರಕಂ=ಅಕ್ಕರಕ್ಕೆಯುಂ, ಅವುವಿನ=ಅವು ಎಂಬಾದೇಶದ, ಆದಿ=ಮೊದಲ, ಅಕ್ಷರಕಂ=ಅಕ್ಕರಕ್ಕೆಯುಂ, ಸಂಗಡಿಸಿ=ಒಂದಾಗಿ, ಪಿಂಗದೆ=ತೊಲಗದೆ, ಲೋಪಂ= ಅದರ್ಶನಮಪ್ಪುದು ; ಗುಣವಚನಂಗಳೊಳ್=ಗುಣವಚನಂಗಳಲ್ಲಿ, ಅಂತ್ಯಂ=ಕಡೆ ಯಕ್ಕರಂ, ದುಕಾರಂ=ದುತ್ವಂ, ಆದೊಡೆ, ಲೋಪಂ=ಅದರ್ಶನಮಪ್ಪುದು. ॥ ೯೬ ॥

ಟೀಕೆ.—ತುಕಾರಾಂತಕ್ಕೆ=ಗುಣವಚನಂಗಳಲ್ಲಿ ತುಕಾರಾಂತಕ್ಕೆ, ತೃತೀಯತ್ವಂ =ಮೂಱನೆಯಕ್ಷರದ ಭಾವಂ, ಅವುವಿನ= ಅವಾದೇಶದ, ಆದಿಗೆ = ಮೊದಲಕ್ಷರಕ್ಕೆ,

**ವೃತ್ತಿ.**— ಗುಣವಚನದ ತುಕಾರಾಂತಕ್ಕೆ (ವರ್ಗದ) ತೃತೀಯತ್ವಮು ಮವುವಿನಾದಿಗೆ ಲೋಪಮುಮಕ್ಕುಂ. (ಪಿಂತೆ ಸೂಚಿಸಿರ್ಪ ನಪುಂಸಕಲಿಂಗದ) ಸರ್ವನಾಮ ಗುಣವಚನಂಗಳಲ್ಲದ ಸ್ತ್ರೀಲಿಂಗ ಪುಲ್ಲಿಂಗದೊಳ್ 'ಗಳ್' ಎಂಬುದ ರ್ಕಾದೇಶಮಾಗಿ ಇರ್ ಅರ್ ದಿರ್ ವಿರ್ ಎಂದಕ್ಕುಂ.

**ಪ್ರಯೋಗಂ.**—ತೃತೀಯತ್ವಕ್ಕಂ ಅವುವಿನ ಲೋಪಕ್ಕಂ—ಒಳ್ಳಿದುವು, ತೆಳ್ಳಿದುವು, ದಟ್ಟಿದುವು, ಬೆಟ್ಟಿದುವು. ಬೆಟ್ಟಿದುವುಮೆನಿಪ್ಪ ಲೋಹ ಖುರ ವಳಯಂಗಳ್.

ಇರ್ಗೆ—ಪೆಂಡಿರ್, ತೊಟ್ತಿರ್. ತುಱುಗಳ ಪೆಂಡಿರ ಪಾರ್ವರ ಮಱಿ ವೊಕ್ಕರ. ತದ್ದ್ವಾರಾಪುರ ಸ್ತ್ರೀಯರಂ ತೊಟ್ತಿರ್ಮಾಡಿದಂ.

ಅರ್ಗೆ—ದೇವರ್, ನಂಟರ್, ನಲ್ಲರ್. ಪುಸಿಯಾದೊಡೆ ದೇವರ ಪಾದ ದಾಣೆ. ನಂಟರ ನಲ್ಲರ ಮಾತುಗಳೆದೋಪನೆ ಪರಮಾತ್ಮ.

ದಿರ್ಗೆ—ಇವಳ್ದಿರ್, ಇವಂದಿರ್, ಅವಂದಿರ್. ಇವಳ್ದಿರೊಳಿವಂದಿರಂ.

ವಿರ್ಗೆ—ತಂದೆವಿರ್, ತಾಯ್ವಿರ್, ಸೊಸೆವಿರ್. ಅವನತನಾಗಿ ತಂದೆವಿರ, ತಾಯ್ವಿರ ಕಲ್ಪಿಸಿದುಕ್ತಿ.

**ಸೂತ್ರಂ** ॥ ಬರೆ ಪುಂ ಸ್ತ್ರೀ ಲಿಂಗಮುಮಮು ।
ರ್ದಿರೆ ಸಂಖ್ಯಾ ಸರ್ವನಾಮ ಕೃದ್ಗುಣವಚನ ॥
ಸ್ಫುರದುರು ತದ್ಧಿತಮುಂ ಮುಂ ।
ದರುವಕ್ಕುಮುದಂತಲಿಂಗದೊಳ್ ವಿಧಿಲೋಪಂ ॥ ೯೮ ॥

---

ಲೋಪಂ = ಅದರ್ಶನಂ, ಕೂಡೆ = ಒಡನೆ (ಆಗುವುದು); ಮಿಕ್ಕ = (ನಪುಂಸಕ ಲಿಂಗದ) ಸರ್ವನಾಮಗುಣ ವಚನಂಗಳಲ್ಲದುೞಿದ, ಆ, ಸ್ತ್ರೀ ಪುಲ್ಲಿಂಗದೊಳ್ = ಸ್ತ್ರೀ ಪುಲ್ಲಿಂಗಗಳಲ್ಲಿ, ಇರರ್ದಿರ್ವಿರ್ರೆಂದು=ಇರ್, ಅರ್, ದಿರ್, ವಿರ್ ಎಂದು, ಲೋಕೋಕ್ತಿ ಗಳೊಳ್=ಜನವಾಕ್ಯಂಗಳಲ್ಲಿ, ಅಕ್ಕುಂ=ಅಪ್ಪುದು. ॥ ೯೭ ॥

**ಟೀಕೆ.**— ಪುಂ ಸ್ತ್ರೀ ಲಿಂಗಮುಂ = ಪುಲ್ಲಿಂಗ ಸ್ತ್ರೀಲಿಂಗಗಳುಂ, ಬರೆ, ಸಂಖ್ಯಾ=ಸಂಖ್ಯಾವಾಚಿಗಳುಂ, ಸರ್ವನಾಮ=ಸರ್ವನಾಮಂಗಳುಂ, ಕೃತ್=ಕೃತ್ತು ಗಳುಂ, ಗುಣವಚನ=ಗುಣವಚನಂಗಳುಂ, ಸ್ಫುರತ್=ಪ್ರಕಾಶಿಸುವ, ಉರು=ಉನ್ನತ ವಾದ, ತದ್ಧಿತಮುಂ = ತದ್ಧಿತಂಗಳುಂ, ಅಮರ್ದಿರೆ = ಆ ಪುಂ ಸ್ತ್ರೀ ಲಿಂಗಂಗಳಲ್ಲಿ ಪೊರ್ದುಗೆಯಾಗಿರೆ, ಮುಂದೆ = ಅಗ್ರದಲ್ಲಿ, ಅರು=ಗಳಾಗಮುಕ್ಕಾದೇಶವಾಗಿ ಅರ್

ವೃತ್ತಿ.—ಪುಲ್ಲಿಂಗಮುಂ ಸ್ತ್ರೀಲಿಂಗಮುಂ ಪೆಱಗೆವರೆ ಅರುವಕ್ಕುಂ; ಆ ಪುಂಸ್ತ್ರೀಲಿಂಗದೊಳಮರ್ದ ಸಂಖ್ಯೆಯುಂ ಸರ್ವನಾಮಮುಂ ಕೃತ್ತುಂ ಗುಣವಚನಮುಂ ತದ್ಧಿತಮುಮಿರ್ದೊಡಂ ಪರದೊಳರುವಕ್ಕುಂ. *

ಪ್ರಯೋಗಂ.—ಪುಲ್ಲಿಂಗಕ್ಕೆ—ಅರಸರ್, ಸಾಮಂತರ್, ಕೋವಿದರ್, ನಂದನರ್.

ಸ್ತ್ರೀಲಿಂಗಕ್ಕೆ—ದೇವಿಯರ್, ಕಾಂತೆಯರ್.

ಸಂಖ್ಯೆಗೆ—ಒರ್ವ ಬಿನ್ನಣಿಯಪ್ಪ ಬಡಗಿಯ ಪಾಂಗಿನಿಂದೆಲ್ಲಮಂ ಮಾಟ್ಟಿ ತಾಮಿರ್ವರುಂ ಕಯ್ದುವಂ ಬಿಸುಟರ್. ಪಯಿಂಛಾಸಿರ್ವರುಂ ಯುದ್ಧದೊಳ್.

ಸರ್ವನಾಮಕ್ಕೆ—ಪೆಱರುಮನಱಿ ನೀನುಂ ಆರಯ್ಸಿ ವಿದಗ್ಧರಿಂ. ಅವರಿವರೊಳರೆ ಕಾವ್ಯವಿದ್ವೆಯೊಳ್. ಉವರ್.

ಕೃತ್ತಿಂಗೆ—[1]ಕೊಂದರ್ ಕೇಚರರಂ ಸುರರೆಂದಱಿಯದೆ ನುಡಿದರ್. ಬೇಡಿದರ್.

ಕಂ ॥ ನುಡಿಗೆಲ್ಲಂ ಸಲ್ಲದ ಕ।
ನ್ನಡದೊಳ್ ಚತ್ತಾಣಮುಂ ಬೆದಂಡೆಯುಮೆಂದೀ ॥
ಗಡಿನ ನೆಗಟ್ತೆಯ ಕಬ್ಬದೊ।
ಳೊಡಂಬಡಂ ಮಾಡಿದರ್ ಪುರಾತನ ಕವಿಗಳ್ ॥

ಗುಣವಚನಕ್ಕೆ—ಆದ್ಯರುಮಕ್ಕುಮವಂದಿರ್ ಒಳ್ಳಿದರಪ್ಪವರೆಂದು. ಎನಗೆಬಲ್ಲಿದರಾಗಲಾರ್ಪರೆ ಗಾವಿಲರ್.

ತದ್ಧಿತಕ್ಕೆ—ಮಣಿಗಾಱರ್, ಕಂಚಗಾಱರ್, ಒಱೆಗಾಱರ್.

ಎಂಬಾಗಮಂ, ಅಕ್ಕುಂ=ಆಗುವದು ; ಅದಂತಲಿಂಗದೊಳ್=ಅಕಾರಾಂತ ಲಿಂಗಂಗಳಲ್ಲಿ, ವಿಧಿಲೋಪಂ=ಹಿಂದೆ ಪೇಟ್ದವಿಧಿಗೆ ಲೋಪಂ ಅಕ್ಕುಂ. ॥ ೯೮ ॥

* "ಮುಂದರಕ್ಕುಮತ್ಸ್ವಾಂತಲಿಂಗದೊಳ್ವಿಧಿಲೋಪಂ" ಎಂದು ಪಾಠಾಂತರಂ. ಅರ್=ಅರಾಗಮಂ ಅಕ್ಕುಂ=ಆಗುವುದು; ಅತ್ಸ್ವಾಂತಲಿಂಗದೊಳ್=ಅಕಾರಾಂತಲಿಂಗದಲ್ಲಿ, ವಿಧಿಲೋಪಂ=ಪಿಂದೆ ಪೇಟ್ದ ವಿಧಿಗೆ ಲೋಪಂ ಅಕ್ಕುಂ.

* 1. ಕೊಂದರ್ ಕೀಚಕನಂ. ಕ. ಖ. ಗ.

ಪುಲ್ಲಿಂಗಮಪ್ಪದಂತಕ್ಕೆಲ್ಲಿಯುಂ ವಿಧಿಲೋಪಂ—ಸುರರ್, ನರರ್, ಚದುರರ್, ಪಾರ್ವರ್—ಎಂಬಂತೆ.

**ಸೂತ್ರಂ ||** ಪವಣೊಳಮಾ ಸಂಖ್ಯೆಯೊಳಂ ।
ವ್ಯವಹರಿಕುಂ ವತ್ವಮಲ್ಲಿ ಬಶ್ರುತಿಯುಂ ಸಂ ||
ಭವಿಕುಮದಂತಂ ನಿಲೆ ಬಿಂ ।
ದುವಿಕಲ್ಪಂ ಬತ್ವಮೊರ್ಮೆ ಲೋಪಮನಾಳ್ಗುಂ || ೯೯ ||

**ವೃತ್ತಿ.**—[1]ಆ ಪುಂಸ್ತ್ರೀಲಿಂಗವಿಷಯಮಾದ ಪವಣೊಳಂ ಸಂಖ್ಯೆಯೊಳಂ ವತ್ವಮಕ್ಕುಂ; ಆ ವತ್ವಕ್ಕೊರ್ಮೆ ಬಕಾರಮಕ್ಕುಂ; ಅಕಾರಾಂತಮಾದೆಡೆಯೊಳ್ ಬಿಂದು ವಿಕಲ್ಪದಿಂದಕ್ಕುಂ; ಬಕಾರಕ್ಕೊರ್ಮೆ ಲೋಪಮಕ್ಕುಂ.

**ಪ್ರಯೋಗಂ.**—ಪವಣೊಳ್ವಕಾರಕ್ಕೆ—ಎಲ್ಲವರ್. ಎಲ್ಲವರಂತೆವೊಲ್ ನುಡಿವರ್.

ಸಂಖ್ಯೆಗೆ—ಮೂವತ್ತು ಮೂವರಾರ್ ದೇವರ್; ಇರ್ವರ್, ನೂರ್ವರ್.

ಬಕಾರಕ್ಕೆ—ಅನಿಬರ್, ಇನಿಬರ್, ಎನಿಬರ್, ಒರ್ಬಂ, ಇರ್ಬರ್. ನೆರೆದರಸುಗಳನಿಬರುಮಂ ಕಾದಿ ಗೆಲ್ದನೊರ್ಬನೆ ಪಾರ್ಥಂ. ಒಬ್ಬಂ ಬಂದೊಂದೆ ತೇರೊಳ್ ನೆರೆದ ಕುರುಬಲವ್ಯೂಹಮಂ.

ಅಕಾರಾಂತ ಬಿಂದುಗೆ ವಿಕಲ್ಪಂ—ಪಲಂಬರ್, ಪಲಬರ್; ಕೆಲಂಬರ್, ಕೆಲಬರ್.

ಬಕಾರ ಲೋಪಕ್ಕೆ—ಪಲರ್, ಕೆಲರ್.

---

**ಟೀಕೆ.**— ಪವಣೊಳಂ = ಆ ಪುಂಸ್ತ್ರೀಲಿಂಗದೊಳಮರ್ದ ಪ್ರಮಾಣವಾಚಿಗಳಲ್ಲಿಯುಂ, ಆ ಸಂಖ್ಯೆಯೊಳಂ=ಆ ಸಂಖ್ಯಾವಾಚಿಗಳಲ್ಲಿಯುಂ, ವತ್ವಂ=ವಕಾರಂ, ವ್ಯವಹರಿಕುಂ=ವ್ಯವಹರಿಪುದು, ಬರ್ಪುದೆಂಬರ್ಥಂ; ಅಲ್ಲಿ=ಆ ಪುಂಸ್ತ್ರೀಲಿಂಗ ವಿಷಯವಾಗಿ ಬಂದ ವಕಾರದಲ್ಲಿ, ಬಶ್ರುತಿಯುಂ=ಬಕಾರದ ಶ್ರವಣಮುಂ, ಸಂಭವಿಕುಂ=ಹುಟ್ಟುವುದು; ಅದಂತಂ=ಅಕಾರಾಂತಂ, ನಿಲೆ=ನೆಲಸೆ, ಬಿಂದು=ಸೊನ್ನೆ, ವಿಕಲ್ಪಂ=ವಿಕಲ್ಪವಾಗಿ ಬರ್ಪುದು; ಬತ್ವಂ=ಬಕಾರಂ, ಒರ್ಮೆ=ಒಂದು ಬಾರಿ, ಲೋಪಮಂ=ಅದರ್ಶನಮಂ, ಆಳ್ಗುಂ=ತಾಳ್ವುದು. || ೯೯ ||

1. ಪವಣಂ ಸಂಖ್ಯೆಯುಂ ಪೇಟ್ಟ ಪುಂಸ್ತ್ರೀಲಿಂಗ ವಿಷಯದೊಳ್ ಅಕಾರಾಂತಮಾದೆಡೆಯೊಳ್ ಬಿಂದು ವಿಕಲ್ಪದಿಂದಕ್ಕುಂ. ಕ. ಖ.

ಸೂತ್ರಂ ॥ ಪವಣಂ ಸೂಚಿಪ ಸಂಖ್ಯೆಯ ।
ನವಿಶೇಷದಿನುಸಿರ್ವ ರೂಢಿಯನಿತಿನಿತೆನಿತೆ ॥
ಲ್ಲವು ಕೆಲವು ಪಲವು ತಾಮಂ ।
ತ್ಯವರ್ಣ ಲೋಪಮನೆ ವತ್ವಮೊದವಿರೆ ಪಡೆಗುಂ ॥ ೧೦೦ ॥

ವೃತ್ತಿ.—ಅನಿತು, ಇನಿತು, ಎನಿತು—ಎಂದು ಪವಣಂ ಪೇಳ್ವ, ನಿರ್ವಿಶೇಷದಿಂ ಸಂಖ್ಯೆಯಂ ಪೇಳ್ವ ಎಲ್ಲವು, ಕೆಲವು, ಪಲವು—ಎಂಬ ಶಬ್ದಂಗಳ್ ವತ್ವಮಿದಿರೊಳ್ ಇರ್ದೊಡಮಂತ್ಯಲೋಪಮಂ ಪಡೆವುವು.

ಪ್ರಯೋಗಂ.—ಅನಿಬರ್, ಇನಿಬರ್, ಎನಿಬರ್, ಎಲ್ಲವರ್, ಕೆಲಬರ್, ಪಲವರ್.

ಸೂತ್ರಂ ॥ ವಿಕಲಂ ಪೆಱವಱೊಳರುವಿಂ ।
ಗೆ ಕಳಾಗಮಮಂತೆ ಸರ್ವನಾಮದೊಳಂ ತಾಂ ॥
ಪ್ರಕಟಂ ಗಳಾಗಮಂ ತಿಳಿ ।
ವಿಕಲ್ಪದಿಂದಪ್ಪುದಲ್ತೆ ಗಳ್ದಿರ್ವಿಗರ್ಗಂ ॥ ೧೦೧ ॥

ವೃತ್ತಿ.—ಮತ್ತೆ ಕೆಲವಱೊಳರುವಿನ ಮೇಲೆ ಕಳಾಗಮಮಕ್ಕುಂ; ಪೆಱವಱೊಳರುವಿಲ್ಲದೆಯುಂ ಕಳಾಗಮಮಕ್ಕುಂ; ಸರ್ವನಾಮದೊಳರುವಿನ ಮೇಲೆ ಗಳಾಗಮಮಕ್ಕುಂ; ದಿರ್ವಿಗೆ ವಿಕಲ್ಪದಿಂ ಗಳಾಗಮಮಕ್ಕುಂ.

ಪ್ರಯೋಗಂ.—ಅರುವಿನ ಮೇಲೆ ಕಳಾಗಮಕ್ಕೆ—ಬುಧರ್ಕಳ್, ಗೋವರ್ಕಳ್, ಘೋಟಬಾಯಿಲರ್ಕಳ್.

........................................

ಟೀಕೆ.—ವತ್ವಂ=ವಕಾರಂ, ಒದವಿರೆ=ಬಂದಿರೆ, ಪವಣಂ=ಪ್ರಮಾಣವಮಂ, ಸೂಚಿಪ = ಸೂಚಿಸುವ, ಸಂಖ್ಯೆಯಂ = ಲೆಕ್ಕವಂ, ಅವಿಶೇಷದಿಂ = ಸಾಮಾನ್ಯದಿಂ, ಉಸಿರ್ವ=ಪೇಳ್ವ, ರೂಢಿಯ=ಪ್ರಸಿದ್ಧಿಯ, ಅನಿತು=ಅನಿತೆಂಬುಧು, ಇನಿತು=ಇನಿತೆಂಬುದು, ಎನಿತು=ಎನಿತೆಂಬುದು, ಎಲ್ಲವು=ಎಲ್ಲವೆಂಬುದು, ಕೆಲವು = ಕೆಲವೆಂಬುದು, ಪಲವು = ಪಲವೆಂಬುದು, ತಾಂ, ಅಂತ್ಯ = ಕಡೆಯಣ, ವರ್ಣ = ಅಕ್ಷರದ, ಲೋಪಮನೆ=ಅದರ್ಶನವನೆ, ಪಡೆಗುಂ=ಪಡೆವುದು. ॥ ೧೦೦ ॥

ಟೀಕೆ.—ಪೆಱವಱೊಳ್ = ಕೆಲವಱಲ್ಲಿ, ಅರುವಿಂಗೆ = ಅರಾಗಮಕ್ಕೆ, ಕಳಾಗಮಂ=ಕಳ್ ಎಂಬಾಗಮಂ, ವಿಕಲಂ= ವಿಕಲ್ಪವಾಗಿ ಬರ್ಪುದು ; ಅಂತೆ=ಹಾಗೆ, ಸರ್ವನಾಮದೊಳಂ=ಪುಂಸ್ತ್ರೀಲಿಂಗ ವಿಷಯವಾದ ಸರ್ವನಾಮಂಗಳಲ್ಲಿಯುಂ, ಗಳಾಗಮಂ = ಗಳ್ ಎಂಬಾಗಮಂ, ತಾಂ, ಪ್ರಕಟಂ=ಪ್ರಸಿದ್ಧಂ ; ದಿರ್ವಿಗರ್ಗಂ = ದಿರಾಗಮ ವಿರಾಗಮಂಗಳ್ಗೆ, ಗಳ್=ಗಳಾಗಮಂ, ವಿಕಲ್ಪದಿಂದ್ಲ್ವೆ, ಅಪ್ಪುದು=ಆಗುವದು, ಅಲ್ತೆ=ಅಲ್ಲವೆ, ತಿಳಿ=ಅಱಿ. ॥ ೧೦೧ ॥

ಅರುವಿಲ್ಲದಲ್ಲಿ ಕಳ್—ಮಕ್ಕಳ್, ನಾಟ್ಕಳ್, ಕೋಟ್ಕಳ್.

ಅರುವಿನಮೇಲೆ ಸರ್ವನಾಮದೊಳ್ ಗಳಾಗಮಕ್ಕೆ—ಅವರ್ಗಳ್, ಇವರ್ಗಳ್, ಉವರ್ಗಳ್.

ದಿರ್ಗೆ—ಅಣ್ಣಂದಿರ್, ಅಣ್ಣಂಗಳ್; ಭಾವಂದಿರ್, ಭಾವಂಗಳ್; ಮಾವಂದಿರ್, ಮಾವಂಗಳ್; ಅಯ್ಯಂದಿರ್, ಅಯ್ಯಂಗಳ್; ಅಕ್ಕಂದಿರ್, ಅಕ್ಕಂಗಳ್.

ವಿರ್ಗೆ—ಅತ್ತೆವಿರ್, ಅತ್ತೆಗಳ್; ತಾಯ್ವಿರ್, ತಾಯ್ಗಳ್; ತಂದೆವಿರ್, ತಂದೆಗಳ್.

**ಸೂತ್ರಂ** ॥ ಸವನಿಪುದಯತ್ನ ಕೃತ ಗೌ।
ರವ ಮುಖದೊಳ್ ಗುರು ಮುನೀಶ್ವರಾದಿ ವಿಶಿಷ್ಟೋ॥
ದ್ಭವ ವಿನಯದೊಳೊಂದಿದಸ।
ಹ್ಯವೃತ್ತಿಯೊಳ್ ತಾಂ ಬಹುತ್ವಮೇಕತ್ವದೊಳಂ ॥ ೧೦೨ ॥

**ವೃತ್ತಿ.**—ಪಾತ್ರವಿಶೇಷಮಲ್ಲದೆಡೆಯೊಳ್ ಪ್ರಯತ್ನಮಲ್ಲದಿರ್ಪ ಗುರುತ್ವದೊಳಂ, ಗುರು ಮುನೀಶ್ವರಾದಿ ವಿಶೇಷತ್ವದೊಳಂ, ಅಸಹ್ಯ ವೃತ್ತಿಯೊಳಂ, ಏಕವಚನಕ್ಕೆ ಬಹುವಚನಮಪ್ಪುದು.

**ಪ್ರಯೋಗಂ.**—ಪ್ರಯತ್ನಮಲ್ಲದ ಗುರುತ್ವಕ್ಕೆ—ಎಮ್ಮ ತಂದೆಗಳ್, ಎಮ್ಮಯ್ಯಂಗಳ್, ಎಮ್ಮ ತಾಯ್ಗಳ್.

ಗುರು ಮುನಿಜನಂಗಳ್ಗೆ—ಗುರುಗಳ್.

ಕಂ॥ ಶ್ರೀವುತ್ಸಮಂತಭದ್ರ।
ಸ್ವಾಮಿಗಳ ಜಗತ್ಪ್ರಸಿದ್ಧ ಕವಿಪರಮೇಷ್ಠಿ॥
ಸ್ವಾಮಿಗಳ ಪೂಜ್ಯಪಾದ।
ಸ್ವಾಮಿಗಳ ಪದಂಗಳೀಗೆ ಶಾಶ್ವತಪದಮಂ॥

---

**ಟೀಕೆ.**—ಅಯತ್ನ=ಪ್ರಯತ್ನವಿಲ್ಲದೆ, ಕೃತ=ಮಾಡಲ್ಪಟ್ಟ, ಗೌರವಮುಖದೊಳ್=ಗುರುತ್ವದ ಮುಖದಲ್ಲಿ, ಗುರು=ಗುರುಗಳ್, ಮುನೀಶ್ವರ=ಮುನೀಶ್ವರರ್, ಆದಿ=ಮೊದಲಾದ, ವಿಶಿಷ್ಟ=ಶ್ರೇಷ್ಠರಲ್ಲಿ, ಉದ್ಭವ=ಹುಟ್ಟುವ, ವಿನಯದೊಳ್=ವಿನಯದಲ್ಲಿ, ಒಂದಿದಸಹ್ಯವೃತ್ತಿಯೊಳ್=ಕೂಡಿದ ಅಸಹ್ಯವಾದ ವೃತ್ತಿಯಲ್ಲಿ, ಏಕತ್ವದೊಳಂ=ಏಕವಚನದಲ್ಲಿಯುಂ, ಬಹುತ್ವಂ=ಬಹುವಚನಂ, ತಾಂ, ಸವನಿಪುದು=ಬರ್ಪುದು. ॥೧೦೨॥

ಅಸಹ್ಯವೃತ್ತಿಗೆ—

ಕಂ॥ ಬಡವಾದಿರರಸ ಕಾಲೊಳ್।
ನಡೆದಪಿರೊಡನಾರುಮಿಲ್ಲ ಕಡಲೆಗಳೇಂ ನಿ॥
ಮ್ಮುಡಿಯೊಳಗೆ ಪಡುವ ದೇಗುಲ।
ದೆಡೆಯಾವುದು ಕುಡದ ನಿಮಗವಿಾಯೆಡಜಾಯ್ತೇ॥

ಸೂತ್ರಂ॥ ಉದಯಿಸುಗುಂ ಗಳ್ದಿರ್ಗಳ।
ಮೊದಲೊಳದಂತಕ್ಕೆ ಬಿಂದು ಪುಂಸ್ತ್ರೀಲಿಂಗ॥
ಕ್ಕದು ನಪ್ಪಿನೊಳ್ ವಿಕಲ್ಪಂ।
ಪುದಿದಿರೆ ಗಳ್ ಬಿಂದು ನಿಯತಮದು ಸಂಸ್ಕೃತದೊಳ್ ॥ ೧೧೩ ॥

ವೃತ್ತಿ.—ಪುಲ್ಲಿಂಗ ಸ್ತ್ರೀಲಿಂಗದದಂತಕ್ಕೆ ಗಳ್ದಿರ್ಗಳ್ ಪರಮಾಗೆ ನಡುವೆ ಬಿಂದುವಕ್ಕುಂ; ಅಕಾರಾಂತ ನಪುಂಸಕಲಿಂಗದೊಳ್ ಗಳ್ಪರೆ ಆ ಬಿಂದು ವಿಕಲ್ಪಂ; ಸಂಸ್ಕೃತದೊಳ್ ಬಿಂದು ನಿತ್ಯಂ.

ಪ್ರಯೋಗಂ.—ಪುಲ್ಲಿಂಗಕ್ಕೆ—ಅಣ್ಣಂಗಳ್, ಅಣ್ಣಂದಿರ್; ಭಾವಂಗಳ್, ಭಾವಂದಿರ್; ಮಾವಂಗಳ್, ಮಾವಂದಿರ್; ಅಯ್ಯಂಗಳ್, ಅಯ್ಯಂದಿರ್.

ಸ್ತ್ರೀಲಿಂಗಕ್ಕೆ—ಅಕ್ಕಂಗಳ್, ಅಕ್ಕಂದಿರ್.

ನಪುಂಸಕ ಲಿಂಗಕ್ಕೆ—ಮರಂಗಳ್, ಮರಗಳ್; ಪೊಲಂಗಳ್, ಪೊಲಗಳ್; ಪಯಂಗಳ್, ಪಯಗಳ್; ಕೆಲಂಗಳ್, ಕೆಲಗಳ್.

ಸಂಸ್ಕೃತಕ್ಕೆ—ಗುಣಂಗಳ್, ಮದಂಗಳ್, ದೇಶಂಗಳ್, ಕೋಶಂಗಳ್, ಪಾಶಂಗಳ್—ಎಂಬಂತೆ.

ದೋಷಕ್ಕೆ—ದೇಶಗಳ್.

---

ಟೀಕೆ.—ಪುಂಸ್ತ್ರೀಲಿಂಗಕ್ಕೆ=ಪುಲ್ಲಿಂಗ ಸ್ತ್ರೀಲಿಂಗಂಗಳಾದ, ಅದಂತಕ್ಕೆ=ಅಕಾರಾಂತಂಗಳ್ಗೆ, ಗಳ್ದಿರ್ಗಳ=ಗಳಾಗಮ ದಿರಾಗಮಂಗಳ, ಮೊದಲೊಳ್=ಆದಿಯಲ್ಲಿ, ಬಿಂದು=ಸೊನ್ನೆ, ಉದಯಿಸುಗುಂ=ಪುಟ್ಟುವುದು; ಅದು=ಆ ಬಿಂದು, ನಪ್ಪಿನೊಳ್=ಅಕಾರಾಂತ ನಪುಂಸಕ ಲಿಂಗದಲ್ಲಿ, ವಿಕಲ್ಪಂ=ವಿಕಲ್ಪವಾಗಿ ಜನಿಯಿಸುವುದು; ಸಂಸ್ಕೃತದೊಳ್=ಸಂಸ್ಕೃತ ಶಬ್ದಂಗಳಲ್ಲಿ, ಗಳ್=ಗಳಾಗಮಂ, ಪುದಿದಿರೆ=ಪ್ರವೇಶವಾಗಿರೆ, ಬಿಂದು=ಸೊನ್ನೆ, ಅದು, ನಿಯತಂ=ನಿತ್ಯವಾಗಿ ಬರ್ಪುದು. ॥ ೧೧೩ ॥

**ಸೂತ್ರಂ** ॥ ಪರದೊಳ್ ಸ್ವರಮಿರೆ ಬಿಂದುಗೆ ।
ದೊರೆಕೊಳ್ಗುಂ ನತ್ವ ಮತ್ವಮಾ ಮತ್ವಕ್ಕು ॥
ಚ್ಚರಿಪರ್ ವತ್ವಮನರೆಬರ್ ।
ನಿರವದ್ಯಂ ನಿಜಮಕಾರದೆಡೆಗಂ ವತ್ವಂ ॥ ೧೦೪ ॥

**ವೃತ್ತಿ.**—ಸ್ವರಂ ಪರಮಾಗೆ ಬಿಂದುವಿಂಗೆ ನಕಾರ ಮಕಾರಂಗಳಕ್ಕುಂ; ಆ ಮಕಾರಕ್ಕೊರ್ಮೆ ವಕಾರಮಕ್ಕುಂ; ಸಹಜ ಮಕಾರಕ್ಕಂ ವಕಾರಮಕ್ಕುಂ.

**ಪ್ರಯೋಗಂ.**—ನಕಾರಕ್ಕೆ—ಪೊಲನಱಿಯದ ನೆಲನಱಿಯದ ಕೆಲನಱಿಯದ ಮಿಗದ ಮೂಱು ವಿಧವಱಿಯದ.

ಮ॥ಸ್ರ॥ ಇವಳಂ ಶೃಂಗಾರಸಾರಂ ಕುಸುಮಶರನೆ ಮೇಣ್ ಮಾಡಿದಂ ಪ್ರೋಲ್ಲಸತ್ಪ ।
ಲ್ಲವಪುಷ್ಪಂ ಮೇಣ್ ಬಸಂತಂ ಬಯಸೆ ಪಡೆದನೆತ್ತಂ ಸುಧಾಸೌಧಮಂ ಸೂ ॥
ಸುವ ಚಂದ್ರಂ ತಾನೆ ಮೇಣ್ ಪುಟ್ಟಿಸಿದನತಿಜಡಂ ಛಾಂದಸಂ ಪದ್ಮಜಂ ನಿ ।
ಕ್ಕುವಮಲ್ಲಂ ಕರ್ತೃ ತಾನೆಂಬಿನಿತತಿಶಯಮಂ ತಾಳ್ದಿದೀ ಕನ್ನೆಯಂದಂ ॥

ಮಕಾರಕ್ಕೆ—ಕುಲಮಂ ಚಲಮಂ ವಿದ್ಯಾಬಲಮಂ ಶೌರ್ಯಾವಲೇಪಮಂ ಪೊಗೞೆ ನೆಲಂ.

ಕಂ ॥ ಆಯಿರ್ದ ಮಾಱ್ಕೆಯೊಳೆ ಪರ ।
ಮಾಯುಷ್ಯಾಂತಂಬರಂ ನಿರಾಕುಳಮಾಗಿ ॥
ರ್ಪಾಯಿರವಿನ ಜೈನಾಭಿ ।
ಪ್ರಾಯಂ ಪ್ರಾಯೋಪಗಮನಮಂ ನೋಂನಿಸಿದಂ ॥

ವಕಾರಕ್ಕೆ—ಕಣ್ಣಿಂ ಕಾಣಂ ಕಿವಿಯಿಂ ಕೇಳಂ ಕಾಣ್ಬಂದವೆಂತು ತಲೆಯಿಲ್ಲದನಾ. ಶೌಚವಣ್ಮಿ ಪೆರ್ಮಾತು ಕುಲಂ. ನಾಸಿಕವಡ್ಡಂ ಬಂದಂದವು ನೀಕ್ಷಿಸಿ.

ನಿಜ ಮಕಾರದ ವಕಾರಕ್ಕೆ—ತಾಮರೆ, ತಾವರೆ; ಸಾಮಂತಂ, ಸಾವಂತಂ; ತಿಮಿರ್, ತಿವಿರ್; ತೆಮರ್, ತೆವರ್; ಸಾಮಿ, ಸಾವಿ.

.................................................................................................

**ಟೀಕೆ.**—ಪರದೊಳ್ = ಮುಂದೆ, ಸ್ವರಂ = ಸ್ವರಾಕ್ಷರಂ, ಇರೆ, ಬಿಂದುಗೆ= ಸೊನ್ನೆಗೆ, ನತ್ವಮತ್ವಂ=ನಕಾರ ಮಕಾರಂ, ದೊರೆಕೊಳ್ಗುಂ=ಬರ್ಪುದು; ಆ ಮತ್ವಕ್ಕೆ=ಆ ಬಿಂದುವಿಂಗೆ ಬಂದ ಮಕಾರಕ್ಕೆ, ಅರೆಬರ್=ಕೆಲಂಬರ್, ವತ್ವಮಂ=ವಕಾರಮಂ, ಉಚ್ಚರಿಪರ್=ಉಚ್ಚರಿಸುವರ್; ನಿರವದ್ಯಂ=ದೋಷವಿಲ್ಲದೆ, ನಿಜಮಕಾರದ=ಬಿಂದುವಿಂಗೆ ಬಂದುದಲ್ಲದ ನಿಜಮಕಾರದ, ಎಡೆಗಂ= ಸ್ಥಾನಕ್ಕೆಯುಂ, ವತ್ವಂ= ವಕಾರಮುಪ್ಪುದು. ॥ ೧೦೪ ॥

ಸೂತ್ರಂ ॥ ಬಿಂದುವದಂತಕ್ಕುೞಿದೆಡೆ।
ಗೆಂದುಂ ಪ್ರಥಮೈಕವಚನದೊಳ್ ಲೋಪಮುದಂ ॥
ತಂದೊರೆವಡೆದಿದಿರೊಳ್ ಸ್ವರ।
ಮೊಂದಿರೆ ಪುಲ್ಲಿಂಗದಲ್ಲಿ ನಾಗಮುಮಕ್ಕುಂ ॥ ೧೦೫ ॥

ವೃತ್ತಿ.—ಪ್ರಥಮೈಕವಚನದೊಳಕಾರಾಂತಕ್ಕೆ ಬಿಂದುವಕ್ಕುಂ; ಅಕಾರಾಂತಮಲ್ಲದೆಡೆಯೊಳೆಲ್ಲಂ ಲೋಪಮುಕ್ಕುಂ; ಅಕಾರಾಂತ ಪುಲ್ಲಿಂಗಕ್ಕೆ ಸ್ವರಾದಿ ವಿಭಕ್ತಿ ಪರಮಾಗೆ ನಕಾರಾಗಮುಮಕ್ಕುಂ.

ಪ್ರಯೋಗಂ.—ಬಿಂದುವಿಂಗೆ—

ಕಂ॥ ವೇದವಿದಂ ಕಾಲತ್ರಯು।
ವೇದಿ ಬಹುಶ್ರುತನಥರ್ವಕುಶಲಂ ಶುಭವಂ ॥
ಶೋದಯುನುತ್ತಮುನಾಶೀ।
ರ್ವಾದಪರಂ ಪರಹಿತಂ ಪುರೋಹಿತನಕ್ಕುಂ ॥

ಬಿಂದುಲೋಪಕ್ಕೆ—ಪುಲ್, ಪೊದಱ್, ಗಿಡು, ಬಳ್ಳಿ, ಪುಲಿ, ಕರಡಿ, ಎರಲೆ—ಇವು ಮೊದಲಾದುವು.

ಅಕಾರಾಂತ ಪುಲ್ಲಿಂಗದೊಳ್ ನಕಾರಾಗಮಕ್ಕೆ—ಅವನೊಳ್ಳಿದಂ, ಅವನಂ, ಅವನಿಂ, ಅವನತ್ತಣಿಂ, ಅವನ, ಅವನೊಳ್.

ಸೂತ್ರಂ ॥ ವಿತತ ನಪುಂಸಕ ಲಿಂಗ।
ದ್ವಿತೀಯೆಯೊಳ್ ನತ್ವಮುತ್ವವಿಧಿ ಮತ್ವಮೆ ಸಂ ॥
ಗತಿವಡೆಗುಂ ಸಂಸ್ಕೃತದೊಳ್।
ತೃತೀಯೆ ಮೊದಲಾದುವರ್ಕೆ ದಾಗಮುಮಕ್ಕುಂ ॥ ೧೦೬ ॥

---

ಟೀಕೆ.—ಪ್ರಥಮೈಕವಚನದೊಳ್= ಪ್ರಥಮಾವಿಭಕ್ತಿಯ ಏಕವಚನದಲ್ಲಿ, ಅದಂತಕ್ಕೆ=ಅಕಾರಾಂತ ಶಬ್ದಕ್ಕೆ, ಬಿಂದು=ಮಕಾರದ ಸೊನ್ನೆ ಅಪ್ಪುದು; ಉೞಿದೆಡೆಗೆ= ಅಕಾರಾಂತವಲ್ಲದುೞಿದೆಡೆಗೆ, ಎಂದುಂ= ಆವಾಗಲುಂ, ಲೋಪಂ = ಅದರ್ಶನಂ ಅಪ್ಪುದು; ಅದಂತಂ=ಅಕಾರಾಂತಂ, ದೊರೆವಡೆದು=ಪ್ರಸಿದ್ಧಿವಡೆದು, ಇದಿರೊಳ್= ಮುಂದೆ, ಸ್ವರಂ=ವಿಭಕ್ತಿಸ್ವರಂ, ಒಂದಿರೆ=ಕೂಡಿರೆ, ಪುಲ್ಲಿಂಗದಲ್ಲಿ, ನಾಗಮುಂ=ನಕಾರಾಗಮುಂ, ಆಕ್ಕುಂ=ಅಪ್ಪುದು. ॥ ೧೦೫ ॥

ಟೀಕೆ.—ಅದಂತಕ್ಕೆಂಬುದನುವರ್ತನೆ—ವಿತತ=ನಾನಾ ಪ್ರಕಾರವಾದ, ನಪುಂಸಕ ಲಿಂಗ=ನಪುಂಸಕ ಲಿಂಗದ, ದ್ವಿತೀಯೆಯೊಳ್=ದ್ವಿತೀಯಾವಿಭಕ್ತಿಯಲ್ಲಿ, ನತ್ವಮುತ್ವ

**ವೃತ್ತಿ.**—ಕನ್ನಡದೊಳಕಾರಾಂತ ನಪುಂಸಕಲಿಂಗಕ್ಕೆ ಪರವಾದ ದ್ವಿತೀಯೆಗೆ ನಕಾರಮಕಾರಂಗಳಪ್ಪುವು; ಸಂಸ್ಕೃತದೊಳ್ ಮಕಾರಮೆ ಅಕ್ಕುಂ; ತೃತೀಯೆ ಮೊದಲಾದ ವಿಭಕ್ತಿ ಪರಮಾಗೆ ದಕಾರಾಗಮಮಕ್ಕುಂ.

**ಪ್ರಯೋಗಂ.**—ನಕಾರಕ್ಕೆ—ಪೊಲನಂ, ನೆಲನಂ, ಬಿಲನಂ, ಕೆಲನಂ.

ಮತ್ವಕ್ಕೆ—ಬೆಟ್ಟಮಂ, ಘಟ್ಟಮಂ, ಹಳ್ಳಮಂ, ಕೊಳ್ಳಮಂ, ಬಳ್ಳಮಂ, ಕೊಳಗಮಂ, ಬಳಗಮಂ.

ಸಂಸ್ಕೃತ ಮತ್ವಕ್ಕೆ—

ಕಂ ॥ ಕುಲಮಂ ಚಲಮಂ ವಿದ್ಯಾ ।
ಬಲಮಂ ಶೌರ್ಯಾವಲೇಪಮಂ ಪೊಗೞೆ ನೆಲಂ ॥
ನೆಲಕೆಲ್ಲಂ ನೆಗೞ್ದಂ ದ್ವಿ ।
ಟ್ಕುಲ ಕುಲನಗ ದಳನ ಪಟು ಪವಿಪ್ರತಿಮ ಭುಜಂ ॥

ನೂಂಕಿದನೆಂಬೊಂದರ್ಥದೊಳ್ ಅರ್ಧಚಂದ್ರನನಿತ್ತನೆಂದು ನಕಾರಮುಪಚಾರಮಾಯ್ತು.

ದಕಾರಾಗಮಕ್ಕೆ—ಮನದಿಂ, ಮನದತ್ತಣಿಂ, ಮನದ, ಮನದೊಳ್.

ಕಂ ॥ ಮನದಿಂ ಬೇಗಂ ಪುಟ್ಟಿದ ।
ನನೂನ ಫಲ ಕುಸುಮ ಕಿಸಲಯ ಭ್ರಾಜಿತಮಂ ॥
ಬನದೊಳಗೆ ಪವನನಂದನ ।
ನನಿಂದ್ಯಗುಣನೆಸೆವಶೋಕಧಾತ್ರೀರುಹದಿಂ ॥

**ಸೂತ್ರಂ** ॥ ಸಮನಿಸಿ ತೋಱಿಸುಗುಮಿಮಿಂ ।
ದಮಿಂದೆಯೆಂಬಿವು ತೃತೀಯೆಯೊಳ್ ಮತ್ತಮೆಕಾ ॥
ರಮದೊಂದೆ ಪೇಣ್ ತೃತೀಯೆಗೆ ।
ಸಮುಚಿತಮಾದೇಶಮಱಿದುಕೊಳ್ಗೀ ಕ್ರಮದಿಂ ॥ ೧೦೭ ॥

---

ವಿಧಿ=ನಕಾರ ಮಕಾರಂಗಳ ವಿಧಿ ಅಪ್ಪುದು; ಸಂಸ್ಕೃತದೊಳ್=ಸಂಸ್ಕೃತ ಶಬ್ದದಲ್ಲಿ, ಮತ್ವಮೆ=ಮಕಾರವೆ, ಸಂಗತಿವಡೆಗುಂ=ಸಂಬಂಧವಾಗುವುದು; ತೃತೀಯೆ ಮೊದಲಾದುವರ್ಕೆ=ತೃತೀಯಾವಿಭಕ್ತಿ ಮೊದಲಾದ ಸ್ವರಾದಿವಿಭಕ್ತಿಗೆ, ದಾಗಮಂ=ದಕಾರಾಗಮಂ, ಆಕ್ಕುಂ=ಅಪ್ಪುದು. ॥೧೦೬॥

**ಟೀಕೆ.**— ತೃತೀಯೆಯೊಳ್ = ತೃತೀಯಾವಿಭಕ್ತಿಯಲ್ಲಿ, ಇಂ=ಇಂ ಎಂದು, ಇಂದಂ=ಇಂದಂ ಎಂದು, ಇಂದೆ=ಇಂದೆ ಎಂದು, ಎಂಬಿವು=ಎಂಬೀ ಮೂಱು

ವೃತ್ತಿ.—ಇಂ, ಇಂದಂ, ಇಂದೆ—ಎಂದು ತೃತೀಯೆ ಮೂದೆಱನಾಗಿರ್ಪುದು; ಇವರ್ಕಾದೇಶವಾಗಿ ಬೇಱೊಂದೆಕಾರಮುಪ್ಪುದು. *

ಪ್ರಯೋಗಂ.—ಇವಾದಿಗಳ್ಗೆ—ಗರುಡಿಯ ಬಳಸಿಂ, ಬಿಜ್ಜೋದರಗಳದಿಂದಾನೆ, [1]ಹೋರಲಿಕ್ಕಿದ ತಱಯಿಂ, ತುರಗದ ವಾಹಳಿಯಿಂ. ಭಯದಿಂದಂ, ಮುಳಿಸಿಂದಂ, ಸ್ಮಯದಿಂದಂ. ಭಯದಿಂದೆ, ರಾಗದಿಂದೆ; ತೊಡೆಸಂಕಲೆಯಿಕ್ಕಿದವೊಲ್ಕುಡಿಯಳ್ಳೆಗಳಿಂದೆ ಸುರಿದುವಿರ್ಕೆಲಕೆ ಕರುಳ್.

ಆದೇಶದೆಕಾರಕ್ಕೆ—ಕ್ರಮದೆ, ನಯದೆ, ಭಯದೆ; ಬಗೆದಂತಾಗೆ ಸುರೇಂದ್ರರಿಂ ಕ್ರಮದೆ ಕಲ್ಯಾಣದ್ವಯಂ ಜೈನದೀಕ್ಷೆಗೆ ಪೂಣ್ದು.

ಸೂತ್ರಂ ॥ ವಿದಿತಮುವರ್ಣ ಋವರ್ಣಾ ।
ತ್ವದೊಳಂ ಹ್ರಸ್ವೈತ್ವದೊಳಮಿನಾಗಮವಿಧಿ ತ ॥
ಪ್ಪದು ವತ್ವಸಂಧಿಯೆಡೆಯೊಳ ।
ಮುದಿತ ತೃತೀಯೆಯೊಳಮಱ ವಿಕಲ್ಪಸ್ಥಿತಿಯಂ ॥೧೦೮॥

........................................................................

ರೂಪಂಗಳ್, ಸಮನಿಸಿ=ಬಂದು; ತೋಱುಸುಗುಂ=ಕಾಣಿಸುವುವು; ಮತ್ತಂ=ಬಳಿಕಂ, ಎಕಾರಂ=ಎತ್ವಂ, ಅದೊಂದೆ=ಅದು ತಾನೊಂದೆ, ಮೇಣ್=ವಿಕಲ್ಪದಿಂದೆ, ತೃತೀಯೆಗೆ=ತೃತೀಯಾ ವಿಭಕ್ತಿಗೆ, ಸಮುಚಿತಂ=ಉಚಿತವಾದ, ಆದೇಶಂ=ಆದೇಶವೆಂದು, ಈ ಕ್ರಮದಿಂ=ಈ ರೀತಿಯಿಂದೆ, ಅಱದುಕೊಳ್ಗೆ=ತಿಳಿದುಕೊಳ್ಗೆ. ॥ ೧೦೭ ॥

ಟೀಕೆ.— ವಿದಿತ=ಪ್ರಸಿದ್ಧಮಪ್ಪ, ತೃತೀಯೆಯೊಳಂ=ತೃತೀಯಾ ವಿಭಕ್ತಿಯಲ್ಲಿ, ಉವರ್ಣ=ಉ ಊ ಎಂಬ ಸವರ್ಣದಲ್ಲಿ, ಋವರ್ಣ=ಋ ೠ ಎಂಬ ಸವರ್ಣದಲ್ಲಿ,

---

* ವಿಚಾರಂ.— ಅಕಾರಾಂತ ನಪುಂಸಕಲಿಂಗದಲ್ಲಿ ತೃತೀಯಾವಿಭಕ್ತಿಯ ಮೂಱು ರೂಪಿಂಗೆ ವಿಕಲ್ಪದಿಂದೆ ಎಕಾರಾದೇಶವಾಗುವುದೆಂದಱವುದು.

ಅಕಾರಾಂತಮಲ್ಲದಲ್ಲಿಯುಂ ನಪುಂಸಕಲಿಂಗಮಲ್ಲದಲ್ಲಿಯುಂ ಎಕಾರಾದೇಶಮಕ್ಕುಂ.

ಪ್ರಯೋಗಂ.—

(1) ತನಿತು ತೊಡಂಬೆವಿಟ್ಟುದಿರ್ದ ಪಣ್ಣಳ ನಟಿತ್ತಿಯೆ ಮೊಲ್ಲು ಸೋರ್ವ ತೆಂ ।
ಚಂದ್ರಪ್ರಭ ಪುರಾಣ.—III. ೧೫.

(2) ಪೊನ್ನಿಗನುಂ ಮಲ್ಲಪನುಂ ।
ಪೊನ್ನನಿ ನಟಿತ್ತಿಯೆ ಪುರಾಣ ಚೂಡಾಮಣಿಯಂ ॥
ಮುನ್ನಂ ಪೇೞಿಸಿದಂತೆ ಗು ।
ಣೋನ್ನತ ಕವಿರತ್ನನಿಂದಿದಂ ಪೇೞಿಸಿದಳ್ ॥
ಅಜಿತನಾಥ ಪುರಾಣ.—I. ೭೮

[1]ಹಾರವಿಕ್ಕಿದ ತಱಯಿಂ. ಕ. ಖ.

**ವೃತ್ತಿ.** — ಪ್ರಸಿದ್ಧಮಪ್ಪುವರ್ಣದೊಳಂ ಋವರ್ಣದೊಳಂ ಔಕಾರ ಮೋಕಾರದೊಳಂ ಹ್ರಸ್ವಮಪ್ಪೆಕಾರದೊಳಂ ತೃತೀಯೆ ಮೊದಲಾದುವಱೊ ಳಿನಾಗಮಮಕ್ಕುಂ ; ತೃತೀಯೆಯೊಳಂ ವತ್ವಸಂಧಿಯೆಡೆಯೊಳಮಿನಾಗಮಂ ವಿಕಲ್ಪದಿಂದಕ್ಕುಂ

**ಪ್ರಯೋಗಂ.**—ಉವಾದಿಗಳ್ಗೆ—ತಳಿರ್ವಾಸಿನಿಂದೆ ಸೆಜ್ಜೆಗೆ ಕೆಳದಿಯರೆಂ ತಕ್ಕೆ ಕೊಂಡುಪೋದರ್ ವಿರಹಾಕುಲೆಯಂ. ಪೂವಿನ ಬಿಲ್ಲ ಕೊಪ್ಪನೊಡೆದೇಱಿಸಿ ತಾವರೆನೂಲ ನಾರಿಯಂ ಜೇವೊಡೆಗೆಯ್ದು. ಪಿತೃವಿನ, ಋವಿನ, ಗ್ಲೌವಿನ, ಗೋವಿನ. ಮತ್ತಿನ ಬೇರ್ಗಳ ಬಿತ್ತುಗಳಾವೆಡೆಯೊಳೇನೊ ಸುಜನೋತ್ತಂಸಾ. ನಿನ್ನಿನ, ಮೊನ್ನಿನ.

ವ್ಯಂಜನದೊಳುಂಟು—ಈ ಸೂಱಿನ.

ತೃತೀಯೆಯೊಳ್ ವಿಕಲ್ಪಕ್ಕೆ—ಮಾತಿಂ, ಮಾತಿನಿಂ; ಕಡುಪಿಂ, ಕಡುಪಿನಿಂ.

ವತ್ವಸಂಧಿಯೊಳ್ ವಿಕಲ್ಪಕ್ಕೆ— ಮಡುವಿಂ, ಮಡುವಿನಿಂ ; ಮಡುಗೆ, ಮಡುವಿಂಗೆ; ಮಡುವ, ಮಡುವಿನ; ಗುರುವಿಂ, ಗುರುವಿನಿಂ; ಗುರುಗೆ, ಗುರು ವಿಂಗೆ; ಮನುವಿಂ, ಮನುವಿನಿಂ; ಗುರುವ, ಗುರುವಿನ; ಗುರುವೊಳ್, ಗುರುವಿ ನೊಳ್.

ಕಂ ॥ ಮನುವಿನ ಮಾರ್ಗಂ ಸುರಗುರು ।
ವಿನಱಿವು ಪವಮಾನಸೂನುವೊಂದಾಯತಿ ಪೆಂ ॥
ಪಿನೊಳಿಸೆವ ಕರ್ಣನೊಳ್ನುಡಿ ॥
ತನಗದು ನಿಜಮಾಗೆ ನೆಗಳ್ದನಾ ವಿಭುವಿಳೆಯೊಳ್ ॥

**ಸೂತ್ರಂ ॥** ಪಗಲಿರುಳೆಂಬಲ್ಲಿ ವಿಕ ।
ಲ್ಪಗತಿಯಿನಾ ವ್ಯಂಜನಾಂತದೊಳೆ ಪೇಟ್ದಿರ್ ಸೂ ॥
ರಿಗಳಾಗಳೀಗಳೆಂಬೆಡೆ ।
ಗಗಲ್ದುರುಱಿದೆಡೆಗಿನಾಗಮಂ ದೋಷಕರಂ ॥ ೧೯ ॥

---

ಔತ್ವದೊಳಂ=ಔಕಾರ ಓಕಾರಂಗಳಲ್ಲಿಯುಂ, ಹ್ರಸ್ವ=ಹ್ರಸ್ವದ, ಎತ್ವದೊಳಂ=ಎಕಾರ ದಲ್ಲಿಯುಂ, ವಿದಿತಂ=ಪ್ರಸಿದ್ಧವಾದ, ಇನಾಗಮವಿಧಿ=ಇನಾಗಮದ ವಿಧಿ, ತಪ್ಪದು= ತೊಲಗದು; ವತ್ವಸಂಧಿಯೆಡೆಯೊಳಂ=ವತ್ವಸಂಧಿಯ ಸ್ಥಾನದಲ್ಲಿಯುಂ, ಉದಿತ= ಉಂಟಾದ, ತೃತೀಯೆಯೊಳಂ=ತೃತೀಯೆಯಲ್ಲಿಯುಂ, ವಿಕಲ್ಪಸ್ಥಿತಿಯಂ=ವಿಕಲ್ಪದ ಸ್ಥಿತಿಯಂ, ಅಱಿ=ತಿಳಿ. ॥ ೧೮ ॥

**ವೃತ್ತಿ.**—ಪಗಲಿರುಳೆಂಬ ವ್ಯಂಜನಾಂತ ಶಬ್ದಂಗಳೊಳಿನಾಗಮಂ ವಿಕಲ್ಪದಿ ನಪ್ಪುದು; ಆಗಳೀಗಳೆಂಬ ವ್ಯಂಜನಾಂತದೊಳಿನಾಗಮಂ ನಿತ್ಯಂ; ಮಿಕ್ಕೆಡೆಯೊ ಳೆಲ್ಲಂ ದೋಷಂ.

**ಪ್ರಯೋಗಂ.**—ವಿಕಲ್ಪಕ್ಕೆ— ಪಗಲ, ಪಗಲಿನ; ಇರುಳ, ಇರುಳಿನ. ಪಗಲಂತಿರ್ದಚ್ಚವೆಳ್ದಿಂಗಳಮಿನಕಿರಣಶ್ರೇಣಿಗೆತ್ತಾಗಳ್ ಮುನಿವಂದಂ. ಪಗಲಿನ ರವಿಕಿರಣಂಗಳ್ ಮುಗುಟ್ದೀಗಳ್. ಇರುಳ ಸರೋಜವಾದುದರಿರಾಯರ ಸಂಸಾರಂ. ಇರುಳಿನ ಚಕ್ರಾಹ್ವಯುದವ್ಪೋಲಿರ್ದವಂ ಸುಖಂ ಬಡೆದಪನೆ.

ನಿತ್ಯಕ್ಕೆ—ಆಗಳಿನ ಕಜ್ಜಮಂ ಏಗಮೆ ಗೆಯ್ದಪುದೆಂದು ಆವ ರೀತಿ ಪೇೞಿಂ ದೊಡೆ ಬಯ್ಪರೀಗಳಿನ ದೆಸೆಗೆವಿಟ್ದ ಮಹಾಕವೀಶ್ವರರ್.

ದೋಷಕ್ಕೆ—ಬೆಮರಿನ, ಮಣಲಿನ, ಮುಗಿಲಿನ; ಇವಱಂತೆ ಮಿಕ್ಕುವಂ ನೋಡಿಕೊಳ್ವುದು.

**ಸೂತ್ರಂ ॥** ಜನಿಯಿಪುದುದಂತ ಕೃತ್ಸ।
ರ್ವನಾಮ ಗುಣವಚನ ಸಂಖ್ಯೆಗಳ್ಗೆ ಪವಣ್ಗಱಿ॥
ವಿನಮುಱ್ಕಾರಂ ದಿಗ್ವಾ।
ಚಿ ನಿಲೆ ತೃತೀಯಾದಿಗಣ್ಪ್ರಯೋಗಿಸೆ ಪಡುಗುಂ ॥ ೧೧೦ ॥

**ವೃತ್ತಿ.**—ಉಕಾರಾಂತಮಪ್ಪ ಕೃತ್ತಿಂಗಂ ಸರ್ವನಾಮಕ್ಕಂ ಗುಣವಚನ ಕ್ಕಂ ಸಂಖ್ಯೆಗಂ ಪವಣ್ಗಂ ತೃತೀಯೆ ಮೊದಲಾದುದಱೊಳಱಾಗಮಂ ಪುಟ್ಟು ಗುಂ; ದಿಗ್ವಾಚಕದೊಳಂತೆ ಅಣಾಗಮಮುಕ್ಕುಂ.

---

**ಟೀಕೆ.**—ಸೂರಿಗಳ್=ವಿದ್ವಾಂಸರ್, ಆ ವ್ಯಂಜನಾಂತದೊಳ್=ಆ ಪ್ರಸಿದ್ಧವಾದ ವ್ಯಂಜನಾಂತಶಬ್ದಗಳಲ್ಲಿಯೆ, ಪಗಲ್=ಪಗಲೆಂದು, ಇರುಳ್=ಇರುಳೆಂದು, ಎಂಬಲ್ಲಿ= ಎಂಬ ಶಬ್ದಂಗಳಲ್ಲಿ, ವಿಕಲ್ಪಗತಿಯಿಂ=ವಿಕಲ್ಪದ ಗತಿಯಿಂದೆ, ಪೇೞ್ವರ್=ಇನಾಗ ಮಮಂ ಪೇೞ್ವರ್; ಆಗಳ್=ಆಗಳೆಂದು, ಈಗಳ್=ಈಗಳೆಂದು, ಎಂಬೆಡೆಗೆ=ಎಂಬ ಸ್ಥಾನಕ್ಕೆ, ಅಗಲ್ಚರ್=ಇನಾಗಮಮಂ ತೊಲಗಿಸರ್; ಉೞಿದೆಡೆಗೆ=ಮಿಕ್ಕ ವ್ಯಂಜನಾಂತ ಸ್ಥಾನಕ್ಕೆ, ಇನಾಗಮಂ=ಇನ್ ಎಂಬಾಗಮಂ, ದೋಷಕರಂ=ದೋಷಕರವಪ್ಪುದು.

**ಟೀಕೆ.**—ಉದಂತಕೃತ್=ಉಕಾರಾಂತ ಕೃತ್ತುಗಳ್ಗೆ, ಸರ್ವನಾಮ = ಸರ್ವ ನಾಮಂಗಳ್ಗೆ, ಗುಣವಚನ=ಗುಣವಚನಂಗಳ್ಗೆ, ಸಂಖ್ಯೆಗಳ್ಗೆ=ಸಂಖ್ಯಾವಾಚಿಗಳ್ಗೆ, ಪವ ಣ್ಗೆ=ಪ್ರಮಾಣವಾಚಿಗಳ್ಗೆ, ಅಱಿವಿನಂ=ತಿಳಿಯುತ್ತಿರೆ, ತೃತೀಯಾದಿಗೆ=ತೃತೀಯಾವಿಭಕ್ತಿ ಮೊದಲಾದುವರ್ಕೆ, ಅಱ್ ಎಂಬಾಗಮಂ, ಜನಿಯಿಪುದು=ಹುಟ್ಟುವುದು; ದಿಗ್ವಾಚಿ= ದಿಕ್ಕಂ ಪೇೞ್ವ ಶಬ್ದಂಗಳ್, ನಿಲೆ=ಇರೆ, ಅಣ್=ಅಣೆಂಬಾಗಮಂ, ಪ್ರಯೋಗಿಸೆ ಪಡು ಗುಂ=ಪ್ರಯೋಗಿಸಲ್ಪಡುವುದು. ॥ ೧೧೦ ॥

ಪ್ರಯೋಗಂ.—ಕೃತ್ತಿಂಗೆ–ಮಾಡಿದುದಱಿಂ, ಕೂಡಿದುದಱಿಂ, ನೋಡಿದುದಱಿಂ, ಉಣ್ಬುದರ್ಕೆ.

ಸರ್ವನಾಮಕ್ಕೆ—ಅದಱಲ್ಲಿ; ಪೆಱವಱ ಧರ್ಮಂಗಳಂ; ಪೆಱವಱೊಳ್. ಅದಱಿನೆಂಬರ್ಥದೊಳ್ ಅಂತಱಿನೆಂದೊಂದು ಶಬ್ದಮುಂಟು.

ಗುಣವಚನಕ್ಕೆ—ಕಿಱಿದಱೊಳೆ ಪಿರಿದುವರ್ಥಮನಱಿಪಲ್ ನೆಱೆವಾತನಾತನಿಂ ಜಾಣಂ.

ಗುಣವಚನಮಲ್ಲದಲ್ಲಿಯುಂ ಅಱ್ಕಾರಂ ಒರ್ಮೆ ಉಂಟು—ಮೇಲುದಱ ಸೆಱಂಗನೋಸರಿಸುವಂತಿರೆ.

ಸಂಖ್ಯೆಗೆ—ಮೂಱಱಿಂ, ನಾಲ್ಕಱಿಂ, ಅಯ್ದಱಿಂ.

ಪವಣ್ಗೆ—ಅನಿತಱಿಂ, ಇನಿತಱಿಂ, ಎನಿತಱಿಂ, ಎಲ್ಲವಱಿಂ.

ದಿಗ್ವಾಚಿಯ ಅಣ್ಗೆ—ಮೂಡಣ, ತೆಂಕಣ, ಪಡುವಣ—ಇತ್ಯಾದಿ; ಮೂಡಣಿಂ, ತೆಂಕಣಿಂ, ಪಡುವಣಿಂ, ಬಡಗಣಿಂ, ಮೇಗಣಿಂ, ಕೆಳಗಣಿಂ, ನಡುವಣಿಂ, ಕಡೆಯಣಿಂ, ಅತ್ತಣಿಂ, ಇತ್ತಣಿಂ, ಉತ್ತಣಿಂ, ಎತ್ತಣಿಂ, ಮುಂದಣಿಂ, ಪಿಂದಣಿಂ, ಮುಂತಣಿಂ, ಪಿಂತಣಿಂ, ಒಳಗಣಿಂ, ಪೊಱಗಣಿಂ, ಕಡೆಯಣಿಂ. 'ನಡು'ಎಂಬುದು ಶರೀರಮಧ್ಯಮಂ ಕುಱಿತು ದಿಗ್ವಾಚಕಮಲ್ತು, ಮಧ್ಯಮಂ ಕುಱಿತು ದಿಗ್ವಾಚಕಂ. 'ಎಡೆ' ಎಂಬುದು ತೆಱಪಂ ಪೇೞ್ವಲ್ಲಿ ದಿಗ್ವಾಚಕಂ; 'ಆವೆಡೆಯಣಿಂ' ಎಂದಣ್ಬತ್ತುವುದು.

ಸೂತ್ರಂ ॥ ಪುರುಷಪರಮಾದೊಡತ್ವಂ ।
ದೊರೆಕೊಳ್ಗುಮದಣ್ತುಗುಳ್ದ ದಿಗ್ವಾಚಕದೊಳ್ ॥
ಪರ ದಿಗ್ವಾಚಕದೊಳ್ ಸಂ ।
ಚರಿಸುವುದಾ ತೆಱದೆ ದತ್ವವಿಧಿ ಶಾಬ್ದಿಕರಿಂ ॥ ೧೧೧ ॥

ವೃತ್ತಿ.—ಅಣ್ಬತ್ತಿದ ದಿಗ್ವಾಚಕಂ ಪುಲ್ಲಿಂಗಮಪ್ಪೆಡೆಯೊಳ್ ಅಕಾರಮುಂ ಕೈಕೊಳ್ಗುಂ; ಅಣ್ಬತ್ತದ ಮಿಕ್ಕ ದಿಗ್ವಾಚಕದೊಳ್ ದಕಾರಾಗಮುಮಕ್ಕುಂ.

---

ಟೀಕೆ.—ಅಣ್ತುಗುಳ್ದ ದಿಗ್ವಾಚಕದೊಳ್=ಅಣಾಗಮುಂ ಪತ್ತಿದ ದಿಗ್ವಾಚಕಂಗಳಲ್ಲಿ, ಪುರುಷಪರಂ=ಪುಲ್ಲಿಂಗಪರಂ, ಆದೊಡೆ=ಆಗೆ, ಅತ್ವಂ=ಅಕಾರಂ, ಅದು, ದೊರೆಕೊಳ್ಗುಂ= ಬರ್ಪುದು; ಪರದಿಗ್ವಾಚಕದೊಳ್ = ಅಣ್ಬತ್ತದ ಮಿಕ್ಕ ದಿಗ್ವಾಚಕಂಗಳಲ್ಲಿ, ಆತೆಱದೆ = ಆರೀತಿಯಿಂದೆ, ದತ್ವವಿಧಿ = ದಕಾರದ ವಿಧಿ, ಶಾಬ್ದಿಕರಿಂ = ಶಬ್ದಜ್ಞರಿಂದೆ, ಸಂಚರಿಸುವುದು=ವರ್ತಿಸುವುದು. ॥ ೧೧೧ ॥

**ಪ್ರಯೋಗಂ.**—ಅಕಾರಕ್ಕೆ—ಮೂಡಣಂ, ತೆಂಕಣಂ, ಬಡಗಣಂ, ಪಡುವಣಂ, ಮೇಗಣಂ, ಕೆಳಗಣಂ, ನಡುವಣಂ, ಕಡೆಯಣಂ, ಎಡೆಯಣಂ, ಒಳಗಣಂ, ಪೊಱಗಣಂ, ಮುಂತಣಂ, ಪಿಂತಣಂ, ಅತ್ತಣಂ, ಇತ್ತಣಂ.

ದಕಾರಕ್ಕೆ—ಕೆಲದಂ, ಬಲದಂ, ಅಲ್ಲಿದಂ, ಇಲ್ಲಿದಂ, ಎಲ್ಲಿದಂ.

ಉ ॥ ..........................ಕೆಲದನಲ್ಲಿದನಿಲ್ಲಿದನೀಗಳೆಂಬಿನಂ ।
ಮುತ್ತಿದನೊಂದೆ ತೇರೊಳಮರೇಂದ್ರಸುತಂ ಕುರುವೃಂದವೆಲ್ಲಮಂ ॥

..............................................................ವಿನೋ ॥
ಚಂ ॥ ..........................................................
ದದ ಮೊದಲೆಲ್ಲಿದಂ ಸೊಬಗಿನಾಗರಮೆಲ್ಲಿದನಿಚ್ಚೆಯಾಣ್ಮನೆ ।
ಲ್ಲಿದನೆರ್ದೆಗಾಣ್ಮನೆನ್ನರಸನೆಲ್ಲಿದನೋ ಲಲಿತಾಂಗ ವಲ್ಲಭಂ ॥

**ಸೂತ್ರಂ** ॥ ಏನೇತಱೆನಿಕುಮಾದಿಯೊ ।
ಳಾ ನೆಗಟ್ದ ಚತುರ್ಥಿಗಕ್ಕುಮೇತರ್ಕೇಕೆಂ ॥
ಬೀ ನುಡಿಯೇತಱ್ ಪ್ರಕೃತಿಯೆ ।
ತಾನಕ್ಕುಂ ತತ್ತೃತೀಯೆ ಮೊದಲಾದುವಱೊಳ್ ॥ ೧೧೨ ॥

**ವೃತ್ತಿ.**—ಏನೆಂಬ ಸರ್ವನಾಮದ ಪ್ರಥಮೆಗೆ ಏನೆಂದುಂ ಏತಱೆಂದುಮಕ್ಕುಂ; ಚತುರ್ಥಿಯೊಳೇತರ್ಕೆಂದುಮೇಕೆಂದುಮಕ್ಕುಂ; ತೃತೀಯೆ ಮೊದಲಾದುವರ್ಕೆ ಏತಱೆಂದೆ ಪ್ರಕೃತಿಯಕ್ಕುಂ.

**ಪ್ರಯೋಗಂ.**—ಪ್ರಥಮೆಗೆ—ಅಂದಿನ ನಿಜ ಭುಜ ವಿಕ್ರಾಂತಮೇನಾದುದು. ಏನಾಗಿಯುಮೇನೊ ತೀರ್ದಪುದೆ ತೀರದೊಡಂ. ಮಱುದುಂಬಿಯಾಗಿಮೇಣ್ ಗತಿಯೆಂಬುದೇತಱಾತನೆ. ಚೀ! ಗತಿಯುಂಬಡೆದೇತಱಾತನೇ ಗತಿಯೆಂದಳ್.

ಚತುರ್ಥಿಗೆ—ಏತರ್ಕೆ, ಏಕೆ: ಏತರ್ಕೆ ಮುನಿಸೆಂದು ನೊಂದು ನುಡಿದಂ. ಏಕೆಂದಱಿಯೆಂ ದಶಥರ್ಮಾಕಲಿತ ಕರಾಗ್ರನಾದನೆನಗಿದು ಚೋದ್ಯಂ.

..............................................................................................

**ಟೀಕೆ.**—ಆದಿಯೊಳ್=ಪ್ರಥಮಾವಿಭಕ್ತಿಯಲ್ಲಿ, ಏನ್=ಏನೆಂದು, ಏತಱ್= ಏತಱೆಂದು, ಎನಿಕುಂ=ಎನಿಸುವದು; ಆ ನೆಗಟ್ದ ಚತುರ್ಥಿಗೆ=ಆ ಪ್ರಸಿದ್ಧಿವಡೆದ ಚತುರ್ಥೀವಿಭಕ್ತಿಗೆ, ಏತರ್ಕೆ=ಏತರ್ಕೆ ಎಂದು, ಏಕೆ=ಏಕೆ ಎಂದು, ಎಂಬೀ ನುಡಿ= ಎಂಬೀ ಶಬ್ದಂ, ಅಕ್ಕುಂ=ಅಪ್ಪುದು; ತತ್ತೃತೀಯೆ=ಆ ತೃತೀಯೆ, ಮೊದಲಾದುವಱೊಳ್=ಮೊದಲಾದ ವಿಭಕ್ತಿಗಳಲ್ಲಿ, ಏತರ್ಪ್ರಕೃತಿಯೆ=ಏತಱ್ ಎಂಬ ಪ್ರಕೃತಿಯೆ, ತಾಂ, ಅಕ್ಕುಂ=ಆಗುವದು. ॥ ೧೧೨ ॥

ತೃತೀಯಾದಿಗೆ—ಏತಱಿಂ, ಏತಱತ್ತಣಿಂ, ಏತಱ, ಏತಱೊಳ್. ಏತಱ ಮಾತು ಭೂತಳದೊಳರ್ಥವಿಹೀನನ [1]ಶೌರ್ಯದಣ್ಮು.

**ಸೂತ್ರಂ** ॥ ಒದವುವುದದಂತ ಪುಲ್ಲಿಂ।
ಗದೊಳ್ ಗೆಯೆಂದಾದಿ ಬಿಂದುವಿಂ ದ್ವಿತ್ವಂ ಮೇ॥
ಣೊದವುವುದು ನಪುಂಸಕಲಿಂ।
ಗದೊಳ್ ಚತುರ್ಥಿಗೆ ಗೆಯಕ್ಕುಮುೞಿದೆಡೆಗೆಲ್ಲಂ ॥೧೧೩॥

**ವೃತ್ತಿ.**—ಅಕಾರಾಂತ ಪುಲ್ಲಿಂಗದೊಳ್ ಪರಮಾದ ಚತುರ್ಥಿ ಬಿಂದುವೆರಸು ಗೆಯೆಂದಕ್ಕುಂ; ಅಕಾರಾಂತ ನಪುಂಸಕಲಿಂಗದೊಳ್ ಪರಮಾದ ಚತುರ್ಥಿಗೆ ವಿಕಲ್ಪದಿಂ ದ್ವಿತ್ವಮಕ್ಕುಂ; ಅಕಾರಾಂತಮಲ್ಲದುೞಿದ ಸ್ವರವ್ಯಂಜನಾಂತಂಗಳ್ಗೆ ಪರಮಾದ ಚತುರ್ಥಿಗೆ, ಲಿಂಗವಚನ ವ್ಯವಸ್ಥೆಯಿಲ್ಲದೆ ಗೆಯೆಂದಕ್ಕುಂ.

**ಪ್ರಯೋಗಂ.**—ಪುಲ್ಲಿಂಗಕ್ಕೆ—ಅರಸಂಗೆ, ಆತಂಗೆ. ಅರಸಂಗಮರಸಿಗಂ ಪುಟ್ಟಿದ ರಾಜಸುತನೆನಿಸಿ ಹಂದೆಯುಂ ಲೋಭಿಯುಂ.

ಕಂ॥ ಆತಂಗಮಾಕೆಗಂ ವಿ।
ಖ್ಯಾತಯಶಂ ಪುಟ್ಟಿದಂ ಕುಲಕ್ಕಂ ಚಲಕಂ॥
ಭೂತಳದೊಳಾರ್ಗಮಧಿಕಂ।
ನೀತಿಪರಂ ಪರಬಲಾಬ್ಧಿಗೌರ್ವಪ್ರತಿಮಂ॥

ನಪುಂಸಕಲಿಂಗ ದ್ವಿತ್ವವಿಕಲ್ಪಕ್ಕೆ—ಬನಕ್ಕೆ, ಬನಕೆ; ಪೊಲಕ್ಕೆ, ಪೊಲಕೆ; [2]ಕುಲಕಂ ಚಲಕ್ಕಂ ಭೂತಳದೊಳಾರ್ಗಮಧಿಕಂ.

ಸ್ವರವ್ಯಂಜನಾಂತಂಗಳ್ಗೆ—ಕವಿಗೆ ಕೇಡಿಲ್ಲೆಂತುಂ; ತನುಗೆ ಭೂಷಣಂ ಪೊಱೆಯಲ್ತೆ; ಆಕೆಗೆ (ಕಡಿಲೆಂದು) ಆತಂ ನುಡಿದಂ; ಪೆಣ್ಗೆ; ಕಣ್ಗೆ; ಕುರುಳ್ಗೆ;

---

**ಟೀಕೆ.**—ಚತುರ್ಥಿಗೆ=ಕೆ ಎಂಬ ಚತುರ್ಥೀವಿಭಕ್ತಿಗೆ, ಅದಂತ=ಅಕಾರಾಂತವಾದ, ಪುಲ್ಲಿಂಗದೊಳ್=ಪುಲ್ಲಿಂಗದಲ್ಲಿ, ಆದಿಬಿಂದುವಿಂ=ಆದಿಯಲ್ಲಿ ಬಿಂದುವಿನೊಡನೆ ಗೆ ಎಂದು, ಒದವುವುದು=ಬರ್ಪುದು; ನಪುಂಸಕಲಿಂಗದೊಳ್=ಅಕಾರಾಂತವಾದ ನಪುಂಸಕಲಿಂಗದಲ್ಲಿ, ದ್ವಿತ್ವಂ=ದ್ವಿರ್ಭಾವಂ, ಮೇಣ್=ವಿಕಲ್ಪದಿಂದೆ, ಒದವುವುದು=ಬರ್ಪುದು; ಉೞಿದೆಡೆಗೆ=ಅಕಾರಾಂತವಲ್ಲದುೞಿದೆಡೆಗೆ, ಎಲ್ಲಂ=ಸ್ತ್ರೀಪುಂನಪುಂಸಕಲಿಂಗಂಗಳಲ್ಲಿಯೆಲ್ಲಂ, ಗೆ=ಗೆಯೆಂದು, ಅಕ್ಕುಂ=ಆಗುವುದು. ॥೧೧೩॥

1. ಶೌಚದಣ್ಮು.
2. ಕುಲಕಂ ಚಲಕಂ. ಕ. ಖ.

ಬೆರಲ್ಗೆ; ಅರಲ್ಗೆ; ಬೆಂಗೆ; ಕಳ್ಗೆ; ಮುಳ್ಗೆ; ಬಿಲ್ಗೆ; ಅವಲ್ಗೆ; ನೆಗಟ್ಗೆ; ಪೊಱ ವಾರ್ಗೆ.

ವಚನತ್ರಯಕ್ಕೆ—ಆವುದು ಸಂಕಟಂ ನಿನಗೆ ನಿಲ್ಲಜ ನಿಲ್ಲಜಾ. ಸ್ಯೆತಿರು ಕಿವಿಗಳ್ಗೆ ಕರ್ಣಪೂರಮನಿಡುವೆಂ. ಅವಳ ಕುರುಳ್ಗೆ ಮಾಲೆದುಂಬಿಗಳೆಣೆಯೆ.

ಸೂತ್ರಂ ॥ ಅಮರ್ದಿರದು ತೃತೀಯತ್ವಂ ।
ಸಮಾಸವದ್ಭಾವಮಾದ ತಾಣದೊಳೆಲ್ಲಂ ॥
ಸಮಸಂದ ಚತುರ್ಥಿಗೆ ಕಾ ।
ವ್ಯಮಾರ್ಗದೊಳ್ ಲಕ್ಷ್ಯಮುಂಟು ತಾನೀ ತೆಱದಿಂ ॥ ೧೧೪ ॥

ವೃತ್ತಿ.—ಸಮಾಸಮಿಲ್ಲದೆಯುಂ ಸಮಾಸಲಕ್ಷಣಮಂ ಪೊಕ್ಕ ಚತುರ್ಥಿಗೆ ತೃತೀಯತ್ವಮಿಲ್ಲ.

ಪ್ರಯೋಗಂ.—ಕಾಟ್ಕೆ, ಕೊಟ್ಕೆ, ನಾಟ್ಕೆ ಏತರ್ಕೆ, ಅದರ್ಕೆ, ಅನಿತರ್ಕೆ: ಏತಕೆಂದುಮುಂಟು. ಬಯಲ್ಗೆ ಬಂದಪರೊ ಪೇೞನಿತರ್ಕಮೊಳಂ ಪುರಾಂತಕಂ. ಶರೀರದ ಭೋಗಮುಂ ತೊಱೆವನಿತರ್ಕೆ.

ಸೂತ್ರಂ ॥ ಪಿರಿದುಂ ಚತುರ್ಥಿ ಸಂಸ್ಕೃತ ।
ಪುರುಷ ಸ್ತ್ರೀ ವಿಷಯ ವಿಹಿತ ಬಹುವಚನದೊಳೊಂ ॥
ದಿರೆ ಶಿಥಿಲವೃತ್ತಿ ತಾನು ।
ಚ್ಚರಿಪರ್ಗೆ ಯಥೇಷ್ಟಮೆಂದು ತಿಳಿಗೀಕ್ರಮದಿಂ ॥ ೧೧೫ ॥

---

ಟೀಕೆ.—ಸಮಾಸವದ್ಭಾವಂ=ಸಮಾಸದಂತಪ್ಪ ಭಾವಂ, ಆದ, ತಾಣದೊಳ್=ತಾವಿನಲ್ಲಿ, ಎಲ್ಲಂ=ಸರ್ವಂ, ಸಮಸಂದ ಚತುರ್ಥಿಗೆ=ಸಮಾನವಾಗಿ ಸಂದ ಚತುರ್ಥೀವಿಭಕ್ತಿಗೆ, ತೃತೀಯತ್ವಂ = ಮೂಱನೆಯಕ್ಷರದ ಭಾವಂ, ಅಮರ್ದಿರದು=ಪೊರ್ದುಗೆಯಾಗಿರದು; ಕಾವ್ಯಮಾರ್ಗದೊಳ್ = ಕಾವ್ಯಂಗಳ ಮಾರ್ಗದಲ್ಲಿ, ಈ ತೆಱದಿಂ=ಈ ರೀತಿಯಿಂದೆ, ಲಕ್ಷ್ಯಂ=ಉದಾಹರಣೆ, ತಾಂ, ಉಂಟು=ಉಂಟಾಗಿರ್ಪುದು. ॥ ೧೧೪ ॥

ಟೀಕೆ.—ಪಿರಿದುಂ=ವಿಶೇಷವಾಗಿ, ಸಂಸ್ಕೃತ=ಸಂಸ್ಕೃತದ, ಪುರುಷಸ್ತ್ರೀ=ಪುಲ್ಲಿಂಗ ಸ್ತ್ರೀಲಿಂಗಂಗಳ, ವಿಷಯ=ವಿಷಯದಲ್ಲಿ, ವಿಹಿತ=ಕೂಡಲ್ಪಟ್ಟ, ಬಹುವಚನದೊಳ್=ಬಹುವಚನದಲ್ಲಿ, ಚತುರ್ಥಿ= ಚತುರ್ಥೀವಿಭಕ್ತಿ, ಒಂದಿರೆ=ಕೂಡಿರೆ, ಶಿಥಿಲವೃತ್ತಿ=ಶಿಥಿಲದ ವರ್ತನೆ, ತಾಂ, ಉಚ್ಚರಿಪರ್ಗೆ=ಓದುವರ್ಗೆ, ಯಥೇಷ್ಟಮೆಂದು=ಇಚ್ಛೆಬಂದ ಹಾಗೆ ಎಂದು, ಈ ಕ್ರಮದಿಂ=ಈ ರೀತಿಯಿಂದೆ, ತಿಳಿಗೆ=ಅಱಿಗೆ. ॥ ೧೧೫ ॥

ವೃತ್ತಿ.—ಸಂಸ್ಕೃತ ಪುಲ್ಲಿಂಗ ಸ್ತ್ರೀಲಿಂಗದ ಬಹುವಚನದೊಳಂ ಪಿರಿದು ಮೆಂಬುದಱಿಂ ಕನ್ನಡದ ಪುಂಸ್ತ್ರೀಲಿಂಗದೊಳಂ ಚತುರ್ಥಿಗೆ ದ್ವಿತ್ವವಿಕಲ್ಪಂ.

ಪ್ರಯೋಗಂ.—ಸಂಸ್ಕೃತಕ್ಕೆ—ಬುಧರ್ಗೆ, ಬುಧರ್ಗ್ಗೆ; ಬಾಂಧವರ್ಗೆ ಬಾಂಧವರ್ಗ್ಗೆ; ಕಾಂತೆಯರ್ಗೆ, ಕಾಂತೆಯರ್ಗ್ಗೆ; ಸ್ತ್ರೀಯರ್ಗೆ, ಸ್ತ್ರೀಯರ್ಗ್ಗೆ.

ಕನ್ನಡಕ್ಕೆ—ಎರೆವರ್ಗೆ, ಎರೆವರ್ಗ್ಗೆ; ಸೂಳೆಯರ್ಗೆ, ಸೂಳೆಯರ್ಗ್ಗೆ.

ಸೂತ್ರಂ || ಅತ್ತಣಿನೆಂದು ನಿಮಿರ್ಚುವ ।
ರತ್ತೆಂದಾಗಿರ್ದ ಪಂಚಮಿಯನಲ್ಲಿ ಕೆಲರ್ ॥
ಪತ್ತಿಸುವರ್ ಮೂದೆಱನಂ ।
ಪೆತ್ತ ತೃತೀಯೆಯನೆಕಾರಮುಂ ಪರಿಹರಿಪರ್ ॥ ೧೧೬ ॥

ವೃತ್ತಿ.—ಅತ್ ಎಂಬ ಪಂಚಮಿಯನತ್ತಣಿನೆಂದು ಪೇೞಲಕ್ಕುಂ; ಆ ಪಂಚಮಿಯೊಳ್ ಇಂ, ಇಂದಂ, ಇಂದೆ ಎಂಬ ತೃತೀಯೆಯ ಮೂಱು ರೂಪಮುಂ ಕೆಲಂಬರ್ ಪತ್ತಿಸುವರ್; ಆ ಮೂದೆಱಕ್ಕಾದೇಶಮಾದೆಕಾರಮುಂ ಬಿಡುವರ್.

ಪ್ರಯೋಗಂ.—ಪಂಚಮಿಯ ನಿಜರೂಪಕ್ಕೆ—ಆಳ್ದನತ್ತಣಿಂ ದಟಿದುಟಿ ಮಾಯ್ತುರವಣಂ. ಆತನತ್ತಣಿಂ.

ತ್ರಿತಯರೂಪಕ್ಕೆ— ಕೆಱೆಯತ್ತಣಿಂ, ಕೆಱೆಯತ್ತಣಿಂದಂ, ಕೆಱೆಯತ್ತ ಣಿಂದೆ. 'ಕೆಱೆಯತ್ತಣೆ' ಎನಲಾಗದು.

ಮತ್ತಹಸ್ತಿಗಳ ಮಸ್ತಕದಿಂ ಬಿದಿರಿಂ ಫಣೀಂದ್ರೋತ್ತಮಾಂಗದಿನಗು ರ್ವಿಪ ಪಂದಿಯ ಕೋಟ್ಟಿಳಿಂ ಮುತ್ತೊಕ್ಕುವು. ಆಲಿವರಲ್ಗಳುಮಿಂದ್ರಗೋಪ ಮುಂ ಸೂಸಿದುವಭ್ರದಿಂ. ತಿಳಿಗೊಳದಿಂದೆ ಪಾಱಿದುವು ಹಂಸಕುಳಂ.

---

ಟೀಕೆ.—ಅತ್ತೆಂದು=ಅತ್ ಎಂದು, ಆಗಿರ್ದ ಪಂಚಮಿಯಂ=ಆಗಿರ್ದ ಪಂಚಮೀ ವಿಭಕ್ತಿಯಂ, ಅತ್ತಣಿಂ=ಅತ್ತಣಿಂ ಎಂದು, ನಿಮಿರ್ಚುವರ್=ನಿರ್ಮಿಸುವರ್; ಅಲ್ಲಿ=ಅತ್ ಎಂಬ ರೂಪಿನಲ್ಲಿ, ಕೆಲರ್=ಕೆಲಂಬರ್, ಮೂದೆಱನಂ=ಇಂ, ಇಂದಂ, ಇಂದೆ ಎಂಬ ಮೂಱು ಪ್ರಕಾರವಂ, ಪೆತ್ತ=ಪಡೆದ, ತೃತೀಯೆಯಂ=ತೃತೀಯಾ ವಿಭಕ್ತಿಯ ರೂಪಂ, ಪತ್ತಿಸುವರ್=ಪೊರ್ದುಗೆಯುಂ ಮಾಡುವರ್; ಎಕಾರಮುಂ= ಉಚಿತವಾಗಿ ಬಂದ ಎಕಾರಮುಂ, ಪರಿಹರಿಪರ್=ಬಿಡುವರ್. ॥ ೧೧೬ ॥

**ಸೂತ್ರಂ** ॥ ಆದರಿಪರ್ ಕೆಲಬರ್ ದೀ।
ರ್ಘಾದೇಶಮನಗ್ರದಲ್ಲಿ ಷಷ್ಠಿಯಕಾರ ॥
ಕ್ಕಾ ದೀರ್ಘಮನಿರದರೆಬರ್ ।
ಖೇದದ ಸಂಭ್ರಮದ ಮೆಯ್ಯೊಳುತ್ಪಾದಿಸುವರ್ ॥ ೧೧೭ ॥

**ವೃತ್ತಿ.**—ಅ ಎಂಬ ಷಷ್ಠಿಯಕಾರಕ್ಕೆ ಕೆಲಬರ್ ದೀರ್ಘಾದೇಶಮನೊಡಂಬಡುವರ್; ಆ ದೀರ್ಘಮಂ ಕೆಲರ್ ಖೇದದೊಳಂ ಸಂಭ್ರಮದೊಳಂ ಪ್ರಯೋಗಿಪರ್.

**ಪ್ರಯೋಗಂ.**—ಷಷ್ಠಿಯ ದೀರ್ಘಾದೇಶಕ್ಕೆ—ನೃಡನಾ ಗಂಗಾಂಬುಧಾರಾ ಜಟಲಿತ ಜಟನಾ. ಕಾಲಾಗ್ನಿರುದ್ರನೆನಿಸಿದುದು ತೋಳ ಬಾಳ್ ತೈಲಪನಾ. ದೊರೆಯೆನಿಸಿತ್ತು ಭಾರತಕೆ ಗೆಲ್ದ ರಣಂ ಕುವರಾಂಕರಾಮನಾ.

ಖೇದಕ್ಕೆ—ಅಕ್ಕಟಾ! ಮರುಳ್ದುಂಬಿಗಳೇಕೆ ಸಂಪಗೆಗಳೊಳ್ ಪಗೆಗೊಂಡುವೊ ನಿರ್ನಿಮಿತ್ತದಿಂ.

ಸಂಭ್ರಮಕ್ಕೆ—ಬೇಡ ಗಡಾ ಬೇಡ ಗಡಾ ನಿನಗಾತನೊಳ್ ಛಲಂ.

ವಿಧಿಯೊಳಮುಂಟು—ಸತ್ಯಮಂ ನುಡಿ ಗಡಾ ನೀನಾತನೊಳ್.

**ಸೂತ್ರಂ** ॥ ಅವಿಶೇಷದಿನಾ ದೀರ್ಘ ।
ವ್ಯವಹೃತಿ ಶಬ್ದಾಂತರಾಳದೊಳ್ ಪಕ್ಷದಿನು ॥
ದ್ಭವಿಕುಂ ದ್ವಿತೀಯೆಗಂ ಮುಂ ।
ದವತರಿಸಲೊಡಂ ಸ್ವರ ಪ್ರಪೂರ್ವ ಪದಂಗಳ್ ॥ ೧೧೮ ॥

---

**ಟೀಕೆ.**—ಕೆಲಬರ್, ಷಷ್ಠಿಯ = ಷಷ್ಠೀವಿಭಕ್ತಿಯ, ಅಕಾರಕ್ಕೆ = ಅತ್ವಕ್ಕೆ, ಅಗ್ರದಲ್ಲಿ=ತುದಿಯಲ್ಲಿ, ದೀರ್ಘಾದೇಶಮಂ=ದೀರ್ಘದ ಆದೇಶಮಂ, ಆದರಿಪರ್=ಪೇಳ್ವರ್; ಆ ದೀರ್ಘಮಂ, ಇರದೆ=ನಿಲ್ಲದೆ, ಅರೆಬರ್=ಕೆಲಂಬರ್, ಖೇದದ=ದುಃಖದ, ಸಂಭ್ರಮದ, ಮೆಯ್ಯೊಳ್=ಸ್ವರೂಪದಲ್ಲಿ, ಉತ್ಪಾದಿಸುವರ್=ಪ್ರತಿಪಾದಿಸುವರ್. ॥ ೧೧೭ ॥

**ಟೀಕೆ.**—ಅವಿಶೇಷದಿಂ=ಸಾಮಾನ್ಯದಿಂದೆ, ಆ ದೀರ್ಘವ್ಯವಹೃತಿ=ಆ ದೀರ್ಘ ವ್ಯವಹಾರಂ, ಶಬ್ದ=ಶಬ್ದದ, ಅಂತರಾಳದೊಳ್=ಮಧ್ಯದಲ್ಲಿ, ಪಕ್ಷದಿಂ=ಕೆಲಂಬರ ಪಕ್ಷದಿಂದೆ, ಉದ್ಭವಿಕುಂ=ಹುಟ್ಟುವುದು; ದ್ವಿತೀಯೆಗಂ=ದ್ವಿತಿಯಾ ವಿಭಕ್ತಿಗೆಯುಂ, ಮುಂದೆ=ಮುಂದಣಗಡೆಯಲ್ಲಿ, ಸ್ವರ= ಸ್ವರಂಗಳ್, ಪ್ರಪೂರ್ವ= ಆದಿಯಾದ, ಪದಂಗಳ್, ಅವತರಿಸಲೊಡಂ=ಹುಟ್ಟಲೊಡನೆ, ಆ ದೀರ್ಘವ್ಯವಹೃತಿ ಹುಟ್ಟುವುದು. ॥೧೧೮॥

**ವೃತ್ತಿ.**—ಆ ದೀರ್ಘಂ ಶಬ್ದಾಂತರಾಳದೊಳಂ ದ್ವಿತೀಯಾವಿಭಕ್ತಿಗೆ ಸ್ವರಂ ಪರಮಾಗೆಯುಂ ವಿಕಲ್ಪದಿನಕ್ಕುಂ.

**ಪ್ರಯೋಗಂ.**—ಶಬ್ದಾಂತರಾಳಕ್ಕೆ—ಇಂದೊಳಂ, ಇಂದೋಳಂ; ಆರೊಗಿಸಿದಂ, ಆರೋಗಿಸಿದಂ; ಎಣೆಗೊಣಂ, ಎಣೆಗೋಣಂ; ಗೆಯುಂಗಂ, ಗೆಯೂಂಗಂ. ಗೆಯುಂಗಕ್ಕೆ ತಾನೆ ಸೋಲ್ವ ವೆಳಱು (ನೆಟ್ಟು) ಪೊಜಂಗಂ.

ದ್ವಿತೀಯೆಗೆ—ಕಲ್ಲನೇಱಿದಂ, ಕಲ್ಲಾನೇಱಿದಂ.

ವಂಶಸ್ಥಂ ॥ ಎನಿತ್ತನಿತ್ತುಂಬುಜಪತ್ರ ನೇತ್ರೆಯಾ ।
ಘನಸ್ತನಂಗಳ್ ಬಳೆಗುಂ ಕಿರಾತೆಯಾ ॥
ಅನಿತ್ತನಿತ್ತುಂ ವನದೊಳ್ ವನೇಚರಂ ।
ತನತ್ತು ಬಿಲ್ಲಾನದನಂತೆ ಕೀಸುವಂ ॥

ಪೋಲ್ ಪರಮಾದಲ್ಲಿಯುಂ ದೀರ್ಘಮುಂಟು—ಈಂದ ಪುಲಿಯಾ ಪೋಲಿರ್ದಳೆಂದು (ನೊಂದ ಪುಲ್ಲಿಯಾಪೋಲ್ ಒಟಿರ್ದನೆಂದು).

ಗುಣವರ್ಮನ ಹರಿವಂಶ ಪ್ರಯೋಗಂ.

**ಸೂತ್ರಂ** ॥ ಅಲ್ಲಿಯೊಳೆಂಬಿವು ಮಿಕ್ಕೆಡೆ ।
ಗೆಲ್ಲಂ ದಿಗ್ವಾಚಿಯಪ್ಪದಂತಕ್ಕಲ್ಲು ॥
ತ್ತಲ್ಲಿಯುದಂತಕ್ಕೆತ್ವಂ ।
ಬಲ್ಲರ ಮತದಿಂ ವಿಕಲ್ಪವಿಧಿ ಸಪ್ತಮಿಯೊಳ್ ॥ ೧೧೯ ॥

**ವೃತ್ತಿ.**—ಅಲ್ಲಿ ಎಂದುಂ ಒಳ್ ಎಂದುಂ ಸಪ್ತಮಿಗೆ ಸಾಮಾನ್ಯದಿನಕ್ಕುಂ; ದಿಗ್ವಾಚಿಯಪ್ಪಕಾರಾಂತದ ಮೇಲೆ ವಿಕಲ್ಪದಿಂದಲ್ ಅಕ್ಕುಂ; ಉಕಾರಾಂತ ದಿಗ್ವಾಚಕಂಗಳ್ಗೆತ್ವಮಕ್ಕುಂ.

---

**ಟೀಕೆ.**—ಸಪ್ತಮಿಯೊಳ್=ಒಳ್ ಎಂದಾಗಿರ್ದ ಸಪ್ತಮೀವಿಭಕ್ತಿಯಲ್ಲಿ, ದಿಗ್ವಾಚಿಯಪ್ಪದಂತಕ್ಕೆ= ದಿಗ್ವಾಚಿಗಳಾದ ಅಕಾರಾಂತಕ್ಕೆ, ಅಲ್=ಅಲ್ ಎಂದಾಗುವುದು; ಮತ್ತೆ=ಬಳಿಕಂ, ಅಲ್ಲಿ=ಆದಿಗ್ವಾಚಕಂಗಳಲ್ಲಿ, ಉದಂತಕ್ಕೆ=ಉಕಾರಾಂತಕ್ಕೆ, ಎತ್ವಂ= ಹ್ರಸ್ವದ ಎಕಾರವಾಗುವುದು; ಬಲ್ಲರ ಮತದಿಂ=ಬಲ್ಲವರ ಮತದಿಂದೆ, ವಿಕಲ್ಪವಿಧಿ= ವಿಕಲ್ಪವಿಧಿಯಾಗುವುದು; ಮಿಕ್ಕೆಡೆಗೆ=ದಿಗ್ವಾಚಕಂಗಳಲ್ಲದುಟಿದೆಡೆಗೆ, ಎಲ್ಲಂ=ಎಲ್ಲವುಂ, ಅಲ್ಲಿ=ಅಲ್ಲಿ ಎಂದು, ಒಳ್=ಒಳೆಂದು, ಎಂಬಿವು=ಎಂಬೀ ಎರಡು ರೂಪುಗಳ್ ಸಾಮಾನ್ಯದಿಂದೆಯಾಗುವುವು. ॥ ೧೧೯ ॥

ಪ್ರಯೋಗಂ.—ಒಳ್ ಅಲ್ಲಿ ಎಂಬವರ್ಕೆ—ಕೊಳದೊಳ್, ಬನದೊಳ್; ಕೊಳದಲ್ಲಿ, ಬನದಲ್ಲಿ; ಸಭೆಯೊಳ್, ಸಭೆಯಲ್ಲಿ. ಸಭೆಯೊಳ್ ನುಡಿದಂ ನವ ಮೇಘನಾದದಿಂ.

ಅಲ್ಲಿ ಇಲ್ಲಿ ಎಲ್ಲಿ ಉಲ್ಲಿ ಎಂದು ಸ್ಥಳವಿಶೇಷದೊಳವಿಾ ಶಬ್ದಮೊಳವು—ಸಿರಿ ನೆಲೆಗೊಂಡುದಲ್ಲಿ, ಮದನಂ ಮನೆಗಟ್ಟಿದನಲ್ಲಿ, ಅಲ್ಲಿಯ ಪೆಂಡಿರನಗ್ನಿ ಸುತ್ತಿದಂ.

ಪ್ರಥಮೆಗಂ ಸಪ್ತಮಿಗಂ ಅಲ್ ಎಂದೇಕರೂಪಮಕ್ಕುಂ.

ಅದಂತದ ವಿಕಲ್ಪದಲ್ಗೆ—ಪಡುವ, ಮೂಡ, ತೆಂಕ, ಬಡಗ, ಅತ್ತ, ಇತ್ತ, ಉತ್ತ, ಎತ್ತ; ಮೂಡಲ್, ಪಡುವಲ್, ತೆಂಕಲ್, ಬಡಗಲ್, ಅತ್ತಲ್, ಇತ್ತಲ್, ಉತ್ತಲ್, ಎತ್ತಲ್.

ಉತ್ಸಾಹಂ॥ ಪಡುವ ಮೂಡ ತೆಂಕ ಬಡಗ ಪೊಡವಿಪತಿಗಳಿಲ್ಲಿನಲ್ ।
ನಡೆದು ಗೆಲ್ದು... .............................. ॥

ಎತ್ತಿದ ಕಯ್ಯೊಳ್ ಮುತ್ತಿದನತ್ತಿತ್ತುತ್ತೆತ್ತ ಸಾರ್ವರಿನ್ನಹಿತರ್ಕಳ್. ಮೂಡಲಿರ್ದ ಪದದೊಳ್ ತಾರಾಮನೋವಲ್ಲಭಂ.

ಕಂ ॥ ಅತ್ತಲ್ ದೇವೇಂದ್ರಂ ಮ ।
ತ್ತಿತ್ತಲ್ ಭುಜಗೇಂದ್ರನುತ್ತಲಾಶಾಧಿಪರೊಳ್ ॥
ಮುತ್ತಿರೆ ಭೇರೀಧ್ವನಿ ಪ ।
ರ್ವಿತ್ತೆತ್ತಲುಮಶನಿ ಘೋಷ ಶಿಕ್ಷಾದಕ್ಷಂ ॥

ಉದಂತಕ್ಕೆತ್ವವಿಕಲ್ಪಂ—ಒಳಗು, ಒಳಗೆ; ಪೊಱಗು, ಪೊಱಗೆ; ಪೆಱಗು, ಪೆಱಗೆ; ಮೇಗು, ಮೇಗೆ: ಕೆಳಗು, ಕೆಳಗೆ.

ಕಂ ॥ ಕಪಿ ಪೊಱಗಿರೆ ಕೀಳೊಳಗಿರೆ ।
ಯವಿರಳಮಾ ತುರಗಮುಖಮೊ ನೃಪಮಂದಿರಮೋ ॥

ನಡುವೆಯೆಂಬಲ್ಲಿ ನಾಮಮುಱಿದಪ್ಪುದಾಗಿ ವತ್ವಂ ಪೊಕ್ಕುದು.

ಸೂತ್ರಂ ॥ ಸವನಿಪುದು ಮುಂದು ಪಿಂದೆಂ ।
ಬಿವಱಿಂತ್ಯಕ್ಕುಱಿ ವಿಕಲ್ಪದಿಂದೆ ತುಕಾರಂ ॥
ವ್ಯವಹರಿಪುದೆತ್ವವಿಧಿ ಬ ।
ಲ್ಲವರಿಂ ಮೇಲೆಂದು ಪೇಳ್ವ ಬೀಟಿಕ್ಕುರಕಂ ॥ ೧೨೦ ॥

**ವೃತ್ತಿ.**—ಮುಂದು ಪಿಂದೆಂಬಿವಱಂತ್ಯಕ್ಕೆ ವಿಕಲ್ಪದಿಂ ತುಕಾರಾದೇಶವಾಗಿ ಪಿಂದಣಂತೆತ್ವಮಕ್ಕುಂ. ಮೇಲ್ ಎಂಬ ವ್ಯಂಜನಾಂತಕ್ಕಮೆತ್ವಮಕ್ಕುಂ.

**ಪ್ರಯೋಗಂ.**—ತುಕಾರಕ್ಕೆ—ಮುಂದು, ಮುಂತು; ಪಿಂದು, ಪಿಂತು; ಮುಂದೆ, ಮುಂತೆ; ಪಿಂದೆ, ಪಿಂತೆ.

ಮೇಲೆಂಬುದರ್ಕೆ—ಆನೆಯ ಮೇಲೆಯುಂ ಆಳ ಮೇಲೆಯುಂ ಕುದುರೆಯ ಮೇಲೆಯುಂ ಪರಿದುದೊಂದೆ ಗಜಂ ಭುವನೈಕರಾಮನಾ.

**ಸೂತ್ರಂ ॥** ಮೊದಲೆರಡು ವಿಭಕ್ತಿಯೊಳಂ ।
ಪೊದಟ್ಗುಮಲ್ ಕಾಲವಾಚಿಯಂದಿಂದುಂದೆಂ ॥
ಬುದುಮೇಕರೂಪಮಾಗಿ ।
ಪೊರ್ದು ಮೊದಲೆರಡುಂ ವಿಭಕ್ತಿಗಂ ಸಪ್ತಮಿಗಂ ॥ ೧೨೧ ॥

**ವೃತ್ತಿ.**—[1]ಸಪ್ತಮಿಗೆ ಬಂದ ಅಲ್ ಎಂಬುದು ಪ್ರಥಮೆಗಂ ದ್ವಿತೀಯೆಗಂ ಪತ್ತುಗುಂ; ಕಾಲವಾಚಕಂಗಳಪ್ಪ ಅಂದು ಇಂದು ಉಂದು ಎಂದು—ಎಂಬ ಶಬ್ದಂಗಳಲುವಿನಂತೆ ಪ್ರಥಮೆಗಂ ದ್ವಿತೀಯೆಗಂ ಸಪ್ತಮಿಗಂ ಸರಿ.

**ಪ್ರಯೋಗಂ.**—ಪ್ರಥಮೆ ದ್ವಿತೀಯೆ ಸಪ್ತಮಿಗಳಲುವಿಂಗೆ—ಮೂಡಲ್, ಮೂಡಲ್, ಮೂಡಣಿಂ, ಮೂಡಣ್ಗೆ, ಮೂಡಣತ್ತಣಿಂ, ಮೂಡಣ, ಮೂಡಲ್.

ಅಂದು ಮೊದಲಾದುವರ್ಕೆ—ಅಂದು, ಅಂದು, ಅಂದಿಂ, ಅಂದಿಂಗೆ, ಅಂದಿನತ್ತಣಿಂ, ಅಂದಿನ, ಅಂದು. ಉೞಿದುವರ್ಕಂ ಈ ಪರಿ.

................................................................................

**ಟೀಕೆ.**—ಮುಂದು=ಮುಂದು ಎಂದು, ಪಿಂದು=ಪಿಂದು ಎಂದು, ಎಂಬಿವಱ= ಎಂಬೀ ಶಬ್ದಂಗಳ, ಅಂತ್ಯಕ್ಕೆ ತುದಿಯ ದುಕಾರಕ್ಕೆ, ವಿಕಲ್ಪದಿಂದೆ, ತುಕಾರಂ= ತುತ್ವಂ, ಸವನಿಪುದು=ಬರ್ಪುದು; ಅಱಿ=ತಿಳಿ; ಮೇಲೆಂದು ಪೇೞ್ವ ಬೀೞಿಕ್ಕರಕಂ= ಮೇಲ್ ಎಂದು ಪೇೞ್ವ ವ್ಯಂಜನಾಕ್ಷರಕ್ಕೆಯುಂ, ಎತ್ವವಿಧಿ=ಎಕಾರದ ವಿಧಿ, ಬಲ್ಲ ವರಿಂ=ವಿದ್ವಾಂಸರಿಂದೆ, ವ್ಯವಹರಿಪುದು=ವ್ಯವಹರಿಸುವುದು. ॥ ೧೨೦ ॥

**ಟೀಕೆ.**—ಅಲ್=ಸಪ್ತಮಿಗೆ ಬಂದ ಅಲ್ ಎಂಬುದು, ಮೊದಲ=ಆದಿಯ, ಎರಡು ವಿಭಕ್ತಿಯೊಳಂ=ಪ್ರಥಮೆ ದ್ವಿತೀಯೆ ಎಂಬೆರಡು ವಿಭಕ್ತಿಯೊಳಂ, ಪೊದಟ್ಗುಂ= ಪೊರ್ದುಗೆಯಪ್ಪುದು; ಕಾಲವಾಚಿಯ = ಕಾಲವಾಚಿಶಬ್ದದ, ಅಂದು= ಅಂದೆಂದು, ಇಂದು=ಇಂದೆಂದು, ಉಂದು=ಉಂದೆಂದು, ಎಂಬುದುಂ=ಎಂಬ ರೂಪಂ, ಮೊದ ಲೆರಡುಂ ವಿಭಕ್ತಿಗಂ= ಆದಿಯ ಎರಡು ವಿಭಕ್ತಿಗೆಯುಂ, ಸಪ್ತಮಿಗಂ= ಸಪ್ತಮೀ ವಿಭಕ್ತಿಗೆಯುಂ, ಏಕರೂಪಂ=ಒಂದೆ ರೂಪಂ, ಆಗಿಪೊರ್ದುದು. ॥ ೧೨೧ ॥

---

1 ದಿಗ್ವಾಚಕಂಗಳಲ್ಲಿ, ಎಂಬುದನುವೃತ್ತಿ.

* ಸೂತ್ರಂ ॥ ಪುದಿಗುಮದಂತಕೆ ಪುಲ್ಲಿಂ ।
ಗದವೋಲ್ ಕಿಱಿವೆಡೆಗಳಲ್ಲಿಯೆಲ್ಲಂ ಸ್ತ್ರೀಲಿಂ ॥
ಗದೊಳಂ ಪುಂನಪ್ಸಿನೊಳಂ ।
ಪುದಿಗುಂ ತಿಳಿ ಬಹುಳಮಾದುದಾಹರಣೆಗಳಿಂ ॥ * ॥

ವೃತ್ತಿ.— ಸ್ತ್ರೀಲಿಂಗದೊಳಂ ಕಿಱಿದೆಡೆಗಳಲ್ಲಿ ಅಕಾರಾಂತಕ್ಕೆ ಪುಲ್ಲಿಂಗ ದಂತೆ ಸಪ್ತವಿಭಕ್ತಿಗಳೆಲ್ಲಂ ಪತ್ತುಗುಂ; ಪುಂನಪುಂಸಕ ಲಿಂಗದಲ್ಲಿಯುಂ ಕಿಱಿದು ಶಬ್ದಂಗಳಲ್ಲಿ, ಅಕಾರಾಂತ ಪುಲ್ಲಿಂಗದಂತಿರೆ ಸಪ್ತವಿಭಕ್ತಿಗಳೆಲ್ಲಂ ಪುದಿಗುಂ. ಇವಂ ಬಹುಳಮಾದುದಾಹರಣೆಗಳಿಂ ತಿಳಿವುದು.

ಪ್ರಯೋಗಂ.— ಅದಂತ ಸ್ತ್ರೀಲಿಂಗಕ್ಕೆ— ಅಕ್ಕಂ, ಅಕ್ಕನಂ, ಅಕ್ಕನಿಂ, ಅಕ್ಕಂಗೆ, ಅಕ್ಕನತ್ತಣಿಂ, ಅಕ್ಕನ, ಅಕ್ಕನೊಳ್. ಅವ್ವಂ, ಅಮ್ಮಂ ಎಂಬಿವರ್ಕ ಮಿಂತಱಿವುದು.

ಅಕಾರಾಂತಮಾದ ಪುಂನಪುಂಸಕಕ್ಕೆ—ಹರಿಣಂ, ಹರಿಣನಂ, ಹರಿಣನಿಂ, ಹರಿಣಂಗೆ, ಹರಿಣನತ್ತಣಿಂ, ಹರಿಣನ, ಹರಿಣನೊಳ್. ಕೋಣಂ, ಹಂಗಂ, ಹಸುಬಂ, ಸರ್ಪಂ, ಗರುಡಂ, ಕೂರ್ಮಂ, ಕಮಠಂ, ವೃಷಭಂ, ಬಸವಂ —ಎಂಬಿವಾದಿಯಾದುವರ್ಕಮಿಂತಱಿವುದು.

ಕಿಱಿದೆಡೆಗಳಲ್ಲಿ ಎಂಬುದಱಿಂ ಭೃಂಗ, ತುರಂಗ, ಹಯ, ಗಜ ಮೊದ ಲಾದ ಶಬ್ದಂಗಳ್ಗೆ ನಪುಂಸಕರೂಪಮೆ ಘತ್ತುಗುಂ—ಭೃಂಗದಿಂ, ತುರಂಗಕ್ಕೆ, ಹಯದತ್ತಣಿಂ, ಗಜದ—ಎಂಬಂತಱಿವುದು.

ವರಾಹ ಶಬ್ದದೊಳ್ ವಿಕಲ್ಪಂ—ವರಾಹದಿಂ, ವರಾಹನಿಂ; ವರಾಹಂಗೆ, ವರಾಹಕ್ಕೆ—ಎಂಬಂತೆ.

.................................................................

ಟೀಕೆ.—ಸ್ತ್ರೀಲಿಂಗದೊಳಂ=ಸ್ತ್ರೀಲಿಂಗದಲ್ಲಿಯುಂ, ಕಿಱಿದೆಡೆಗಳಲ್ಲಿ=ಕಿಱಿದು ತಾಣಂಗಳಲ್ಲಿ, ಅದಂತಕೆ=ಅಕಾರಾಂತಕ್ಕೆ, ಪುಲ್ಲಿಂಗದವೋಲ್=ಅಕಾರಾಂತ ಪುಲ್ಲಿಂಗದ ಹಾಗೆ, ಎಲ್ಲಂ=ಸಪ್ತವಿಭಕ್ತಿಗಳಾಗಮಂಗಳೆಲ್ಲಂ, ಪುದಿಗುಂ=ಪ್ರವೇಶವಾಗುವುದು; ಪುಂನಪ್ಸಿನೊಳಂ=ಪುಂನಪುಂಸಕ ಲಿಂಗದಲ್ಲಿಯುಂ ಕಿಱಿದು ತಾಣಂಗಳಲ್ಲಿ ಅಕಾರಾಂತ ಪುಲ್ಲಿಂಗದ ಹಾಗೆ, ಸಪ್ತ ವಿಭಕ್ತಿಗಳೆಲ್ಲಂ, ಪುದಿಗುಂ = ಪೊರ್ದುಗೆಯಾಗುವುದು; ಬಹುಳಮಾದುದಾಹರಣೆಗಳಿಂದೆ, ತಿಳಿ=ಅಱಿ. ॥ * ॥

---

* ಈ ಸೂತ್ರ ವೃತ್ತಿ ಪ್ರಯೋಗಂಗಳ್ ಕ. ಖ. ಪ್ರತಿಗಳಲ್ಲಿ ಕಾಣಬರುವುದಿಲ್ಲ. ಗ. ಪುಸ್ತಕದಲ್ಲಿಮಾತ್ರವಿದೆ.

ಹೆಣ್ಣಾದೊಡಂ ಗಂಡಾದೊಡಂ ಹಂಗಂ ಹಸುಬಂ ಸರ್ಪನೆಂಬಿವಾದಿ ಯಾದುವರ್ಕೆ ಪುಲ್ಲಿಂಗದಂತೆ ರೂಪು ಪತ್ತುಗುಂ—ಹಂಗನಂ, ಹಸುಬನಿಂ, ಸರ್ಪಂಗೆ, ಗರುಡನತ್ತಣಿಂ—ಎಂಬಂತಱಿವುದು.

**ಸೂತ್ರಂ ॥** ಅಮುಮೆಂದುಸಿರ್ವ ಸಮುಚ್ಚಯ।
ದುಮುವಿಧಿ ನಿರುತಂ ದ್ವಿತೀಯೆಯೊಳಪೊಕ್ಕಿರ್ಕುಂ ॥
ಸಮನಿಸವೆಂದುಂ ಷಷ್ಠಿಯೊ।
ಳಮುಮವು ಮಿಕ್ಕಿನ ವಿಭಕ್ತಿಗಳ ಮೇಲಿರ್ಕುಂ ॥ ೧೨೨ ॥

**ವೃತ್ತಿ.**—ಅಮ್ ಉಮ್ ಎಂದು ಪೇಲ್ವ ಸಮುಚ್ಚಯದ ಉಮ್ ಎಂಬುದು [1]ದ್ವಿತೀಯೆಯ ನಡುವೆ ಪೊಕ್ಕಿರ್ಕುಂ; ಷಷ್ಠಿಯೊಳ್ ಸಮುಚ್ಚಯಂ ಸತ್ತದು; ಅಮ್ ಉಂಗಳ್ ಮಿಕ್ಕ ವಿಭಕ್ತಿಗಳ ಮೇಲೆಯನುರೂಪಮಾಗಿ ಪತ್ತುಗುಂ.

**ಪ್ರಯೋಗಂ.**— ದ್ವಿತೀಯೆಯೊಳಗಣ ಅಮುವಿಂಗೆ — ಅವರುಮಂ ಅಂತಕನೊರ್ಮೆಯೆ ಸವಿನೋಡಲ್; ಒಂದೆಡೆಯೊಳ್ ಕಟ್ಟುವುದೆ ಪುಲಿಯುಮಂ ಕವಿಲೆಯುಮಂ.

ಮಿಕ್ಕ ವಿಭಕ್ತಿಗಳ ಮೇಲಣ ಸಮುಚ್ಚಯಕ್ಕೆ—ನರನುಂ, ನರನಂದನನುಂ, ಗುರುವುಂ; ಕಾಲಿಂದೆಯುಂ ಕಯ್ಯಿಂದೆಯುಂ ಘಟ್ಟಿಸಿದಂ.

ಚತುರ್ಥಿಯೊಳೆರಡುಂ ಪತ್ತುಗುಂ—ದ್ರೋಣಂಗಂ ನಿನಗಂ ಬಿಲ್ಲಾಣಿಕೆ ಯೞು ಸಕ್ಕಸಮನೆ; ವಂಚಿಸುವುದವಂಗೆಯುಂ ನಿನಗೆಯುಂ ಸಹಜಂ ಬಿಡಿಸಲ್ಕೆ ಬರ್ಕುಮೇ; ಜಾದಿಯತ್ತಣಿಂದೆಯುಂ ಕೇದಗೆಯತ್ತಣಿಂದೆಯುಂ ಕಂಪು ಬಂದುದು.

ಸಪ್ತಮಿಗೆ ಅಮ್ ಪತ್ತುವುದು—ಚಲದೊಳಂ ಆಚಾರದೊಳಂ ಕಲಿತನ ದೊಳಂ.

**ಟೀಕೆ.**—ಅಮ್ ಎಂದು, ಉಮ್ ಎಂದು, ಉಸಿರ್ವ=ಪೇಳ್ವ, ಸಮುಚ್ಚಯದ=ಸಮುಚ್ಚಯಾರ್ಥದ, ಉಮುವಿಧಿ=ಉಂಕಾರವಿಧಿ, ನಿರುತಂ=ನಿಯತವಾಗಿ, ದ್ವಿತೀಯೆಯ=ದ್ವಿತೀಯಾವಿಭಕ್ತಿಯ, ಒಳಪೊಕ್ಕು=ಒಳಗಂ ಪೊಕ್ಕು, ಇರ್ಕುಂ= ಇರ್ಪುದು; ಷಷ್ಠಿಯೊಳ್=ಷಷ್ಠೀವಿಭಕ್ತಿಯಲ್ಲಿ, ಎಂದುಂ=ಆವಾಗಳುಂ, ಅಮ್ ಉಮ್ ಎಂಬ, ಅವು, ಸಮನಿಸವು=ಬರುವುದಿಲ್ಲ; ಮಿಕ್ಕಿನ=ಉೞಿದ, ವಿಭಕ್ತಿಗಳ= ಪ್ರತ್ಯಯಂಗಳ, ಮೇಲೆ=ಅಗ್ರದಲ್ಲಿ, ಇರ್ಕುಂ=(ಅನುರೂಪಮಾಗಿ) ಇರ್ಪುವು. ॥೧೨೨॥

1. ದ್ವಿತೀಯಾಂತಮಾದ ಪದದ ನಡುವೆ. ಕ. ಖ.

ಅಲ್ಲಿಯೆಂಬುದಱ ಮೇಲೆ ಉಂ ಪತ್ತುಗುಂ— ಅಲ್ಲಿಯುಂ ಇಲ್ಲಿಯುಂ ಎಲ್ಲಿಯುಂ ನರಂ.

**ಸೂತ್ರಂ** ॥ ಎಲ್ಲಿಯುಮಾಮಂತ್ರಣದೊಳ್ ।
ಬಲ್ಲರ್ ಪ್ರಥಮೈಕವಚನಮಂ ಲೋಪಿಸುವರ್ ॥
ನಿಲ್ಲದೆ ವಿಕಲ್ಪಮುಖದಿಂ ।
ಸೊಲ್ಲಿಸುವರ್ ಹ್ರಸ್ವ ದೀರ್ಘ ಕಾಕುಗಳೆರಡಂ ॥ ೧೩ ॥

**ವೃತ್ತಿ.**— ಆಮಂತ್ರಣದೊಳ್ [1] ಸ್ವರಾಂತಂಗಳ ಪ್ರಥಮೈಕವಚನಕ್ಕೆಲ್ಲಿಯುಂ ಲೋಪಂ, ಆ ಸಂಬುದ್ಧಿಯೊಳ್ ಹ್ರಸ್ವದೀರ್ಘಮೆಂಬೆರಡು ಕಾಕುಗಳಂ ವಿಕಲ್ಪದಿಂ ಪೇೞ್ವರ್.

**ಪ್ರಯೋಗಂ.**—ಆಮಂತ್ರಣಕ್ಕೆ — ದೇವ! ಬಿನ್ನಪಂ. ಬೆಸೆಯದಿರ್ ಕುಸುಮಾಯುಧ! ನಿನ್ನ ಬಲ್ಪು ಪೆಣ್ಮಕ್ಕಳೊಳಲ್ಲದಿಲ್ಲ. ಕೇಳ್ ಮಾಧವ!

ಹ್ರಸ್ವಕಾಕುವಿಂಗೆ—ಎಲೆ ಗಣಪ! ಎಂಬ ಮಾತು ಬಂದಪುದೀಗಳ್. ಎಲೆ ಎಲೆ ರಂಭೆ! ಊರ್ವಶಿ! ತಿಲೋತ್ತಮೆ! ಮೇನಕೆ! ಮಂಜುಘೋಷೆ!

ದೀರ್ಘಕಾಕುವಿಂಗೆ— ಸುಖಸಂಪದಮಂ ಮಾೞ್ಪುದೆನಗೆ ಪರಮ ಜಿನೇಂದ್ರಾ! ತಡೆವಂತೇಂ ಕಾರಣಂ ಕುರುಪತೀ! ಎಮಗೀಗಳ್ ?

**ಸೂತ್ರಂ** ॥ ಅವಿಶೇಷದಿಂದದಂತ ।
ಕ್ಕೆವರ್ಣಮೊದವುವುದೆವರ್ಣಮೊದವಿದದಂತ ॥
ಕ್ಕವತರಿಕುಂ ಬಿಂದುವಬಿಂ ।
ದುವಾಗಿ ಬಹುವಚನದರುವನಡರ್ವುದೆವರ್ಣಂ ॥ ೧೪ ॥

---

**ಟೀಕೆ.**— ಆಮಂತ್ರಣದೊಳ್ = ಸಂಬುದ್ಧಿಯಲ್ಲಿ, ಎಲ್ಲಿಯುಂ = ಆವೆಡೆಯಲ್ಲಿಯುಂ, ಬಲ್ಲರ್=ವಿದ್ವಾಂಸರ್, ಪ್ರಥಮೈಕವಚನಮಂ=ಪ್ರಥಮಾವಿಭಕ್ತಿಯ ಏಕವಚನಮಂ, ಲೋಪಿಸುವರ್=ಲೋಪಮಂ ಮಾಡುವರ್; ನಿಲ್ಲದೆ=ತಡೆಯದೆ, ವಿಕಲ್ಪಮುಖದಿಂ= ವಿಕಲ್ಪಮುಖದಿಂದೆ, ಹ್ರಸ್ವ ದೀರ್ಘ ಕಾಕುಗಳ್, ಎರಡಂ, ಸೊಲ್ಲಿಸುವರ್=ಪೇೞ್ವರ್.

**ಟೀಕೆ.**— ಇಲ್ಲಿ ಆಮಂತ್ರಣದೊಳ್ ಎಂಬುದನುವರ್ತನೆ-ಆಮಂತ್ರಣದೊಳ್= ಸಂಬುದ್ಧಿಯಲ್ಲಿ, ಅವಿಶೇಷದಿಂ= ಸಾಮಾನ್ಯವಾಗಿ, ಅದಂತಕ್ಕೆ=ಅಕಾರಾಂತಶಬ್ದಕ್ಕೆ,

---

1. ಸ್ವರಾಂತ ವ್ಯಂಜನಾಂತ ಲಿಂಗಂಗಳ ಪ್ರಥಮೈಕವಚನಕ್ಕೆ. ಕ. ಖ. ಗ.

ವೃತ್ತಿ.—ಲಿಂಗತ್ರಯಮೆನ್ನದೆ ವಚನತ್ರಯಮೆನ್ನದೆ ಸ್ವರಾಂತ ವ್ಯಂಜನಾಂತಂಗಳೆನ್ನದೆ ಸಾಮಾನ್ಯದಿಂ ಸಂಬೋಧನೆಯ ಕಡೆಯೊಳ್ ವಿಕಲ್ಪದಿಂ ಎ ಏ ಎಂಬಿವಕ್ಕುಂ; ಅಕಾರಾಂತದ ಮೇಲೆ ಎ ಏ ಎಂಬಿವು ಪರಮಾಗೆ ನಡುವೆ ಬಿಂದುವಕ್ಕುಂ; ಬಿಂದುವಿಲ್ಲದೆ ಬಹುವಚನದರುವಿನ ಮೇಲೆ ಎ ಏ ಎಂಬಿವಕ್ಕುಂ.

ಪ್ರಯೋಗಂ.—ಸ್ವರಾಂತ ವ್ಯಂಜನಾಂತಂಗಳ್ಗೆ— ಅಳಿಕುಳ ನೀಳಕುಂತಳೆಯೆ! ಕೋಕಿಲನಾದೆಯೆ! ಹಂಸಯಾನೆಯೆ!. ಮನುವೇ! ನಿನ್ನಯ ಮಾರ್ಗಂ ಜನಕ್ಕಂ ಸೂತ್ರಮಾಯ್ತು. ಎಳಮಾವೇ!. ತಳಿರುಯ್ಯಲೇ! ಎಲೆ ತಂಬೆಲರೇ!

ಬಿಂದುವಿಂಗೆ—ಚಂದ್ರನೆ! ಕೊಳನೆ! ನಂದನಮೇ! ಲತಾಭವನಮೇ!

ಅರುವಿನ ಮೇಲಣ ಎವರ್ಣಕ್ಕೆ— ಭಟ್ಟರೆ! ಬಂದಿರೇಂ ಮಂದೆಗೆ? ದೇವರೇ! ಕರುಣಿಸಿರೆ?

ಏಕವಚನದೊಳೆತ್ವಂ ವಿಕಲ್ಪಂ—ಎಲೆ ಅಭಿಮನ್ಯು! ಎಲೆ ಅಭಿಮನ್ಯುವೆ! ಅಭಿಮನ್ಯೂ! ಎಂದುಮುಂಟು. ಎಲೆ ತುಂಬಿ! ಎಲೆ ತುಂಬಿಯೆ!

ಸೂತ್ರಂ ‖ ಪಿರಿದುಂ ದ್ವಿತ್ವಬಹುತ್ವಂ ।
ಬರೆ ಗಳ್ಕಳ್ಗುಂಟಿರಾಗಮುಂ ಬಹುವಚನ ‖
ಸ್ಫುರಿತ ಕ್ರಿಯೆಗೇಕತೆ ನಿಜ ।
ಪರಿಣತಿ ಮೇಣ್ ಧಾತುಗೇಕವಚನದೊಳತ್ವಂ ‖ ೧೩೫ ‖

---

ಎವರ್ಣಂ=ಎ ಏ ಎಂಬ ಸವರ್ಣಂ, ಒದವುವುದು=ಬರ್ಪುದು; ಎವರ್ಣಂ=ಎ ಏ ಎಂಬ ಸವರ್ಣಂ, ಒದವಿದ=ಬಂದ, ಅದಂತಕ್ಕೆ=ಅಕಾರಾಂತಕ್ಕೆ, ಬಿಂದು=ಸೊನ್ನೆ, ಅವತರಿಕುಂ=ಹುಟ್ಟುವುದು; ಅಬಿಂದುವಾಗಿ=ಬಿಂದುವಿಲ್ಲದುದಾಗಿ, ಎವರ್ಣಂ=ಎ ಏ ಎಂಬ ಸವರ್ಣಂ, ಬಹುವಚನದ, ಅರ್ವಂ=ಅರಾಗಮುವಂ, ಅಡರ್ವುದು=ಪತ್ತುವುದು. ‖ ೧೩೪ ‖

ಟೀಕೆ.—ಇಲ್ಲಿ ಆಮಂತ್ರಣದೊಳ್ ಎಂಬುದು ಅನುವರ್ತನೆ— ಪಿರಿದುಂ=ವಿಶೇಷವಾಗಿ, ದ್ವಿತ್ವಬಹುತ್ವಂ=ದ್ವಿವಚನ ಬಹುವಚನಂಗಳ್, ಬರೆ, ಗಳ್ಕಳ್ಗೆ=ಗಳಾಗಮ ಕಳಾಗಮುಂಗಳ್ಗೆ, ಇರಾಗಮುಂ=ಇರ ಎಂಬಾಗಮುಂ, ಉಂಟು=ಉಂಟಾಗಿರ್ಪುದು; ಬಹುವಚನ=ಬಹುವಚನದಲ್ಲಿ, ಸ್ಫುರಿತ=ಪ್ರಕಾಶಿಸಲ್ಪಟ್ಟ, ಕ್ರಿಯೆಗೆ, ಏಕತೆ=ಏಕವಚನಂ ಉಂಟಾಗಿರ್ಪುದು; ಧಾತುಗೆ=ಧಾತುಗಳ್ಗೆ, ಏಕವಚನದೊಳ್=ಏಕವಚನದಲ್ಲಿ, ನಿಜಪರಿಣತಿ=ಇರ್ದಹಾಗೆ ಪರಿಣಮಿಸುವುದು ಉಂಟಾಗಿರ್ಪುದು; ಮೇಣ್=ವಿಕಲ್ಪದಿಂದೆ, ಅತ್ವಂ=ಅಕಾರಂ ಉಂಟಾಗಿರ್ಪುದು. ‖ ೧೩೫ ‖

ವೃತ್ತಿ.— ಆಮಂತ್ರಣದೊಳ್ ದ್ವಿವಚನ ಬಹುವಚನಂಗಳಾದ ಗಳ್ಗಂ ಕಳ್ಗಂ ಇರಾಗಮಮುಂಟು; ಪಿರಿದುಮೆಂಬುದಱಿಂದರುವಿನ ಮೇಲೆಯುಮುಂಟು. ಪಿರಿದುಮೆಂಬ ಪ್ರಚುರಗ್ರಹಣದಿಂ ಗಳ್ ಎಂಬುದಱ ಮೇಲೆ ಆ ಇರಾಗಮಂ ಕಿಱಿದೆಡೆಯೊಳ್ಕಾಣ್ಬುದು. ಬಹುವಚನಕ್ರಿಯೆಯೊಳೆ ಏಕವಚನಮುಂಟು. ನಿಜಧಾತುವೇಕವಚನದೊಳಿರ್ದಂತೆ ಸಲ್ಗುಂ. ವಿಕಲ್ಪದಿನಾ ಧಾತುವತ್ವಮಂ ಪಡೆಗುಂ.

ಪ್ರಯೋಗಂ.—ಗಳ್ಗೆ ಇರಾಗಮಂ–ಸುರತರುನಂದನಂಗಳಿರ! ದೆಸೆಗಳಿರ! ಮುಗಿಲ್ಗಳಿರ! ಸ್ತ್ರೀಪುರುಷವಾಚಕದೊಳಮದುವೆ.

ಕಳ್ಗೆ—ದೇವಿಯರ್ಕಳಿರ! ಬುಧರ್ಕಳಿರ! ನಿಮ್ಮ ಗುಣಸ್ತುತಿ ಕಾವ್ಯಮಾರ್ಗದೊಳ್.

ಅರ್ಗೆ—ನಂಟರಿರ! ನಲ್ಲರಿರ! ದೇವಿಯರಿರ!

ಕಿಱಿದೆಡೆಯೊಳಿಲ್ಲ— ಜಳಧಿ ದ್ವೀಪಾಂತರಾಳಂಗಳನಿರದೆ ಪುಗಿಂ ಪೋಗಿ ಮುಗ್ರಾರಿಗಳ್!

ಬಹುವಚನ ಕ್ರಿಯೆಯೊಳೇಕವಚನಕ್ಕೆ—ವಿಹಂಗಮಮಿಂದಿಂದೆ ಕಬ್ಬಿನಿನೇ ಟಿಪಿರ್. ದೇವಾಸುತಮಂ ಕೇಳಿರೆ ದೇವ! ಅಱಿಯಿರೆ ನೀಮುಮಾಮುಮೊಡ ನೋದಿದೆವೆಂಬುದನಣ್ಣ!

ನಿಜಧಾತುಗೆ— ಪಾಡೆಲೆ ತುಂಬಿ! ಬಗ್ಗಿಸೆಲೆ ಕೋಗಿಲೆ! ತೀಡೆಲೆಗಂಧವಾಹ!

ಧಾತುವಿನತ್ವಕ್ಕೆ—

ಉ॥ ಬಾರ ಮರಾಳಿಕಾಗಮನೆ ನೋಡ ಚಕೋರವಿಲೋಲನೇತ್ರೆ ನಿಂ।
ದಾರಯ ಪೀವರಸ್ತನ ನಿತಂಬ ಭರಾಲಸೆ ಕೇಳ ಕಾಮುಕಾ॥
ಳೋರಗ ಕೇಶಪಾಶೆ ಎನಗುತ್ತರಮಂ ಕುಡ ಚಾರುವೇಣು ವೀ।
ಣಾರವೆ ನೀನಾರ ಮುಗಳಿಲ್ಲಿಗೆ ಪೋದಪಯಾವುದಾಶ್ರಯಂ॥

ಸೂತ್ರಂ॥ ಅಭಿರೂಪದಿನಾ ಪ್ರಥಮಾ।
ವಿಭಕ್ತಿ ಲಿಂಗಾರ್ಥವಚನಸಂಬೋಧನದೊಳ್॥
ಪ್ರಭವಿಪ್ಪುದಾ ದ್ವಿತೀಯಾ।
ವಿಭಕ್ತಿ ಕರ್ಮದೊಳನಾಕುಳಂ ವರ್ತಿಸುಗುಂ ॥೧೨೬॥

**ವೃತ್ತಿ.**—ಲಿಂಗದೊಳಂ ಅರ್ಥದೊಳಂ ವಚನಮಾತ್ರದೊಳಂ ಸಂಬೋಧನೆಯೊಳಂ ಪ್ರಥಮಾವಿಭಕ್ತಿಯಕ್ಕುಂ. ಲಿಂಗಮೆಂಬುದು ವಸ್ತುವಿನ ಕುಱುಪಂ ಪೇೞ್ವುದು; ಅರ್ಥಮೆಂಬುದು ಭಾವವಿಶೇಷಮಂ ಪೇೞ್ವುದು; ವಚನಮಾತ್ರಮೆಂಬುದು ಗಣನೆಯಂ ಪೇೞ್ವುದು; ಸಂಬೋಧನೆಯೆಂಬುದು ಅಭಿಮುಖೀಕರಣಮಂ ಪೇೞ್ವುದು.

**ಪ್ರಯೋಗಂ.**—ಲಿಂಗಕ್ಕೆ-ಇಂದ್ರಂ, ಚಂದ್ರಂ, ಮನುಷ್ಯಂ; ಗೋವಿನಿ, ಕಾಮಿನಿ; ಆನೆ, ಕುದುರೆ, ಮರಂ, ಗಿಡು, ಪಕ್ಕಿ, ಮಿಗಂ.

ಅರ್ಥಕ್ಕೆ—ನಿಡಿಯಂ, ಗುಜ್ಜಂ, ಕೆಂಚಂ, ಕರಿಯಂ, ಅಸಿಯಂ, ಇನಿಯಂ.

ವಚನಕ್ಕೆ—ಒಂದು, ಎರಡು, ಮೂಱು; ಒರ್ವಂ, ಇರ್ವರ್, ಮೂವರ್,

ತೃತೀಯಾರ್ಥದ ಕರ್ತೃವಿನೊಳಂ ಪ್ರಥಮೆಯಕ್ಕುಂ—ಅವಂ ಮಾಡಿದಂ, ಅವನಿಂ ಮಾಡೆಪಟ್ಟುದು.

ಸಂಬೋಧನೆಗೆ—ಎಲೆ ದೇವ! ರಕ್ಷಿಸು.

ಕಂ ॥ ನೀನುಳ್ಳೊಡುಂಟು ರಾಜ್ಯಂ ।
ನೀನುಳ್ಳೊಡೆ ಪಟ್ಟಮುಂಟು ಪೀಱಗೆಯುಂಟು ॥
ನೀನುಳ್ಳೊಡುಂಟು ಬೆಳ್ಗೊಡೆ ।
ನೀನಿಲ್ಲದಿವೆಲ್ಲಮೊಳವೆ ಭಾನುತನೂಜಾ ॥

ನಲ್ಲಳೆ! ನಿನ್ನ ಕಾಲ್ವಿಡಿದಪೆಂ ತಿಳಿ ಮೌನಮಿದೇಕೆ?

ಸ್ತಂಭ ಕುಂಭಾದಿ ಜಡವಸ್ತುಗಳೊಳಂ ದೇವತಾಪ್ರತಿಮೆಯೊಳಂ ಲೋಕಾಂತರದೊಳಂ ಆತ್ಮೀಯಚಿತ್ತದೊಳಂ ಅಭಿಮುಖೀಕರಣಮುಪಚಾರಂ — ಎಲೆ ಕನ್ನಡಿಕಳಸಮೆ! ಕಥೆಯ ಕೇಳ್. ತಳಿರೆ! ತಾವರೆಯೆ! ಮದಾಳಿ ಕುಳಮೆ! ಕನ್ನೆಯ್ದಿಲೆ! ಮತ್ತಕೋಕಿಲಮೆ! ಸೀತೆಯಂ ಕಂಡಿರೆ? ಸೈರಿಸು ಹೃದಯಮೆ!

..................................................................

**ಟೀಕೆ.**—ಅಭಿರೂಪದಿಂ=ಅಭಿವ್ಯಕ್ತವಾದ ರೂಪದಿಂದೆ, ಆ ಪ್ರಥಮಾವಿಭಕ್ತಿ=ಆ ಪ್ರಥಮೆಯೆಂಬ ವಿಭಕ್ತಿ, ಲಿಂಗ=ಲಿಂಗದಲ್ಲಿ, ಅರ್ಥ=ಅರ್ಥದಲ್ಲಿ, ವಚನ=ವಚನದಲ್ಲಿ, ಸಂಬೋಧನದೊಳ್=ಸಂಬುದ್ಧಿಯಲ್ಲಿ, ಪ್ರಭವಿಪ್ಪುದು=ಹುಟ್ಟಿರ್ಪುದು; ಆ ದ್ವಿತೀಯಾವಿಭಕ್ತಿ=ಆ ದ್ವಿತೀಯೆಯೆಂಬ ವಿಭಕ್ತಿ, ಕರ್ಮದೊಳ್=ಕರ್ಮದಲ್ಲಿ, ಅನಾಕುಳಂ=ವ್ಯಾಕುಳವಿಲ್ಲದುದಾಗಿ, ವರ್ತಿಸುಗುಂ=ವರ್ತಿಸುವುದು. ॥ ೧೨೬ ॥

ಸೈರಿಸು. ಎಲೆ ಸರ್ವೇಶ! ನಿನ್ನ ನಿಜಮಂ ತೋಱು, ಆವ ಜಗಮಂ ಸಾಧಿಸ ಲ್ವೋದಯ್? ಪೇೞಿಲೆ ವಿದ್ಯಾಧರಚಕ್ರವರ್ತಿ!

ಆವುದು ಮಾಡಲ್ವೇಡಿದುದದುವೆ ಕರ್ಮಂ; ಅದರೊಳ್ ದ್ವಿತೀಯಾ ವಿಭಕ್ತಿ ವರ್ತಿಸುಗುಂ. ಕರ್ತೃಕರ್ಮಕ್ಕುದಾಹರಣೆ—ಪಡೆದಂ ಪದ್ಮಜನೀ ಜಗ ತ್ರಯಮಂ.

**ಸೂತ್ರಂ** ॥ ಪ್ರವಿದಿತ ತತ್ಕರ್ಮಂ ಕ।
ರ್ತೃವಿನೀಪ್ಸಿತತಮ ಪದಾರ್ಥಮದು ನಾಲ್ಕುಂ ಭೇ॥
ದವನಾಳ್ದಿರ್ಕುಂ ನಿರ್ವ।
ರ್ತ್ಯವಿಕಾರ್ಯಂ ಪ್ರಾಪ್ಯಮೆತ್ತಲುಂ ವೈಷಯಿಕಂ ॥ ೧೨೭ ॥

**ವೃತ್ತಿ.**—ಆ ಕರ್ಮಂ ಮಾಡುವನ ಇಷ್ಟಮಪ್ಪ ವಸ್ತು; ಅದು ನಿರ್ವರ್ತ್ಯ ಮೆಂದುಂ ವಿಕಾರ್ಯಮೆಂದುಂ ಪ್ರಾಪ್ಯಮೆಂದುಂ ವೈಷಯಿಕಮೆಂದುಂ ನಾಲ್ಕು ತೆಱನಪ್ಪುದು. ನಿರ್ವರ್ತ್ಯಮೆಂದು ನಿರ್ವಾಹಮನೆಯ್ದುವುದು; ವಿಕಾರ್ಯಮೆಂದು ರೂಪಾಂತರಮನೆಯ್ದುವುದು; ಪ್ರಾಪ್ಯಮೆಂದು ಎಯ್ದಲ್ ಪಡುವುದು; ವೈಷ ಯಿಕಮೆಂದು ನಯನಾದಿಗೆ ವಿಷಯಮಪ್ಪುದು.

**ಪ್ರಯೋಗಂ.**— ಕರ್ಮಕ್ಕೆ— ತುಡುಗೆಯಂ ತೊಟ್ಟಂ; ಪೂವಂ ಮುಡಿದಂ.

ನಿರ್ವರ್ತ್ಯಕ್ಕೆ—ಮನೆಯುಂ ಮಾಡಿದಂ; ಕಾವ್ಯಮಂ ಪೇೞ್ದಂ.

ವಿಕಾರ್ಯಕ್ಕೆ—ಪಱುವಂ ಕಡಿದಂ; ಕಾಯುಂ ಪೋೞ್ದಂ.

ಪ್ರಾಪ್ಯಕ್ಕೆ—ಊರನೆಯ್ದಿದಂ; ಮರನಂ ಸಾರ್ದಂ.

ವೈಷಯಿಕಕ್ಕೆ—ನೇಸಱಂ ನೋಡಿದಂ; ಗೀತಮಂ ಕೇಳ್ದಂ; ನಲ್ಲಳನಪ್ಪಿದಂ; ರಸಮಂ ಪೀರ್ದಂ; ಪೂವಂ ಮೂಸಿದಂ.

---

**ಟೀಕೆ.**—ಪ್ರ=ವಿಶೇಷವಾಗಿ, ವಿದಿತ=ಪ್ರಸಿದ್ಧವಾದ, ತತ್ಕರ್ಮಂ=ಆ ಕರ್ಮಂ, ಕರ್ತೃವಿನ=ಮಾಡುವಾತನ, ಈಪ್ಸಿತತಮ ಪದಾರ್ಥಂ=ಇಚ್ಛೈಸಲ್ಪಟ್ಟ ಪದಾರ್ಥಂ; ಅದು=ಆ ಕರ್ಮಂ, ನಿರ್ವರ್ತ್ಯ=ನಿರ್ವರ್ತ್ಯಮೆಂದು, ವಿಕಾರ್ಯಂ=ವಿಕಾರ್ಯಮೆಂದು, ಪ್ರಾಪ್ಯಂ=ಪ್ರಾಪ್ಯಮೆಂದು, ಎತ್ತಲುಂ=ಎಲ್ಲಿಯುಂ, ವೈಷಯಿಕಂ=ವೈಷಯಿಕಮೆಂದು, ನಾಲ್ಕುಂ ಭೇದವಂ=ನಾಲ್ಕು ಭೇದವಂ, ಆಳ್ದು=ತಾಳ್ದು, ಇರ್ಕುಂ=ಇರ್ಪುದು. ॥೧೨೭॥

ಸೂತ್ರಂ ॥ ತೊಡರ್ದಿಷ್ಟಾನಿಷ್ಟದೊಳೆಡೆ।
ಯುಡುಗದ ಕಾಲಾಧ್ವದೊಳ್ ದ್ವಿತೀಯೆಯೆ ಮತ್ತಂ ॥
ನುಡಿಗುಂ ತೃತೀಯೆ ಪೇೞ।
ಲ್ಪಡುಗುಂ ಸಲೆ ಕರ್ತೃ ಕರಣ ಹೇತು ಸ್ಥಿತಿಯೊಳ್ ॥ ೧೨೮ ॥

ವೃತ್ತಿ.—ಇಷ್ಟದೊಳಂ ಅನಿಷ್ಟದೊಳಂ ಕಾಲದೊಳಂ ಅಧ್ವದೊಳಂ ಎಡೆ ವಱಿಯದೆ ದ್ವಿತೀಯೆಯಕ್ಕುಂ; ಕರ್ತೃವಿನೊಳಂ ಕರಣದೊಳಂ ಹೇತುವಿನೊಳಂ ತೃತೀಯೆಯಕ್ಕುಂ.

ಪ್ರಯೋಗಂ.—ಇಷ್ಟಕ್ಕೆ—ನೇವಳಮಂ ತೆಗೆದಂ.

ಅನಿಷ್ಟಕ್ಕೆ—ಪಾವಂ ದಾಂಟಿದಂ.

ಕಾಲಕ್ಕೆ—ಅಱುದಿಂಗಳಂ ತಳ್ವಿದಂ. ಉಪವಾಸದಿಂ ತ್ರಿರಾತ್ರಮನಿರ್ದಂ. ಜಾವಮಂ ತೊೞಲ್ದಂ.

ಅಧ್ವಕ್ಕೆ—ಅರೆ ಗಾವುದಮಂ ಪರಿದಂ. ಮೂಗಾವುದಮಂ ನಡೆದಂ.

ದೋಹನಾದಿಗಳೊಳ್ ದ್ವಿಕರ್ಮಕಮುಂಟು—ಗುರುವಂ ಜ್ಞಾನಮಂ ಬೆಸಗೊಂಡಂ. ದಾನಿಯಂ ದಾನಮಂ ಬೇಡಿದಂ ಪಶುವಂ ಪಾಲಂ ಕಱೆದಂ.

ತೃತೀಯೆಯ ಕರ್ತೃವಿಂಗೆ—ಪವಕಮಕ್ಕಸಾಲೆಯಿಂ ಮಾಡಲ್ಪಟ್ಟುದು. ಕಾವ್ಯಮೆನ್ನಿಂ ಪೇೞಿ ಪಟ್ಟುದು.

ಕರಣಕ್ಕೆ—ಕೊಡಲಿಯಿಂ ಕಡಿದಂ. ಗದೆಯಿಂ ಮೋದಿದಂ. ಕಣ್ಣಿಂ ನೋಡಿದಂ.

ಹೇತುವಿಂಗೆ—ಓಲಗದಿಂ ಪಡೆದಂ. ತಗಹಿಂ ಸಿಲ್ಕಿದಂ. ದೈವದಿಂ ಬೞಲ್ದಂ.

ಸಹಯೋಗದೊಳಮುಂಟು—ಸಂಗಡದಿಂ ಬಂದಂ.

.......................................................................................................

ಟೀಕೆ.—ಮತ್ತಂ = ಮತ್ತೆಯುಂ, ದ್ವಿತೀಯೆಯೆ = ದ್ವಿತೀಯಾ ವಿಭಕ್ತಿಯೆ, ಇಷ್ಟ=ಇಷ್ಟದಲ್ಲಿ, ಅನಿಷ್ಟ=ಅನಿಷ್ಟದಲ್ಲಿ, ತೊಡರ್ದು = ಪೊರ್ದುಗೆಯಾಗಿ, ಎಡೆಯುಡುಗದ=ಎಡೆಬಿಡದ, ಕಾಲ=ಕಾಲದಲ್ಲಿ, ಅಧ್ವದೊಳ್=ಪಥದಲ್ಲಿ, ನುಡಿಗುಂ=ನುಡಿವುದು ; ತೃತೀಯೆ=ತೃತೀಯಾ ವಿಭಕ್ತಿ, ಸಲೆ=ಚೆನ್ನಾಗಿ, ಕರ್ತೃ=ಕರ್ತೃವಿನಲ್ಲಿ, ಕರಣ=ಕರಣದಲ್ಲಿ, ಹೇತುಸ್ಥಿತಿಯೊಳ್=ಹೇತುವಿನ ಸ್ಥಿತಿಯಲ್ಲಿ, ಪೇೞಲ್ಪಡುಗುಂ=ಪೇೞಲ್ಪಡುವುದು.

ಸೂತ್ರಂ ॥ ನುತ ಸಂಪ್ರದಾನ ರೂಢಂ ।
ಚತುರ್ಥಿಯದು ರುಚಿಯೊಳೀರ್ಷ್ಯೆಯೊಳ್ ಮಚ್ಚರದೊಳ್ ॥
ಹಿತದೊಳ್ ಸಂಭೀತಿಯೊಳುಂ ।
ನತಿಯೊಳ್ ಸ್ವಸ್ತ್ಯಾದಿಯೊಳ್ ಸ್ವಭಾವಸ್ಥಿತಿಯೊಳ್ ॥ ೧೨೯ ॥

ಪ್ರವಿದಿತ ಹೇತುವಿನೊಳ್ ಸಂ ।
ದವನತಿಯೊಳ್ ಪ್ರಾಣ್ಯನಾದರ ಸ್ಮರಣದೊಳು ॥
ದ್ಭವಿಸಿದನೀಪ್ಸಿತದೊಳ್ ಸದೃ ।
ಶವೃತ್ತಿಯೊಳ್ ಪ್ರತಿನಿಧಾನದೊಳಮಿಷ್ಟದೊಳಂ ॥ ೧೩೦ ॥

ವೃತ್ತಿ.— ಸಂಪ್ರದಾನವೆಂದಾವುದಾನೊಂದು ವಸ್ತುವನೀಯಿಸಿಕೊಂಬ ಪಾತ್ರಂ; ಅಲ್ಲಿ ಚತುರ್ಥಿಯಕ್ಕುಂ. ಅದು ರುಚಿ, ಈರ್ಷ್ಯೆ, ಮಚ್ಚರ, ಹಿತ, ಭೀತಿ, ಉನ್ನತಿ, ಸ್ವಸ್ತ್ಯಾದಿ, ಸ್ವಭಾವ, ಕಾರಣ, ನಮಸ್ಕಾರ, ಪ್ರಾಣ್ಯನಾದರ ಸ್ಮರಣ, ಅನಿಷ್ಟ, ಸಾದೃಶ್ಯ, ಪ್ರತಿನಿಧಿ, ಇಷ್ಟಂ—ಎಂಬಿಸಿತಱೊಳ್ ವರ್ತಿಸುಗುಂ.

ಪ್ರಯೋಗಂ.—ಸಂಪ್ರದಾನಕ್ಕೆ—ಬ್ರಾಹ್ಮಣಂಗೆ ಗೋವಂ ಕೊಟ್ಟಂ.

ರುಚಿಗೆ—ಕೂಸಿಂಗೆ ಲಡ್ಡುಗೆಯಟ್ಟಿತ್ತು.

ಈರ್ಷ್ಯೆಗೆ—ಕವಿಗೆ ಕವಿ ಮುನಿವಂ.

ಮಚ್ಚರಕ್ಕೆ—ಸವತಿಗೆ ಸವತಿ ಪುರುಡಿಪಳ್. ಬಿರುದರ್ಗೆ ಬಿರುದರ್ ಸೆಣಸುವರ್.

---

ಟೀಕೆ.—ನುತ = ಕೊಂಡಾಡಲ್ಪಟ್ಟ, ಸಂಪ್ರದಾನ=ಸಂಪ್ರದಾನ ಕಾರಕದಲ್ಲಿ, ರೂಢಂ=ರೂಢಿಯುಳ್ಳುದು, ಚತುರ್ಥಿ=ಚತುರ್ಥೀವಿಭಕ್ತಿಯೆನಿಸುವುದು ; ಅದು=ಆ ಚತುರ್ಥಿ, ರುಚಿಯೊಳ್=ರುಚಿಯಲ್ಲಿ, ಈರ್ಷ್ಯೆಯೊಳ್=ಸೈರಣೆಯಿಲ್ಲದಲ್ಲಿ, ಮಚ್ಚರದೊಳ್=ಮಚ್ಚರದಲ್ಲಿ, ಹಿತದೊಳ್ = ಹಿತದಲ್ಲಿ, ಸಂಭೀತಿಯೊಳ್ = ಲೇಸಾದ ಭೀತಿಯಲ್ಲಿ, ಉನ್ನತಿಯೊಳ್=ಪೆರ್ಚುಗೆಯಲ್ಲಿ, ಸ್ವಸ್ತ್ಯಾದಿಯೊಳ್=ಸ್ವಸ್ತಿಯೆಂಬುದು ಮೊದಲಾದುವಱಲ್ಲಿ, ಸ್ವಭಾವಸ್ಥಿತಿಯೊಳ್=ಸ್ವಭಾವದ ಸ್ಥಿತಿಯಲ್ಲಿ, ಪ್ರ=ವಿಶೇಷವಾಗಿ, ವಿದಿತ=ಪ್ರಸಿದ್ಧವಾದ, ಹೇತುವಿನೊಳ್=ಕಾರಣದಲ್ಲಿ, ಸಂದವನತಿಯೊಳ್ = ಸಲುವಳಿಯಾದ ನಮಸ್ಕಾರದಲ್ಲಿ, ಪ್ರಾಣಿ=ಪ್ರಾಣಿಗಳಲ್ಲಿ, ಅನಾದರ=ತಿರಸ್ಕಾರದ, ಸ್ಮರಣದೊಳ್=ನೆನಹಿನಲ್ಲಿ, ಉದ್ಭವಿಸಿದ=ಹುಟ್ಟಿದ, ಅನೀಪ್ಸಿತದೊಳ್=ಅನಿಚ್ಛೆಯಲ್ಲಿ, ಸದೃಶವೃತ್ತಿಯೊಳ್=ಸಮಾನವರ್ತನೆಯಲ್ಲಿ, ಪ್ರತಿನಿಧಾನದೊಳಂ = ಪ್ರತಿನಿಧಿಯಲ್ಲಿಯುಂ, ಇಷ್ಟದೊಳಂ=ಇಷ್ಟದಲ್ಲಿಯುಂ ಬರ್ಪುದು. ॥ ೧೨೯ ॥ ॥ ೧೩೦ ॥

ಹಿತಕ್ಕೆ—ಪಶುವಿಂಗೆ ತೃಣಂ ಹಿತಂ. ರೋಗಿಗೌಷಧಂ ಹಿತಂ.

ಭೀತಿಗೆ—ಪಾಪಕ್ಕಂಜುಗುಂ ತಕ್ಕಂ. ಪುಲಿಗಂಜಿ ಪುತ್ತಮಂ ಪೊಕ್ಕಡರೆ ಪಾವುಕೊಂದುದು.

ಉನ್ನತಿಗೆ—ಲೋಕಕ್ಕೀತನಧಿಕಂ. ಮೇರುವಿಂಗೆ ಈತನಗ್ಗಳಂ.

ಸ್ವಸ್ತ್ಯಾದಿಗೆ—ಸಮನಿಸುಗೆ ಜಗಕ್ಕೆಲ್ಲಿಯುಮಭೀಷ್ಟಂ,ಕ್ಷೇಮವೃತ್ತಿ, ಕುಶಲಂ, ಭದ್ರಂ, ಭಾವುಕಂ, ಭವಿತವ್ಯಂ, ಶ್ರೇಯಂ, ಶಿವಂ, ಶುಭಂ, ಸ್ವಸ್ತಿ, ಮಂಗಳಂ, ಕಲ್ಯಾಣಂ.

ಸ್ವಭಾವಕ್ಕೆ—ಸಿಂಹಕ್ಕೆ ಶೌರ್ಯಂ. ಕಪಿಗೆ ಚಪಲತೆ.

ಹೇತುವಿಂಗೆ—ಸಿರಿಗುದ್ಯೋಗಂ. ಮೞೆಗೆ ಮುಗಿಲ್.

ನಮಸ್ಕಾರಕ್ಕೆ—ದೇವರ್ಗೆ ಪೊಡಮಟ್ಟಂ. ಗುರುವಿಂಗೆಜಗಿದಂ.

ಪ್ರಾಣ್ಯನಾದರ ಸ್ಮರಣಕ್ಕೆ—ಮಾನಸರಂ ಪುಲ್ಗೆ (ಕಷ್ಟವಾಗೆ) ನೆನೆವಂ.

ಅನಿಷ್ಟಕ್ಕೆ—ಆತಂಗೆ ವಿಷಮನಿಕ್ಕಿದಂ. ಆತಂಗೆ ಕತ್ತಿಯಂ ಮಸೆದಂ.

ಸಾದೃಶ್ಯಕ್ಕೆ—ಆತಂಗೀತಂ ತಕ್ಕಂ. ಐರಾವತಕ್ಕೆ ಸುಪ್ರತೀಕಮೋರಗೆ.

ಪ್ರತಿನಿಧಿಗೆ-ಜೇನುತುಪ್ಪಕ್ಕೆ ಸಕ್ಕರೆ ಸಲ್ವುದು. ಆ ಕಬ್ಬಕ್ಕೀ ಕಬ್ಬಮಾಯ್ತು.

ಇಷ್ಟಕ್ಕೆ—ಭಕ್ತಂಗೆ ವರಮನಿತ್ತಂ. ಕೆಳೆಯಂಗೆ ಸಂತಸಮಂ ಮಾಡಿದಂ.

**ಸೂತ್ರಂ** ॥ ಆದಂ ಪಂಚಮಿಯಪ್ಪುದ ।
ಪಾದಾನ ಸ್ಥಲದೊಳದೆ ದಲೊದವುಗುಮಾತಂ॥
ಕಾದಾನೇಷ್ಟಾನಿಷ್ಟಾ ।
[1]ಪಾದಿತ ಹೇತುವಿನೊಳುದಯದೊಳ್ ಗೌರವದೊಳ್ ॥ ೧೩೧ ॥

**ಟೀಕೆ.**—ಅಪಾದಾನ ಸ್ಥಲದೊಳ್=ಅಪಾದಾನ ಕಾರಕಸ್ಥಲದಲ್ಲಿ, ಆದಂ=ಆದ ಮೆಂಬ ಪೀನಗ್ರಹಣದಿಂದೆ, ಪಂಚಮಿ = ಪಂಚಮೀ ವಿಭಕ್ತಿ, ಅಪ್ಪುದು=ಆಗುವುದು; ಅದೆ=ಆ ಪಂಚಮಿಯೆ, ದಲ್=ನಿಶ್ಚಯವಾಗಿ, ಆತಂಕ=ಭಯದಲ್ಲಿ, ಆದಾನ=ಸ್ವೀಕಾರ ದಲ್ಲಿ, ಇಷ್ಟ=ಇಷ್ಟದಲ್ಲಿ, ಅನಿಷ್ಟ=ಇಷ್ಟವಲ್ಲದುದಜಲ್ಲಿ, ಆಪಾದಿತ = ಪ್ರತಿಪಾದಿಸಲ್ಪಟ್ಟ,

1. ಸಾದಿತಹೇತು. ಕ. ಖ.

**ವೃತ್ತಿ.**—ಅಪದಾನಮೆಂದಾವುದಾನುಮೊಂದಱಿಂ ತೊಲಗುವುದು; ಅಲ್ಲಿ ಪಂಚಮಿಯಕ್ಕುಂ. ಆ ಪಂಚಮಿ ಭಯ, ಸ್ವೀಕಾರ, ಇಷ್ಟ, ಅನಿಷ್ಟ, ಹೇತು, ಉದಯ, ಗುರುತ್ವವೆಂಬಿನಿತಱೊಳಂ ವರ್ತಿಸುಗುಂ.

**ಪ್ರಯೋಗಂ.**—ಅಪಾದಾನಕ್ಕೆ—ಮರದತ್ತಣಿಂ ಪಂಣುದಿರ್ದುದು. ಕೆಱೆಯತ್ತಣಿಂ ಬಂದಂ. ಆತನಿಂ ಪಿರಿಯನೆಂಬಂತಪ್ಪುವಱೊಳಪಾದಾನಮಂ ಮಱೆಮಾಡಿ ವಿಕಲ್ಪಿಸುವರ್—ಕೃಷ್ಣನಿಂ ಪಿರಿಯಂ ಬಲಭದ್ರಂ. ದುರ್ಯೋಧನನಿಂ ಕಿಱಿಯಳ್ ದುಶ್ಶಳೆ—ಎಂಬಂತೆ.

ಭಯಕ್ಕೆ—ಅರಸನತ್ತಣಿಂ ದಾಟಿ ಬಂದುದು. ಹುಲಿಯತ್ತಣಿಂದಂಜಿದೆಂ.

ಸ್ವೀಕಾರಕ್ಕೆ—ಸ್ವಾಮಿಯತ್ತಣಿಂ ನಿರ್ವಾಹವಮಾದುದು.

ಇಷ್ಟಕ್ಕೆ—ರಂಭೆಯತ್ತಣಿಂ ಸುಖಂ ಪ್ರಾಪ್ತಿಸಿದುದು.

ಅನಿಷ್ಟಕ್ಕೆ—ಪಗೆಯತ್ತಣಿಂ ಬಂಧನಂ ಬಂದುದು.

ಹೇತುವಿಂಗೆ—ಉದ್ಯೋಗದತ್ತಣಿಂ ಸಿರಿ ಬಂದುದು.

ಉದಯಕ್ಕೆ—ಸದ್ವಂಶದತ್ತಣಿಂ ಪುಟ್ಟಿದಂ.

ಪೆರ್ಮೆಗೆ—ಕೃಷ್ಣನತ್ತಣಿಂ ಬಲಭದ್ರಂ ಪಿರಿಯಂ.

**ಸೂತ್ರಂ** ‖ ಪತಿ ಕುಲ ಜಾತ್ಯವಯವ ವಿ ।
ಶ್ರುತ ಲಕ್ಷಣ ಸಂನಿಧಾನ ಸಂಸ್ಪರ್ಶ ಸಮಾ ‖
ಗತ ಸಂಬಂಧದೊಳಂ ತ ।
ದ್ಗತ ಸಂಬಂಧದೊಳಮುಂಟು ಷಷ್ಠಿಗೆ ಯೋಗಂ ‖ ೧೩೨ ‖

---

ಹೇತುವಿನೊಳ್=ಕಾರಣದಲ್ಲಿ, ಉದಯದೊಳ್=ಜನನದಲ್ಲಿ, ಗೌರವದೊಳ್=ಗುರುತ್ವದಲ್ಲಿ, ಒದವುಗುಂ=ಬರ್ಪುದು. ‖ ೧೩೧ ‖

**ಟೀಕೆ.**—ಪತಿ=ಸ್ವಾಮಿಯಲ್ಲಿ, ಕುಲ=ಕುಲದಲ್ಲಿ, ಜಾತಿ=ಜಾತಿಯಲ್ಲಿ, ಅವಯವ=ಅವಯವದಲ್ಲಿ, ವಿಶ್ರುತ=ಪ್ರಸಿದ್ಧವಾದ, ಲಕ್ಷಣ=ಲಕ್ಷಣದಲ್ಲಿ, ಸನ್ನಿಧಾನ=ಸನ್ನಿಧಿಯಲ್ಲಿ, ಸಂ=ಲೇಸಾದ, ಸ್ಪರ್ಶ=ಸ್ಪರ್ಶನದಲ್ಲಿ, ಸಂ=ಲೇಸಾಗಿ, ಆಗತ=ಬಂದುದಾದ, ಸಂಬಂಧದೊಳಂ=ಸಂಬಂಧದಲ್ಲಿಯುಂ, ತತ್=ಆ ಸಂಬಂಧದಲ್ಲಿ, ಗತ=ಎಯ್ದಲ್ಪಟ್ಟ, ಸಂಬಂಧದೊಳಂ=ಸಂಬಂಧದಲ್ಲಿಯುಂ, ಷಷ್ಠಿಗೆ=ಷಷ್ಠೀವಿಭಕ್ತಿಗೆ, ಯೋಗಂ=ಕೂಟಂ, ಉಂಟು=ಉಂಟಾಗಿರ್ಪುದು. ‖ ೧೩೨ ‖

**ವೃತ್ತಿ.**—ಸಂಬಂಧದೊಳ್ ಷಷ್ಠಿಯಕ್ಕುಂ. ಅದು ಸ್ವಾಮಿಸಂಬಂಧ, ಕುಲಸಂಬಂಧ, ಜಾತಿಸಂಬಂಧ, ಅವಯವಸಂಬಂಧ, ಲಕ್ಷಣಸಂಬಂಧ, ಸನ್ನಿಧಾನಸಂಬಂಧ, ಸಂಸ್ಪರ್ಶಸಂಬಂಧ, ಸಂಬಂಧದ ಸಂಬಂಧವೆಂಬಿನಿತಱೊಳಮಕ್ಕುಂ.

**ಪ್ರಯೋಗಂ.**—ಸ್ವಾಮಿಸಂಬಂಧಕ್ಕೆ—ಊರೊಡೆಯಂ; ನಾಡೆಱೆಯಂ.

ಕುಲಸಂಬಂಧಕ್ಕೆ—ಎಮ್ಮ ಸೊಮ್ಮು; ಎಮ್ಮ ಮೊಱೆ; ಎಮ್ಮಳಿಯಂ; ಎಮ್ಮ ತಮ್ಮಂ.

ಜಾತಿಗೆ—ಆನೆಯ ಘಟೆ; ಕುದುರೆಯ ಥಟ್ಟು; ಗಿಳಿಯ ಪಿಂಡು.

ಅವಯವಕ್ಕೆ—ಮರದ ಕೊಂಬು; ಪೂವಿನೆಸಳ್; ಕೊಡೆಯ ಕಾವು.

ಕುಱುಪಿಂಗೆ-- ಟೊಪ್ಪಿಗೆಯ ಮಾನಿಸಂ; ತತ್ತಳದ ರಾವುತಂ; ಸಿಂಧುದೇಶದ ಕುದುರೆ.

ಸನ್ನಿಧಾನಕ್ಕೆ—ಕೆಱೆಯ ಕೋಡಿ; ಊರ ಮುಂದು; ಅದಱ ಕೆಲಂ.

ಸಂಸ್ಪರ್ಶಕ್ಕೆ—ಕಳಸದ ತಳಿರ್; ನೀರ ಹಾವಸೆ; ತೋಳ ಬಂದಿ.

ಸಂಬಂಧದ ಸಂಬಂಧಕ್ಕೆ—ನೊಸಲ ಕಣ್ಣ ದೇವಂ; ತೋಳ ಬಾಳ ಕಾಂತಿ; ಹರಿಯ ಪೊಕ್ಕುೞ ತಾವರೆ.

ಮತ್ತಂ ಶೇಷದೊಳಂ ವಸ್ತುವಿಕಾರದೊಳಮುಂಟು—

ಶೇಷಕ್ಕೆ—ಬಳ್ಳದೞ; ಅದಱ ಮಱು.

ವಸ್ತುವಿಕಾರಕ್ಕೆ—ಪೊನ್ನ ಕೋಲ್.

ಎಲ್ಲಾ ವಿಭಕ್ತಿಗಳುಂ ಷಷ್ಠೀಗತಮಾದುವಾಗಿ ಸಂಬಂಧಮೆಂಬರ್.

**ಸೂತ್ರಂ** ‖ ಧೀರರಿನಾವುದು ತಾನಾ ।
ಧಾರಮದಧಿಕರಣಮಲ್ಲಿ ಸಪ್ತಮಿ ತಿಳಿ ನಿ ॥
ರ್ಧಾರಣ ವಿಷಯ ವ್ಯಾಪಕ ।
ಸಾರ ವ್ಯವಹಾರ ಕಾಲ ಸತ್ಯರ್ಥಗತಂ ॥ ೧೩೩ ॥

**ವೃತ್ತಿ.**— ಆವುದಾಧಾರಮದು ಅಧಿಕರಣಂ; ಅಲ್ಲಿ ಸಪ್ತಮಿಯಕ್കುಂ. ಅದು ನಿರ್ಧಾರಣದೊಳಂ ವಿಷಯದೊಳಂ ವ್ಯಾಪಕದೊಳಂ ವ್ಯವಹಾರದೊಳಂ ಕಾಲದೊಳಂ ಸತ್ಯರ್ಥದೊಳಂ ವರ್ತಿಸುಗುಂ.

**ಪ್ರಯೋಗಂ.**—ಅಧಿಕರಣಕ್ಕೆ—ಪಾಸಿನೊಳ್ ನಿದ್ರೆಗೆಯ್ದಂ. ಪಱಿಗೋಲೊಳ್ (ಪಱುಗೋಲೊಳ್) ಕುಳ್ಳಿರ್ದಂ.

ನಿರ್ಧಾರಣಮೆಂಬುದು ಗುಣಮೆಂಬ ಕ್ರಿಯೆಯೆಂಬ ಎರಡಱಿಂ ಜಾತಿಯತ್ತಣಿಂ ವಸ್ತುವಂ ಬೇರ್ಕೆಯ್ವುದು.

ಗುಣಕ್ಕೆ—ದೇವರೊಳ್ ನಿರ್ದೋಷಿಯಾಪ್ತಂ. ರತ್ನಂಗಳೊಳ್ ಮಾಣಿಕ್ಯಮುತ್ತಮಂ.

ಕ್ರಿಯೆಗೆ–ಪರಿಕಾಱರೊಳೀತಂ ಕಾಲ್ವಲ್ಲಿದಂ. ಕಾದುವರೊಳೀತಂ ಮೆಯ್ಗಲಿ.

ವಿಷಯಕ್ಕೆ—ಕಿವಿಯೊಳ್ ಪರ್ಚ್ಚಿದಂ. ಮೊಗದೊಳ್ ಮೆಲ್ದಂ.

ವ್ಯಾಪಕಕ್ಕೆ—ಪೂವಿನೊಳ್ ಕಂಪು. ಕರ್ವಿನೊಳ್ ರಸಂ. ಎಳ್ಳೊಳ್ ಎಣ್ಣೆ.

ವ್ಯವಹಾರಕ್ಕೆ—ತಪದೊಳ್ ನೆಗಟ್ದಂ. ವೀರದೊಳೆಸೆದಂ.

ಕಾಲಕ್ಕೆ—ವಸಂತದೊಳ್ ಮಾವು ಬಂದುದು. ಶರದೊಳ್ ದಿಗ್ವಿಜಯಮುಚಿತಂ.

ಸತ್ಯರ್ಥಕ್ಕೆ—ಬರ್ಪ್ಪೆಡೆಯೊಳ್ಕಂಡಂ (ಬರೆ ಕಂಡಂ)

**ಸೂತ್ರಂ** ॥ ಇಂತೀ ಪೇಟ್ದ ವಿಭಕ್ತಿಗ ।
ಳೆಂತುಂ ಪಲ್ಲಟಸುಗುಂ ಯಥೇಷ್ಟಂ ಪ್ರಥಮಾ ॥
ರ್ಥಂ ತೋಱಿಯುಂ ದ್ವಿತೀಯಾ ।
ರ್ಥಂ ತೋಱಿಯುಮಲ್ಲಿ ಷಷ್ಠಿ ದೊರೆಕೊಂಡಿರ್ಕುಂ ॥ ೧೩೪ ॥

..........

**ಟೀಕೆ.**—ಧೀರರಿಂ=ವಿದ್ವಾಸರಿಂದೆ, ಆಧಾರಂ, ತಾಂ, ಅವುದು, ಅದು, ಅಧಿಕರಣಂ=ಅಧಿಕರಣ ಕಾರಕವೆನಿಸುವುದು; ಅಲ್ಲಿ=ಆ ಅಧಿಕರಣ ಕಾರಕದಲ್ಲಿ, ಸಪ್ತಮೀ=ಸಪ್ತಮೀವಿಭಕ್ತಿ ಬರ್ಪುದು; ತಿಳಿ=ಅಱಿ; ನಿರ್ಧಾರಣ=ನಿರ್ಧಾರಣದಲ್ಲಿ, ವಿಷಯ=ವಿಷಯದಲ್ಲಿ, ವ್ಯಾಪಕ=ವ್ಯಾಪಕದಲ್ಲಿ, ಸಾರ=ಶ್ರೇಷ್ಠವಾದ, ವ್ಯವಹಾರ=ವ್ಯವಹಾರದಲ್ಲಿ, ಕಾಲ=ಕಾಲದಲ್ಲಿ, ಸತ್ಯರ್ಥ=ಸತಿಸಪ್ತಮಿಯರ್ಥದಲ್ಲಿ, ಗತಂ=ಎಯ್ದಲ್ಪಡುವುದು. ॥೧೩೩

ವೃತ್ತಿ.—ಈ ಪೇೞ್ದ ವಿಭಕ್ತಿಗಳ್ ಯಥಾಸಂಭವದಿನೆಂತಾದೊಡಂ ಪಲ್ಲಟಿಪುವು; ಅಲ್ಲಿ ಪ್ರಥಮಾರ್ಥದೊಳಂ ದ್ವಿತೀಯಾರ್ಥದೊಳಂ ಷಷ್ಠಿಯಕ್ಕುಂ.

ಪ್ರಯೋಗಂ.—ಪ್ರಥಮಾರ್ಥದ ಷಷ್ಠಿಗೆ—ನಿಶ್ಶಂಕೆಯಿಂ ನೃಪನ ಪೇೞಿ. ಚಿತ್ತಭವಗೃಹದ ಸೊಂಕೆ ಸುಜನೋತ್ತಂಸಾ. (ನೃಪಂ ಪೇೞಿ, ಗೃಹಂ ಸೊಂಕೆಯೆಂದಿವರ್ಕರ್ಥಂ.)

ದ್ವಿತೀಯಾರ್ಥದ ಷಷ್ಠಿಗೆ—ಎಲವೊ, ನೀನೆನ್ನ ಕೊಂದಯ್, ಕಾಲ್ವಿಡಿದಪಯೊ? ತೆಂಕ ನಾಡ ಮಱೆಯಲ್ಕೆಂದುಂ ಮನಂ ಬರ್ಕುಮೆ? (ಎನ್ನಂ ಕೊಂದಯ್, ನಾಡಂ ಮಱೆಯಲ್ಕೆಂದಿವರ್ಕರ್ಥಂ.)

ಸೂತ್ರಂ ॥ ಸ್ವಾರ್ಥಂ ಪ್ರಥಮಾರ್ಥ ತೃತೀ।
ಯಾರ್ಥ ಚತುರ್ಥ್ಯರ್ಥದೊಳ್ ದ್ವಿತೀಯೆ ತೃತೀಯೋ॥
ಕ್ತಾರ್ಥದೊಳಾ ಸಪ್ತಮಿಯೆ ಸ।
ಮರ್ಥಂ ಪಂಚಮಿಯೊಳಂ ತೃತೀಯೆ ಸಮರ್ಥಂ ॥ ೧೩೭ ॥

ವೃತ್ತಿ.— ಪ್ರಥಮಾರ್ಥದೊಳಂ ತೃತೀಯಾರ್ಥದೊಳಂ ಚತುರ್ಥ್ಯರ್ಥದೊಳಂ ಸಮುಚ್ಚಯದಿಂ ಪಂಚಮ್ಯರ್ಥದೊಳಂ ದ್ವಿತೀಯೆಯಕ್ಕುಂ; ತೃತೀಯಾರ್ಥದೊಳ್ ಸಪ್ತಮಿಯಕ್ಕುಂ; ಪಂಚಮ್ಯರ್ಥದೊಳ್ ತೃತೀಯೆಯಕ್ಕುಂ.

ಪ್ರಯೋಗಂ.—ಪ್ರಥಮಾರ್ಥದ ದ್ವಿತೀಯೆಗೆ–ನುಣ್ಪುಳ್ಳನೆಂಬಲ್ಲಿ ನುಣ್ಪನುಳ್ಳಂ ಎಂದಾಯ್ತು.

---

ಟೀಕೆ.—ಇಂತು=ಹೀಗೆ, ಈ ಪೇೞ್ದ ವಿಭಕ್ತಿಗಳ್=ಈ ಪೇೞ್ದ ಸಪ್ತವಿಭಕ್ತಿಗಳ್, ಯಥೇಷ್ಟಂ=ಇಚ್ಛೆ ಬಂದ ಹಾಗೆ, ಎಂತುಂ=ಹೇಗೆಯಾದೊಡಂ, ಪಲ್ಲಟಿಸುಗುಂ=ಪಲ್ಲಟವಾಗುವುವು; ಪ್ರಥಮಾರ್ಥಂ=ಪ್ರಥಮಾವಿಭಕ್ತಿಯರ್ಥಂ, ತೋಱೆಯುಂ=ಕಾಣಿಸೆಯುಂ, ದ್ವಿತೀಯಾರ್ಥಂ=ದ್ವಿತೀಯಾವಿಭಕ್ತಿಯರ್ಥಂ, ತೋಱೆಯುಂ=ಕಾಣಿಸೆಯುಂ, ಅಲ್ಲಿ=ಆ ಸ್ಥಾನದಲ್ಲಿ, ಷಷ್ಠಿ=ಷಷ್ಠೀವಿಭಕ್ತಿ, ದೊರೆಕೊಂಡಿರ್ಕುಂ=ಬಂದಿರ್ಪುದು. ॥೧೩೬॥

ಟೀಕೆ.—ಪ್ರಥಮಾರ್ಥ = ಪ್ರಥಮಾವಿಭಕ್ತಿಯ ಅರ್ಥದಲ್ಲಿ, ತೃತೀಯಾರ್ಥ= ತೃತೀಯಾವಿಭಕ್ತಿಯ ಅರ್ಥದಲ್ಲಿ, ಚತುರ್ಥ್ಯರ್ಥದೊಳ್=ಚತುರ್ಥೀವಿಭಕ್ತಿಯ ಅರ್ಥದಲ್ಲಿ, ದ್ವಿತೀಯೆ=ದ್ವಿತೀಯಾವಿಭಕ್ತಿ, ಸ್ವಾರ್ಥಂ=ತನ್ನರ್ಥವುಳ್ಳುದಾಗಿರ್ಪುದು; ತೃತೀಯಾ=ತೃತೀಯಾವಿಭಕ್ತಿಯಿಂದೆ, ಉಕ್ತ=ಹೇೞಲ್ಪಟ್ಟ, ಅರ್ಥದೊಳ್=ಅರ್ಥದಲ್ಲಿ, ಆ ಸಪ್ತಮಿಯೆ=ಆ ಸಪ್ತಮೀವಿಭಕ್ತಿಯೆ, ಸಮರ್ಥಂ=ಸಮರ್ಥವಾಗಿರುವುದು; ಪಂಚಮಿಯೊಳಂ=ಪಂಚಮೀವಿಭಕ್ತಿಯಲ್ಲಿಯುಂ, ತೃತೀಯೆ=ತೃತೀಯಾವಿಭಕ್ತಿ, ಸಮರ್ಥಂ= ಸಮರ್ಥವಾಗಿರ್ಪುದು. ॥ ೧೩೭ ॥

ತೃತೀಯಾರ್ಥದ ದ್ವಿತೀಯೆಗೆ—ದೇವರಂ ಪೂವಿಂದರ್ಚಿಸಿದನೆಂಬಲ್ಲಿ ಪೂವನರ್ಚಿಸಿದಂ ಎಂದಾಯ್ತು.

ಚತುರ್ಥ್ಯರ್ಥದ ದ್ವಿತೀಯೆಗೆ—ಪೊನ್ನಂ ಬಡ್ಡಿಗೆ ಕೊಟ್ಟನೆಂಬಲ್ಲಿ ಪೊನ್ನಂ ಬಡ್ಡಿಯಂ ಕೊಟ್ಟನೆಂದಾಯ್ತು.

ಪಂಚಮ್ಯರ್ಥದ ದ್ವಿತೀಯೆಗೆ—ಮಾಣವಕನತ್ತಣಿಂ ಕಾರ್ಯಮಂ ಬೆಸಗೊಂಡನೆಂಬಲ್ಲಿ ಮಾಣವಕನಂ ಕಾರ್ಯಮಂ ಬೆಸಗೊಂಡನೆಂದಾಯ್ತು.

ತೃತೀಯಾರ್ಥದ ಸಪ್ತಮಿಗೆ—ಕೊಡಲಿಯಿಂ ಕಡಿದನೆಂಬಲ್ಲಿ ಕೊಡಲಿಯೊಳ್ ಕಡಿದನೆಂದಾಯ್ತು. ಗದೆಯಿಂ ಪೊಯ್ದನೆಂಬಲ್ಲಿ ಗದೆಯೊಳ್ ಪೊಯ್ದನೆಂದಾಯ್ತು. ಕಿವಿಯಿಂ ಕೇಳ್ದನೆಂಬಲ್ಲಿ ಕಿವಿಯೊಳ್ ಕೇಳ್ದನೆಂದಾಯ್ತು.

ಪಂಚಮ್ಯರ್ಥದ ತೃತೀಯೆಗೆ—ಕೆಱೆಯತ್ತಣಿಂ ಬಂದನೆಂಬಲ್ಲಿ ಕೆಱೆಯಿಂ ಬಂದನೆಂದಾಯ್ತು. ಕರಿ ಶಿರದತ್ತಣಿಂ ಮುತ್ತೊಕ್ಕುವೆಂಬಲ್ಲಿ ಕರಿ ಶಿರದಿಂ ಮುತ್ತೊಕ್ಕುವೆಂದಾಯ್ತು.

ಮಣಿ॥ ವಿ॥ ಮತ್ತಹಸ್ತಿಗಳ ಮಸ್ತಕದಿಂ ಬಿದಿರಿಂ ಫಣೀಂ।
ದ್ರೋತ್ತಮಾಂಗದಿನಗುರ್ವಿಪ ಷಂದಿಯ ಕೋಱ್ಕಳಿಂ॥
ಪತ್ತುವಿಟ್ಟಗನಿಕಾಯುದೊಳ್ಪೊಕ್ಕೆಳಮುತ್ತನಾ।
ಯ್ವುತ್ತುಮಿರ್ಪ ಶಬರ ಪ್ರಿಯಕಾಮಿನಿಯರ್ಕಳಿಂ॥

ಆಲಿವರಲ್ಗಳುಮಿಂದ್ರಗೋಪಮುಂ ಸೂಸಿದುವಭ್ರದಿಂ. ತಿಳಿಗೊಳದಿಂದೆ ಪಾಱಿದುವು ಹಂಸಕುಳಂ.

**ಸೂತ್ರಂ ||** ಕೃತಿಯುಕ್ತಂ ಷಷ್ಠಿಯೊಳಂ।
ದ್ವಿತೀಯೆಯೊಳಮಾ ಚತುರ್ಥಿ ಸಪ್ತಮಿಯೊಳ್ ಸಂ॥
ಗತಮಾ ಪ್ರಥಮಾ ಷಷ್ಠೀ।
ಚತುರ್ಥಿಗಳ್ ಪ್ರಥಮೆಯುಂ ದ್ವಿತೀಯೆಯೊಳಕ್ಕುಂ ॥ ೧೩೬ ॥

---

**ಟೀಕೆ.**— ಷಷ್ಠಿಯೊಳಂ = ಷಷ್ಠೀವಿಭಕ್ತಿಯಲ್ಲಿಯುಂ, ದ್ವಿತೀಯೆಯೊಳಂ= ದ್ವಿತೀಯಾವಿಭಕ್ತಿಯಲ್ಲಿಯುಂ, ಆ ಚತುರ್ಥಿ= ಆ ಪ್ರಸಿದ್ಧವಾದ ಚತುರ್ಥೀವಿಭಕ್ತಿ, ಕೃತಿಯುಕ್ತಂ=ಕಾವ್ಯಯುಕ್ತಂ ಅಪ್ಪುದು; ಸಪ್ತಮಿಯೊಳ್=ಸಪ್ತಮೀವಿಭಕ್ತಿಯಲ್ಲಿಯೆ, ಆ ಪ್ರಥಮಾ ಷಷ್ಠೀ ಚತುರ್ಥಿಗಳ್=ಆ ಪ್ರಥಮಾವಿಭಕ್ತಿ ಷಷ್ಠೀವಿಭಕ್ತಿ ಚತುರ್ಥೀವಿಭಕ್ತಿಗಳ್, ಸಂಗತಂ=ಸಂಗತಂಗಳ್ ಅಪ್ಪುವು; ದ್ವಿತೀಯೆಯೊಳ್ = ದ್ವಿತೀಯಾವಿಭಕ್ತಿಯಲ್ಲಿ, ಪ್ರಥಮೆಯುಂ=ಪ್ರಥಮಾವಿಭಕ್ತಿಯುಂ, ಅಕ್ಕುಂ=ಅಪ್ಪುದು. ॥ ೧೩೬ ॥

**ವೃತ್ತಿ.**—ಷಷ್ಠಿಯೊಳಂ ದ್ವಿತೀಯೆಯೊಳಂ ಚತುರ್ಥಿಯಕ್ಕುಂ; ಸಪ್ತಮಿ ಯೊಳ್ ಪ್ರಥಮೆ ಷಷ್ಠಿ ಚತುರ್ಥಿಯಕ್ಕುಂ; ದ್ವಿತೀಯೆಯೊಳ್ ಪ್ರಥಮೆಯಕ್ಕುಂ.

**ಪ್ರಯೋಗಂ.**—ಷಷ್ಠಿಯ ಚತುರ್ಥಿಗೆ—ನಾಡೊಡೆಯಂ, ನಾಟ್ಕೊಡೆ ಯಂ; ಕೊಡೆಯೊಡೆಯಂ, ಕೊಡೆಗೊಡೆಯಂ; ಎರ್ದೆಯಾಣ್ಮಂ, ಎರ್ದೆಗಾಣ್ಮಂ. ಎರ್ದೆಗಾಣ್ಮನೆಂನರಸನೆಲ್ಲಿದನೋಲಲಿತಾಂಗವಲ್ಲಭಂ.

ದ್ವಿತೀಯೆಯ ಚತುರ್ಥಿಗೆ—ಶಿಷ್ಯನಂ ಕಲಿಸಿದನೆಂಬಲ್ಲಿ ಶಿಷ್ಯಂಗೆ ಕಲಿಸಿದಂ. ಆಕೆಯಂ ತಿಳಿಪಿದನೆಂಬಲ್ಲಿ ಆಕೆಗೆ ತಿಳಿಪಿದಂ.

ಸಪ್ತಮಿಯ ಪ್ರಥಮೆಗೆ—ಒಂದು ದಿವಸದೊಳ್ ಬಂದನೆಂಬಲ್ಲಿ ಒಂದು ದಿವಸಂ ಬಂದಂ.

ಸಪ್ತಮಿಯ ಷಷ್ಠಿಗೆ—ಚಾಗಿಗಳೊಳ್ ಬಲ್ಲಹಂ, ಚಾಗಿಗಳ ಬಲ್ಲಹಂ; ಈವರೊಳ್ದೇವಂ, ಈವರ ದೇವಂ; ರಸಿಕರೊಳ್ ಚಕ್ರವರ್ತಿ, ರಸಿಕರ ಚಕ್ರವರ್ತಿ.

ಸಪ್ತಮಿಯ ಚತುರ್ಥಿಗೆ— ತಾವರೆಯೊಳ್ ಪುಟ್ಟಿದನೆಂಬಲ್ಲಿ ತಾವರೆಗೆ ಪುಟ್ಟಿದಂ; ಬಿಂಬದೊಳ್ ತೇಜಂ, ಬಿಂಬಕ್ಕೆ ತೇಜಂ; ಅಲರೊಳ್ ಬೆಳ್ಪೆಂಬಲ್ಲಿ ಅಲರ್ಗೆ ಬೆಳ್ಪು.

ದ್ವಿತೀಯೆಯ ಪ್ರಥಮೆಗೆ—ಒಂದು ವರ್ಷಮನಿರ್ದಂ, ಒಂದು ವರ್ಷ ಮಿರ್ದಂ.

ಇಂತು ನುಡಿವ ಬಿನ್ನಣದಿಂ ಕಾರಕಮಂ ನಿಯತಾರ್ಥಮೆಂದಱಿವುದು.

**ಸೂತ್ರಂ ॥** ಅಕ್ಕುಂ ಜಾತಿಯೊಳೇಕ ।
ತ್ವಕ್ಕೆ ಬಹುತ್ವಂ ಬಹುತ್ವದೆಡೆಗೇಕತ್ವಂ ॥
ಪೊಕ್ಕು ವಿಶೇಷಣಮಕ್ಕುಂ ।
ಮೊಕ್ಕಳಮಾ ಜಾತಿಯಲ್ಲದಲ್ಲಿಯುಮೆಂಬರ್ ॥ ೧೩೭ ॥

---

**ಟೀಕೆ.**—ಜಾತಿಯೊಳ್=ಜಾತಿಯಲ್ಲಿ; ಏಕತ್ವಕ್ಕೆ=ಏಕವಚನಕ್ಕೆ; ಬಹುತ್ವಂ= ಕ್ರಿಯಾಪದದ ಬಹುವಚನಂ, ಅಕ್ಕುಂ = ಅಪ್ಪುದು; ಮೊಕ್ಕಳಂ = ವೆಗ್ಗಳವಾಗಿ, ಆ ಜಾತಿಯಲ್ಲದಲ್ಲಿಯುಂ=ಆ ಜಾತಿಯಲ್ಲದ ಸ್ಥಾನದಲ್ಲಿಯುಂ, ಬಹುತ್ವದ=ಬಹುವಚನದ, ಎಡೆಗೆ=ಸ್ಥಾನಕ್ಕೆ, ಏಕತ್ವಂ=ಏಕವಚನಂ, ಪೊಕ್ಕು = ಪ್ರವೇಶವಾಗಿ, ವಿಶೇಷಣಂ, ಅಕ್ಕುಂ=ಅಪ್ಪುದು, ಎಂಬರ್=ಪೇೞ್ವರ್. ॥ ೧೩೭ ॥

**ವೃತ್ತಿ.**—ಜಾತಿಯೊಳೇಕವಚನವಿರ್ದುಂ ಬಹುವಚನಮುಂ ಪೇೞ್ವುದು; ಅದುಕಾರಣಂ ಕ್ರಿಯಾಪದಂ ಬಹುವಚನಮಾಗಲಾರ್ಪುದು. ಜಾತಿಯಲ್ಲದಲ್ಲಿಯುಂ ಬಹುವಚನಕ್ಕೇಕವಚನಂ ವಿಶೇಷಣಮಾಗಿ ಪೊಕ್ಕು ಬಹುವಚನಮುಂ ಪೇೞ್ವುದು.

**ಪ್ರಯೋಗಂ.**—ಜಾತಿಗೆ—ಆನೆ ನೂಂಕಿದುವು (ಆನೆಗಳ್ನೂಂಕಿದವು). ಕುದುರೆ ಏಱಿದುವು (ಕುದುರೆಗಳೇಱಿದುವು). ಕಾಲಾಳ್ಕವಿದುವು (ಕಾಲಾಳ್ಗಳ್ ಕವಿದುವು).

ಜಾತಿಯಲ್ಲದಲ್ಲಿಗೆ–ಮಹೇಂದ್ರ ಮಹೈಶ್ವರ್ಯಂಗಳಿವೆಲ್ಲಮಧ್ರುವಂ (ಇವೆಲ್ಲ ಮಧ್ರುವಂಗಳ್.) ಮನಂ ಸಂಚಲಮಾದುವು (ಮನಂಗಳ್ ಸಂಚಲಂಗಳಾದುವು).

'ತ್ರಿಭುವನ'ಮುಂ ಪೇೞ್ದೊಡಂ ಕನ್ನಡದೊಳ್ 'ತ್ರಿಭುವನಂಗಳ್' ಎನಲಕ್ಕುಂ.

**ಸೂತ್ರಂ** ॥ ಏಕತೆಯೆ ತನಗೆ ಬಹುತೆಯ।
ನಾಕರಿಸದು ಜಾತಿ ತಾಂ ವಿಶೇಷಣಮುಖದಿಂ ॥
ದಾ ಕಾರಕಮೇಕತ್ವಮ।
ನೇಕತ್ವಮನಾ ಕ್ರಿಯಾಪದಂ ಪಡೆಯಲೊಡಂ ॥ ೧೩೮ ॥

**ವೃತ್ತಿ.**—ವಿಶೇಷಣಮಾಗಿ ಕಾರಕಮೇಕವಚನದೊಳಿರ್ದೊಡಂ ಕ್ರಿಯಾಪದಮೇಕವಚನದೊಳಿರ್ದೊಡಂ ವಿಶೇಷ್ಯಮಪ್ಪ ಜಾತಿಗೇಕತ್ವಮಲ್ಲದೆ ಬಹುತ್ವಮಿಲ್ಲ.

**ಪ್ರಯೋಗಂ.**—ಕಾರಕಕ್ಕೆ—ಇಂತುಟಾನೆ; ಇಂತುಟು ಕುದುರೆ.

ಕ್ರಿಯೆಗೆ— ನಡೆದುದು ಹಂಸೆ; ಕೇಗಿದುದು ಸೋಗೆ; ಉಲಿದುದು ಕೋಗಿಲೆ; ಪಾಡಿದುದು ತುಂಬಿ.

---

**ಟೀಕೆ.**—ವಿಶೇಷಣಮುಖದಿಂದೆ=ವಿಶೇಷಣದ ಮುಖದಿಂದೆ, ಆ ಕಾರಕಂ=ಆ ಪ್ರಸಿದ್ಧವಾದ ಕಾರಕಪದಂ, ಏಕತ್ವಮುಂ=ಏಕವಚನಮುಂ, ಪಡೆಯಲೊಡಂ=ಪಡೆಯಲೊಡನೆ, ಆ ಕ್ರಿಯಾಪದಂ=ಆ ಪ್ರಸಿದ್ಧವಾದ ಕ್ರಿಯಾಪದಂ, ಏಕತ್ವಮುಂ=ಏಕವಚನಮುಂ, ಪಡೆಯಲೊಡಂ=ಪಡೆಯಲೊಡನೆ, ಜಾತಿ=ವಿಶೇಷ್ಯವಾದ ಜಾತಿ, ತಾಂ, ಏಕತೆಯೆ=ಏಕವಚನವೆ ಅಪ್ಪುದು; ತನಗೆ = ವಿಶೇಷ್ಯವಾದ ಜಾತಿ ತನಗೆ; ಬಹುತೆಯುಂ= ಬಹುವಚನಮುಂ; ಆಕರಿಸದು=ಅಂಗೀಕರಿಸದು. ॥ ೧೩೮ ॥

ಅದು ಇದು ಎಂಬೇಕವಚನಕ್ಕೆ ಆ ಈ ಎಂಬಾದೇಶವಾಗೆ ಜಾತಿಯ ಏಕವಚನಕ್ಕೆ ಬಹುಳತೆಯಿಂ ಬಹುವಚನಮುಂಟು—ಆಯೆರಲೆ ಪೋದುವು. ಈ ಪುಲ್ಲೆ ಬಂದುವು.

**ಸೂತ್ರಂ** ॥ ನೀನಱಿ ಸಂಖ್ಯೇಯದ ಸಂ।
ಖ್ಯಾನದ ದೊರೆವೆತ್ತ ಭಾವದೇಕತೆ ಬಹುತಾ॥
ಧೀನಂ ವಿಶೇಷಣಂ ಬಹು।
ತಾನತವೆ ವಿಶೇಷ್ಯಮೇಕವಚನಮೆಯಕ್ಕುಂ ॥ ೧೪೯ ॥

**ವೃತ್ತಿ.**—ಸಂಖ್ಯಾವಸ್ತುವಿನೊಳಂ ಸಂಖ್ಯೆಯೊಳಂ ಭಾವದೊಳಂ ನೆಲಸಿದೇಕವಚನಂ ಬಹುವಚನಮಂ ಪೇೞ್ವುದು; ವಿಶೇಷಣಂ ಬಹುವಚನಮಾಗಲೊಡಂ ವಿಶೇಷ್ಯಮೇಕವಚನಮಾಗಲಕ್ಕುಂ.

**ಪ್ರಯೋಗಂ.**— ಸಂಖ್ಯೇಯಕ್ಕೆ — ಪತ್ತು ದೆಸೆ, ಪತ್ತು ದೆಸೆಗಳ್; ಮೂಲೋಕಂ, ಮೂಲೋಕಂಗಳ್; ನಾಲ್ಕು ಯುಗಂ, ನಾಲ್ಕು ಯುಗಂಗಳ್.

ಸಂಖ್ಯೆಗೆ—ಒಂದು ನಾಲ್ಕು, ಒಂದು ನಾಲ್ಕುಗಳ್; ಎರಡೈದು, ಎರಡೈದುಗಳ್; ಪತ್ತು ನೂಱು, ಪತ್ತು ನೂಱುಗಳ್.

ಭಾವಕ್ಕೆ—ಕಣ್ಗಳ ಕೂರ್ಪು, ಕಣ್ಗಳ ಕೂರ್ಪುಗಳ್; ಪೂಗಳ ಬೆಳ್ಪು, ಪೂಗಳ ಬೆಳ್ಪುಗಳ್; ಕುರುಳ್ಗಳ ಕರ್ಪು, ಕುರುಳ್ಗಳ ಕರ್ಪುಗಳ್.

ವಿಶೇಷ್ಯದೇಕವಚನಕ್ಕೆ—ನೇರಿದುವು ಬೆರಲ್; ತೋರಿದುವು ಜಘನಂ; ಬಟ್ಟಿದುವು ಮೊಲೆ.

**ಸೂತ್ರಂ** ॥ ವಿದಿತ ವಿಶೇಷಣಪದಮುವು।
ಮೊದಲ ವಿಭಕ್ತಿಗಳನಾಂತು ವಾಕ್ಯದ ಮೊದಲೊಳ್ ॥
ಪದವೆತ್ತುವಗ್ರಕಾರಕ।
ಪದದ ವಿಭಕ್ತಿಯನೆ ತಳೆವುವನ್ವಯಮುಖದೊಳ್ ॥ ೧೫೦ ॥

..............................................................................

**ಟೀಕೆ.**—ಸಂಖ್ಯೇಯದ=ಸಂಖ್ಯಾವಸ್ತುಗಳ, ಸಂಖ್ಯಾನದ=ಸಂಖ್ಯಾವಾಚಿಗಳ, ದೊರೆವೆತ್ತ ಭಾವದ=ಪ್ರಸಿದ್ಧಿವಡೆದ ಭಾವದ, ಏಕತೆ=ಏಕವಚನಂ, ಬಹುತಾಧೀನಂ=ಬಹುವಚನದ ಆಧೀನಂ ಅಪ್ಪುದು, ನೀಂ, ಅಱಿ=ತಿಳಿ; ವಿಶೇಷಣಪದಂ, ಬಹುತಾನತವೆ=ಬಹುವಚನದ ಅಧೀನವೆ, ವಿಶೇಷ್ಯಂ=ವಿಶೇಷ್ಯಪದಂ, ಏಕವಚನಮೆ=ಏಕವಚನವೆ, ಅಕ್ಕುಂ=ಅಪ್ಪುದು. ॥ ೧೪೯ ॥

ವೃತ್ತಿ.—ವಿಶೇಷಣಪದಂಗಳ್ ಪ್ರಥಮಾವಿಭಕ್ತಿಯಂ ಪಡೆದು ವಾಕ್ಯದ ಮೊದಲೊಳಿರ್ದು ಅನ್ವಯಿಸುವಲ್ಲಿ ತುದಿಯ ಕಾರಕಪದದ ವಿಭಕ್ತಿಯನೆ ತಳೆವುವು.

ಪ್ರಯೋಗಂ.—

ಕಂ ॥ ವೀರನುದಾರಂ ಶುಚಿ ಗಂ ।
ಭೀರಂ ನಯಶಾಲಿ ಕೈದುವೊತ್ತರದೇವಂ ॥
ಗಾರೆಜಗರ್ ನೃಪತುಂಗಂಗೆ ।

ಇಲ್ಲಿ— ವೀರಂಗೆ ಉದಾರಂಗೆ ಶುಚಿಗೆ ಗಂಭೀರಂಗೆ ನಯಶಾಲಿಗೆ ಕೈದುವೊತ್ತರದೇವಂಗೆ ನೃಪತುಂಗಂಗೆ ಆರೆಜಗರೆಂಬುದನ್ವಯಂ.

ಸಂಗತಸತ್ವಂ ಕುರುರಾಜಂ ಕರ್ಣಂಗೆ— ಎಂಬಲ್ಲಿ ಸಂಗತಸತ್ವಂಗೆ ಕುರು ರಾಜಂಗೆ ಕರ್ಣಂಗೆ—ಎಂದನ್ವಯಂ.

ಸೂತ್ರಂ ॥ ಕೂಡಿ ನುಡಿವೆಡೆಯೊಳೆಂದುಂ ।
ಕೂಡದು ಲಿಂಗತ್ರಯಕ್ಕೆ ತರತಮಭಾವಂ ॥
ನೀಡುಂ ವಾಕ್ಯದ ಕಡೆಯೊಳ್ ।
ಕೂಡಿರ್ದುದದಾವುದದುವೆ ಮುಖ್ಯಮೆನಿಕ್ಕುಂ ॥ ೧೪೧ ॥

ವೃತ್ತಿ.—ಕೂಡಿ ನುಡಿವೆಡೆಯೊಳ್ ಲಿಂಗತ್ರಯಕ್ಕೆ ತಮ್ಮೊಳ್ ಮುಖ್ಯ ತೆಯುಮಮುಖ್ಯತೆಯುಮಿಲ್ಲ; ವಾಕ್ಯದ ಕಡೆಯೊಳಾವ ಲಿಂಗಮಿರ್ದೊಡದುವೆ ಮುಖ್ಯಮಕ್ಕುಂ.

---

ಟೀಕೆ.—ವಿದಿತ = ಪ್ರಸಿದ್ಧವಾದ, ವಿಶೇಷಣಪದಂ = ವಿಶೇಷಣ ಪದಂಗಳ್, ಮೊದಲ ವಿಭಕ್ತಿಗಳಂ=ಪ್ರಥಮಾವಿಭಕ್ತಿಗಳಂ, ಆಂತು=ತಾಳ್ದು, ವಾಕ್ಯದ=ವಾಕ್ಯಂಗಳ, ಮೊದಲೊಳ್=ಆದಿಯಲ್ಲಿ, ಪದವೆತ್ತು=ಪದವಾಗಿ, ಉವು=ಆ ಪ್ರಥಮಾಂತವಾದ ಪದಂ ಗಳ್, ಅನ್ವಯಮುಖದೊಳ್=ಅರ್ಥದ ಮುಖದಲ್ಲಿ, ಅಗ್ರ=ತುದಿಯ, ಕಾರಕಪದದ= ಕಾರಕವಾದ ಪದದ, ವಿಭಕ್ತಿಯನೆ=ವಿಭಕ್ತಿಯರ್ಥವನೆ, ತಳೆವುವು=ಧರಿಸುವುವು. ॥೧೪೦॥

ಟೀಕೆ.—ಕೂಡಿ=ಒಂದಾಗಿ, ನುಡಿವೆಡೆಯೊಳ್=ಪೇಳ್ವ ಸ್ಥಾನದಲ್ಲಿ, ಎಂದುಂ= ಆವಾಗಳುಂ, ಲಿಂಗತ್ರಯಕ್ಕೆ=ಸ್ತ್ರೀಪುಂನಪುಂಸಕಂಗಳೆಂಬ ಲಿಂಗತ್ರಯಕ್ಕೆ, ತರತಮ ಭಾವಂ=ತಾರತಮ್ಯಂ, ಕೂಡದು=ಪೊರ್ದುಗೆಯಾಗದು; ನೀಡುಂ= ವಿಶೇಷವಾಗಿ, ವಾಕ್ಯದ=ವಾಕ್ಯಂಗಳ, ಕಡೆಯೊಳ್=ಅಂತ್ಯದಲ್ಲಿ, ಕೂಡಿರ್ದುದು=ಪೊರ್ದುಗೆಯಾಗಿ ರ್ದುದು, ಆದು, ಆವುದು, ಅದುವೆ=ಆ ಲಿಂಗವೆ, ಮುಖ್ಯಂ=ವಿಶೇಷಂ, ಎನಿಕ್ಕುಂ= ಎನಿಸುವುದು. ॥ ೧೪೧ ॥

**ಪ್ರಯೋಗಂ.**—ಸೇನೆಯುಮರಸಿಯುಮರಸನುಂ ಬಂದರ್. ಆನೆಯುಮರಸನುಮರಸಿಯುಂ ಬಂದರ್. ಅರಸನುಮರಸಿಯುಂ ಬಂದರ್. ಅರಸನುಂ ಅರಸಿಯುಂ ಚತುರಂಗಬಲಮುಂ ಬಂದುವು.

**ಸೂತ್ರಂ** ॥ ವ್ಯವಹರಿಸುವಿನಂ ಪ್ರಥಮೈ ।
ಕವಚನಮಂ ಪಲವನೋದಿ ವಾಕ್ಯದ ನಿರ್ವಾ ॥
ಹವನಳವಡಿಪೆಡೆಯೊಳ್ ಪುಗಿ ।
ಸುವರ್ ಕ್ರಿಯಾನೇಕವಚನಮಂ ಮಾರ್ಗವಿದರ್ ॥ ೧೪೨ ॥

**ವೃತ್ತಿ.**—ಪ್ರಥಮೈಕವಚನಮಂ ಮೊದಲೊಳ್ ಪಲವಂ ಪೇೞ್ದು ವಾಕ್ಯನಿರ್ವಾಹದೊಳ್ ಕ್ರಿಯಾಬಹುವಚನಮಂ ಪುಗಿಸುವರ್.

**ಪ್ರಯೋಗಂ.**—

ಮ ॥ ಅವತಂಸೋತ್ಪಲ ತಾಡನಂ ಕನಕ ಕಾಂಚೀ ಬಂಧನಂ ನೂಪುರಾ ।
ರವ ಝುಂಕಾರಿತ ಚಾರು ವಾಮ ಚರಣಾಘಾತಂ ಚಲದ್ಭ್ರೂಲತಾ ॥
ಗ್ರ ವಿಭಾಗೋತ್ಕಟ ತರ್ಜನಂ ತರಳತಾ ತಾಮ್ರಾಧರಂ ಚಕ್ರಿಗಿ ।
ತ್ತುವಲಂಪಂ ಪ್ರಣಯ ಪ್ರಕೋಪ ಸಮಯ ಪ್ರಾರಂಭದೊಳ್ ಕಾಂತೆಯಾ ॥

'ಚಕ್ರಿಗಿತ್ತುವು ಅಲಂಪಂ' ಎಂಬಲ್ಲಿ ಇವೆಲ್ಲಮೆಂಬುದಧ್ಯಾಹಾರಮಾಗಿ ಬಹುವಚನಂ ಸಲ್ವುದು.

**ಸೂತ್ರಂ** ॥ ಅವನವಳದೆಂಬಿವಿರ್ದಂ ।
ತೆವೊಲಿರ್ದಪುವಾವನಾವಳಾವುದು ತಾನೆಂ ॥
ಬಿವವಂ ಪಾರದೆ ನಿಲಲಱಿ ।
ಯವನ್ವಯಂ ತಾಗುವಲ್ಲಿ ವಾಕ್ಕೋವಿದರಿಂ ॥ ೧೪೩ ॥

---

**ಟೀಕೆ.**—ಪ್ರಥಮೈಕವಚನಮಂ=ಪ್ರಥಮಾವಿಭಕ್ತಿಯ ಏಕವಚನಮಂ, ಪಲವಂ=ಹಲವಂ, ಓದಿ=ಹೇೞ, ವ್ಯವಹರಿಸುವಿನಂ=ವ್ಯವಹರಿಸುವಾಗಳ್, ವಾಕ್ಯದ=ವಾಕ್ಯಂಗಳ, ನಿರ್ವಾಹವಂ=ಪೂರ್ಣತೆಯಂ, ಅಳವಡಿಪೆಡೆಯೊಳ್= ಅಳವಡಿಸುವ ಸ್ಥಾನದಲ್ಲಿ, ಕ್ರಿಯಾ=ಕ್ರಿಯಾಪದದ, ಅನೇಕವಚನಮಂ=ಬಹುವಚನಮಂ, ಮಾರ್ಗವಿದರ್ = ವೈಯಾಕರಣ ಮಾರ್ಗವಿದರ್, ಪುಗಿಸುವರ್ = ಪ್ರವೇಶಮಂ ಮಾಡುವರ್. ॥ ೧೪೨ ॥

**ಟೀಕೆ.**—ವಾಕ್ಕೋವಿದರಿಂ=ವಾಕ್ಪ್ರೌಢರಿಂದೆ, ಅನ್ವಯಂ, ತಾಗುವಲ್ಲಿ=ಸಂಘಟನೆಯಾಗುವಲ್ಲಿ, ಅವಂ= ಅವನೆಂದು, ಅವಳ್ =ಅವಳೆಂದು, ಅದು=ಅದೆಂದು, ಎಂಬಿವು=ಎಂಬೀಪದಂಗಳ್, ಇರ್ದಂತೆವೊಲ್=ಇರ್ದ ಹಾಗೆ, ಇರ್ದಪುವು=ಇರು

**ವೃತ್ತಿ.**—ಅವಂ ಅವಳ್ ಅದು ಎಂಬಿವು ಸ್ವತಂತ್ರಂಗಳ್; ಆವಂ ಆವಳ್ ಆವುದು ತಾನೆಂಬಿವು ಅವಂ ಅವಳ್ ಅದು ಎಂಬಿವಂ ಪಾರದೆ ಅನ್ವಯಿಸಿ ಕೊಳಲಱಿಯವಾಗಿ, ಪರತಂತ್ರಂಗಳ್.

**ಪ್ರಯೋಗಂ.**—ಸ್ವತಂತ್ರಾನ್ವಯಕ್ಕೆ—ಪೊನ್ನುಳ್ಳವನೆ ಕುಲೀನನೆಂದೊಡೆ, ಆವಂ ಪೊನ್ನುಳ್ಳನವನೆ ಕುಲೀನನೆನವೇಡ. ಸೊಬಗುಳ್ಳವಳೆ ಪೆಣ್ಣೆಂದೊಡೆ, ಆವಳ್ ಸೊಬಗುಳ್ಳಳವಳೆ ಪೆಣ್ಣೆನವೇಡ. ಅದೆ ರೂಢಿಯೆಂದೊಡೆ, ಆವುದು ರೂಢಿಯನುಳ್ಳುದದುವೆ ಲೇಸೆನವೇಡ.

ಪರತಂತ್ರಾನ್ವಯಕ್ಕೆ— ಆವನಧಿಕಪುಣ್ಯನವನೆ ಸೇವ್ಯಂ. ಆವಳ್ ಪತಿವ್ರತೆಯವಳೆ ಮಾನ್ಯೆ. ಆವುದು ಚೆಲ್ವುದುದದುವೆ ದರ್ಶನೀಯಂ. ತಾನವಂ ಚದುರಂ, ತಾನವಳ್ ಚದುರೆ, ತಾನದು ಪಿರಿದು. ಇದು ವಾಕ್ಯಾನ್ವಯಂ.

**ಸೂತ್ರಂ ॥** ಯುಗಳಾರ್ಥದ ಬಹುವಚನ ।
ಕ್ಕೊಗೆತಂದಾವಿಷ್ಟಲಿಂಗದೆಡೆಗೇಕತ್ವಂ ॥
ನೆಗೞ್ಗುಂ ಕ್ರಿಯಾವಿಶೇಷಣ ।
ಮಗಲದೆ ನಿಂದೆಡೆಗಮಱಿವರಿಂದೇಕತ್ವಂ ॥ ೧೪೪ ॥

**ವೃತ್ತಿ.**— ಯುಗಳಾರ್ಥದೊಳ್ ವರ್ತಿಸುವ ಬಹುವಚನಕ್ಕ [1]ಮಾವಿಷ್ಟಲಿಂಗಕ್ಕಂ ಕ್ರಿಯಾವಿಶೇಷಣಕ್ಕಂ ಬಲ್ಲರಿಂದೇಕವಚನಮಕ್ಕುಂ.

**ಪ್ರಯೋಗಂ.**—ಪದಯುಗಳಂಗಳ್ಗೆ—ಪದಯುಗಂ.

ಆವಿಷ್ಟಲಿಂಗಕ್ಕೆ—ವೇದಂಗಳ್ ಪ್ರಮಾಣಂ. ಪ್ರತಿಭೆಯುಮಭ್ಯಾಸಮುಂ ವಿದ್ವತ್ಸೇವೆಯುಂ ಕಾವ್ಯಪರಿಚಯಮುಂ ಕವಿತೆಗೆ ಕಾರಣಂ.

.................................................................................

ತಿರ್ಪುವು; ಆವಂ=ಆವನೆಂದುಂ, ಆವಳ್=ಆವಳೆಂದುಂ, ಆವುದು=ಆವುದೆಂದುಂ, ತಾಂ=ತಾನೆಂದುಂ, ಎಂಬಿವು=ಎಂಬೀಪದಂಗಳ್, ಅವಂ=ಆ ಪದಂಗಳಂ, ಪಾರದೆ=ಬಯಸದೆ, ನಿಲಲಱಿಯವು=ಇರಲಱಿಯವು. ॥ ೧೪೩ ॥

**ಟೀಕೆ.**—ಯುಗಳಾರ್ಥದ=ಎರಡು ವಸ್ತುವಿನರ್ಥದ, ಬಹುವಚನಕ್ಕೆ, ಒಗೆತಂದ=ಹುಟ್ಟಿ ಬಂದ, ಆವಿಷ್ಟಲಿಂಗದ= ಆವಿಷ್ಟವೆಂಬ ಲಿಂಗದ, ಎಡೆಗೆ=ಸ್ಥಾನಕ್ಕೆ, ಏಕತ್ವಂ=ಏಕವಚನಂ, ನೆಗೞ್ಗುಂ=ಬರ್ಪುದು ; ಕ್ರಿಯಾವಿಶೇಷಣಂ, ಅಗಲದೆ=ತೊಲಗದೆ, ನಿಂದೆಡೆಗಂ= ನೆಲೆಗೊಂಡ ಸ್ಥಾನಕ್ಕೆಯುಂ, ಅಱಿವರಿಂದೆ=ಬಲ್ಲವರಿಂದೆ, ಏಕತ್ವಂ=ಏಕವಚನಂ ಬರ್ಪುದು. ॥ ೧೪೪ ॥

---

1. ಆವಿಷ್ಟಲಿಂಗಮೆಂದು ವಿಧೇಯ ವಿಶೇಷಣಂ.

ಕ್ರಿಯಾವಿಶೇಷಣಕ್ಕೆ—ಏನೆಂಬ ಪೆಂಪೊ! (ಎಂದರೆ) ಎಂತಹವರ್ಗಳೆಂಬ ಪೆರ್ಮೆಯೊ! (ಎಂಬಲ್ಲಿ) 'ಎಂಬ' ಎಂಬೀ ಕ್ರಿಯೆಗೆ 'ಏನ್' ಎಂಬ ಕಾರಕಂ ವಿಶೇಷಣವಾಗಿ ಬಹುವಚನಮಾಯ್ತು.

ಕಂ॥ ಏನೆಂಬ ಪೆಂಪೊ ಮನುವುಂ ।
ತಾನುಂ ಸಚ್ಚರಿತರಮರಕುಜಮುಂ ತಾನುಂ ॥
ದಾನಿಗಳಂಭೋನಿಧಿಯುಂ ।
ತಾನುಂ ಗಂಭೀರರೆನಿಪನುದಯಾದಿತ್ಯಂ ॥

ತಿಬ್ಬಂ ಮಾಡಿದಂ= ತಿಬ್ಬವೆಹಗಹುದಹಗೆ ಮಾಡಿದಂ. ದೋಷರಹಿತಂ ಪೇೞ್ದಂ= ದೋಷರಹಿತವೆಹಗಹುದಹಗೆಪೇೞ್ದಂ. ಇದೀಗ ಕ್ರಿಯಾವಿಶೇಷಣಂ.

ಸೂತ್ರಂ ॥ ಸಾರಮದಧ್ಯಾರೋಪಂ ।
ಕಾರಕಕಂ ಕ್ರಿಯೆಗಮಗಲೆ ನೇಯದ ದೋಷಂ ॥
ಧೀರರ್ಕಳಿಂ ವಿಶಂಕೆಯೆ ।
ಕಾರಕ್ಕಂ ಪೇೞ್ವುದಾ ಸಮುಚ್ಚಯದುಮುಗಂ ॥ ೧೪೫ ॥

ವೃತ್ತಿ.—ಕಾರಕಕ್ಕಂ ಕ್ರಿಯೆಗಂ ನೇಯದ ದೋಷಮಿಲ್ಲದಂತಧ್ಯಾರೋಪಮಂ ಮಾೞ್ಪುದು; ವಿಶಂಕೆಯ ಎತ್ವಕ್ಕೆಯುಂ ಸಮುಚ್ಚಯದುಮುವಿಂಗಂ ಅಧ್ಯಾರೋಪಮುಂಟು. ತಾಂ ಮಾಡಿದಧ್ಯಾರೋಪಮಸಮರ್ಥಮಾಗೆ ಮತ್ತೆ ಕೆಲವರ್ಕೆ ಪತ್ತುವೊಡದು ನೇಯದ ದೋಷಂ.

ಪ್ರಯೋಗಂ.—ನೇಯಕ್ಕೆ—

ಕಂ॥ ಆರಕ್ತಮಾಗಿ ನೇಱಲ ।
ದೋರೆಯನನುಕರಿಪುದಾದುದಾಗಸಮೆನೆ ಸಂ ॥
ಧ್ಯಾರುಚಿಯಿನಕ್ಕುಮೆಂದವ ।
ಧಾರಿಸಿ ನೆಱೆಯಱಿದುಕೊಳ್ವುದಿದು ನೇಯಾರ್ಥಂ ॥

---

ಟೀಕೆ.—ಕಾರಕಕಂ= ಕಾರಕಕ್ಕೆಯುಂ, ಕ್ರಿಯೆಗಂ= ಕ್ರಿಯೆಗೆಯುಂ, ಅಧ್ಯಾರೋಪಂ= ಅಧ್ಯಾಹಾರಂ, ಅದು, ಸಾರಂ= ಶ್ರೇಷ್ಠವಾಗಿರ್ಪುದು; ಅಗಲೆ= ಹೊಂದುಗೆಯಾಗದಿರೆ, ನೇಯದ ದೋಷಂ= ನೇಯದ ದೋಷಂ ಬರ್ಪುದು; ಧೀರರ್ಕಳಿಂ= ವಿದ್ವಾಂಸರಿಂದೆ, ವಿಶಂಕೆಯ= ವಿಶಂಕಾರ್ಥದ, ಎಕಾರಕ್ಕಂ= ಎತ್ವಕ್ಕೆಯುಂ, ಆ ಸಮುಚ್ಚಯದ= ಆ ಸಮುಚ್ಚಯಾರ್ಥದ, ಉಮುಗಂ= ಉಂಕಾರಕ್ಕೆಯುಂ, ಪೇೞ್ವುದು= ಅಧ್ಯಾಹಾರಮಂ ಪೇೞ್ವುದು. ॥ ೧೪೫ ॥

ಸಂಧ್ಯಾರುಚಿಯಿನೆಂದು ಬಗೆವುದು ನೇಯಂ, ಕೆಂಧೂಳಿಯಿಂದಾಗಸಂ ಕೆಂಪಾದುದಾಗಿ.

ಕಾರಕಕ್ಕೆ—ಏಕೆ ನಿರ್ವಹಣಕ್ಕೆ ಸಲ್ಗುವೊ ಪೂಣ್ದೊಡಂ ಕೃತಿಬಂಧಮಂ ? — ಎಂಬಲ್ಲಿ ಕೃತಿಬಂಧಮೆಂಬುದಧ್ಯಾಹಾರ್ಯ೦. ಕರ್ಣನುಂ ದಾನಿಮೇಣೀತನುಮೆಂಬಲ್ಲಿ ದಾನಿಯೆಂಬುದಧ್ಯಾರೋಪಂ.

ಕ್ರಿಯೆಗೆ—ಪುರುಷೋತ್ತಮಂ ಮನುಷ್ಯಮಾತ್ರಮೆ ಎನೆ, ಅಲ್ಲಮೆಂಬುದಧ್ಯಾಹಾರ್ಯ೦. ಧೃತರಾಷ್ಟ್ರಂ ನುಡಿದಾರ್ತನೆ ಹರಿ ಭರಂಗೈದಾರ್ತನೆಯೆಂದೊಡೆ ಆಱನೆಂಬುದಧ್ಯಾಹಾರ್ಯ೦.

ವಿಶಂಕೆಯ ಎತ್ವಕ್ಕೆ—ಉಱಿಮಂಜೆಮೆ? ಬೆರ್ಚೆಮೆ? ಬೆಸಕೆಱಗೆಮೆ? ದೇವ! ಎಂಬಲ್ಲಿ ಉಱಿಮೆಯೆಂಬೆತ್ವಮಧ್ಯಾಹಾರ್ಯ೦.

ಸಮುಚ್ಚಯದುಮುವಿಂಗೆ—ಆಯುಂ ಸಿರಿ ತಾಯುಂ ತಂದೆ ಕಣ್ಣುಂ ಗತಿಯೆನಿಸಿದಪಂ ಸಿಂಹಸೇನಕ್ಷಿತೀಶನೆಂಬಲ್ಲಿ ಸಮುಚ್ಚಯದುಮ್ ಅಧ್ಯಾಹಾರ್ಯ೦.

ವಾಕ್ಯದೀಪಕಂ ಪ್ರತ್ಯೇಕಸಂಬಂಧಂ—ಆತನುಮವನುಂ ಬಂದನೆಂಬಲ್ಲಿ ಆತನುಂ ಬಂದಂ, ಅವನುಂ ಬಂದನೆಂದು ಮಾಟ್ಪುದು.

ಕಾರಕಮುಖದಿಂ ವಿಭಕ್ತಿ ವಿಪರಿಣಮಿಸುವುದಾಗಿ, ವಿಭಕ್ತಿ ವಿಪರಿಣಾಮಕ್ಕೆ—

ಕಂ ॥ ಕಡುಗಲಿ ಸೆಣಸುವ ಭಟರಾರ್ ।
ಒಡೆಯಂಗತಿಹಿತವರಾರ್ ಧುರಕ್ಕೊದಗುವರಾರ್ ॥
ತೊಡರ್ದೊಡೆ ಭಂಗಂ ಬರ್ಕು೦ ।
ಸಡಗರಮಿದು ಜಯಮೆ ಮೆಱೆವುದಱು ಬೊಪ್ಪಲನಂ ॥

ಕಡುಗಲಿಯೆಂಬಲ್ಲಿ ಆತನೆಂಬ ಪ್ರಥಮೆಯುಂ, ಸೆಣಸುವ ಭಟರಾರ್ ಎಂಬಲ್ಲಿ ಆತನನೆಂಬ ದ್ವಿತೀಯೆಯುಂ, ಒಡೆಯಂಗತಿಹಿತವರಾರ್ ಎಂಬಲ್ಲಿ ಆತನಿಂ ಎಂಬ ತೃತೀಯೆಯುಂ, ಧುರಕ್ಕೊದಗುವರಾರ್ ಎಂಬಲ್ಲಿ ಆತಂಗೆಂಬ ಚತುರ್ಥಿಯುಂ, ತೊಡರ್ದೊಡೆ ಭಂಗಂ ಬರ್ಕುಮೆಂಬಲ್ಲಿ ಆತನತ್ತಣಿಂದೆಂಬ ಪಂಚಮಿಯುಂ, ಸಡಗರಮಿದೆಂಬಲ್ಲಿ ಆತನ ಎಂಬ ಷಷ್ಠಿಯುಂ, ಜಯಮೆ ಮೆಱೆವುದೆಂಬಲ್ಲಿ ಆತನೊಳೆಂಬ ಸಪ್ತಮಿಯುಂ ಈ ತೆಱದಿನಧ್ಯಾರೋಪಿಸಿಕೊಳ್ಪುದು.

**ಸೂತ್ರಂ ॥** ಪೀನಂ ಪ್ರಥಮೆಗೆ ನೀನಾಂ ।
ತಾನೆಂದಱಿ ನಿನಗೆಯೆನಗೆ ತನಗೆಂದು ಚತು ॥
ರ್ಥೀ ನಿರ್ದೇಶಕ್ಕಿತರ ।
ಸ್ಥಾನಕ್ಕಸ್ವರದಿನಿರ್ಪ ನಿನ್ ಎನ್ ತಂಗಳ್ ॥ ೧೪೬ ॥

**ವೃತ್ತಿ.**—ಪಿರಿದುಂ ಪ್ರಥಮೆಗೆ ನೀನ್ ಆನ್ ತಾನ್ ಎಂದಱಿವುದು; ಚತುರ್ಥಿಗೆ ನಿನಗೆ ಎನಗೆ ತನಗೆ ಎಂದಱಿವುದು; ಮಿಕ್ಕೆಡೆಯೊಳ್ ಸ್ವರರಹಿತ ಮಾಗಿ ನಿನ್ ಎನ್ ತನ್ ಎಂದು ಪ್ರಕೃತಿಯಪ್ಪುದು.

**ಪ್ರಯೋಗಂ.**—ವಿಭಕ್ತಿಯೋಗಕ್ಕೆ—ನಿನ್ನಂ, ನಿನ್ನಿಂ, ನಿನ್ನತ್ತಣಿಂ, ನಿನ್ನ, ನಿನ್ನೊಳ್. ನೀನಾರ್ಗಾನಾರ್ಗೆ ತಾನಾರ್ಗಿನ್ನೆನಗುಸಿರಲ್ವೇಡ. ನಿನಗೆನಗೆ ತನಗೆ ತೀರ್ಗುಮೆ ಹನುಮಂತನ ಶಕ್ತಿಸಾಹಸಂ ರಿಪುವಿಜಯಂ.

**ಸೂತ್ರಂ ॥** ನಿನತೆನತು ತನತೆನಿಪ್ಪಿವು ।
ಜನಿಯಿಸುಗುಂ ನಿನ್ನದೆನ್ನದುಂ ತನ್ನದೆನಿ ॥
ಪ್ಪಿನಿತಱೊಳಂ ಮೇಣ್ ದ್ವಿತ್ವದಿ ।
ನನೇಕದೊಳ್ ನತ್ವದೆಡೆಗೆ ಮತ್ವಂ ಬರೆಯುಂ ॥ ೧೪೭ ॥

**ವೃತ್ತಿ.**—ನಿನ್ನದು ಎನ್ನದು ತನ್ನದು ಎಂಬಿವರ್ಕೆ ನಿನತು ಎನತು ತನತು ಎಂದಾದೇಶಮಕ್ಕುಂ; ಮೇಣೆಂಬ ವಿಕಲ್ಪದಿಂದವರ್ಕೆ ದ್ವಿತ್ವಮುಂಟು—ನಿನತ್ತು ಎನತ್ತು ತನತ್ತು—ಎಂದು. ನಿನತು ಎನತು ತನತು—ಎಂಬ ನಕಾರಕ್ಕೆ ಬಹು

---

**ಟೀಕೆ.**—ಇತರ ಸ್ಥಾನಕ್ಕೆ=ಪ್ರಥಮೆ ಚತುರ್ಥಿಯಲ್ಲದುೞಿದ ವಿಭಕ್ತಿಸ್ಥಾನಕ್ಕೆ, ಅಸ್ವರದಿಂ=ವ್ಯಂಜನರೂಪದಿಂದೆ, ಇರ್ಪ ನಿನ್ ಎನ್ ತಂಗಳ್=ಇರ್ಪ ನಿನ್ ಎನ್ ತನ್ ಎಂಬಿವು, ಪೀನಂ=ವಿಶೇಷವಾಗಿ, ಪ್ರಥಮುಗೆ=ಪ್ರಥಮಾವಿಭಕ್ತಿಗೆ, ನೀಂ=ನೀ ನೆಂದು, ಆಂ=ಆನೆಂದು, ತಾಂ=ತಾನೆಂದು, ಅಱಿ=ತಿಳಿ; ಚತುರ್ಥೀನಿರ್ದೇಶಕ್ಕೆ= ಚತುರ್ಥೀವಿಭಕ್ತಿಯ ನಿರ್ದೇಶಕ್ಕೆ, ನಿನಗೆ, ಎನಗೆ, ತನಗೆ ಎಂದು ತಿಳಿ. ॥ ೧೪೬ ॥

**ಟೀಕೆ.**—ನಿನ್ನದು, ಎನ್ನದು, ತನ್ನದು, ಎನಿಪ್ಪ=ಎನಿಸುವ, ಇನಿತಱೊಳಂ=ಇಷ್ಟ ಱಲ್ಲಿಯುಂ, ನಿನತು, ಎನತು, ತನತು, ಎನಿಪ್ಪ=ಎನಿಸುವ, ಇವು=ಈ ಶಬ್ದಂಗಳ್, ಮೇಣ್=ವಿಕಲ್ಪದಿಂದೆ, ದ್ವಿತ್ವದಿಂ=ಒತ್ತಿನೊಡನೆ, ಜನಿಯಿಸುಗುಂ=ಹುಟ್ಟುವುವು; ಅನೇಕದೊಳ್=ಬಹುವಚನದಲ್ಲಿ, ನತ್ವದ=ನಿನ್ನದೆನ್ನದು ತನ್ನದೆಂಬ ನಕಾರದ, ಎಡೆಗೆ= ಸ್ಥಾನಕ್ಕೆ, ಮತ್ವಂ=ನಿಮ್ಮದೆಮ್ಮದು ತಮ್ಮದೆಂದು ಮಕಾರಂ, ಬರೆಯುಂ=ಬಂದೊಡಂ, ವಿಕಲ್ಪದಿಂದೆ, ನಿಮತ್ತು ಎಮತ್ತು ತಮತ್ತು ಎಂದು, ದ್ವಿತ್ವದಿಂ ಹುಟ್ಟುವುದು. ॥೧೪೭॥

ವಚನದೊಳ್ ಮತ್ವಮುಂಟು— ನಿಮತು ಎಮತು ತಮತು; ವಿಕಲ್ಪದಿಂ ದವಱ ದ್ವಿರ್ಭಾವಮುಮುಂಟು—ನಿಮತ್ತು ಎಮತ್ತು ತಮತ್ತು—ಎಂದು.

**ಪ್ರಯೋಗಂ.**—ನಿನತಾದಿಗೆ—ನಿನತು ಜಲವೆನತು ಶಾರ್ಯಂ।
ತನತು ಮಹಾಧೈರ್ಯಮವನಿಪತಿಗೆನೆ......॥

ಇವಱ ದ್ವಿರ್ಭಾವಕ್ಕೆ—ಮುನಿಸಿದು ನಿನತ್ತು ಸೈರಣೆಯೆನತ್ತು ಕೆಳದಿಗೆ ತನತ್ತು ಸಂದಿಸುವೆಸಕಂ.

**ಸೂತ್ರಂ ॥** ಇದಿರೊಳ್ ಸ್ವರಾದಿ ಸಂಖ್ಯೆಗ।
ಳೊದವಿರೆ ನಿಮ್ಮೆಮ್ಮ ತಮ್ಮೆನಿಪ್ಪಿವು ಪಿಂತ॥
ಣ್ಗೊದವಿರೆ ನಡುವಣ್ಗುತುವ।
ಪ್ಪುದಿವಱ ಬಹುವಚನದಲ್ಲಿ ಪುಗಿಸದಿರೊಂದಂ ॥ ೧೪೮ ॥

**ವೃತ್ತಿ.**—ಸ್ವರಾದಿ ಸಂಖ್ಯೆಗಳ್ ಪರಮಾಗೆ ಮೊದಲೊಳ್ ನಿಮ್ಮ ಎಮ್ಮ ತಮ್ಮ ಎಂಬಿವು ಬರೆ ಮಧ್ಯದೊಳುತುವಕ್ಕುಂ. ಒಂದೆಂಬುದದೇಕವಚನಮಾಗೆ ಅದಾಗದು.

**ಪ್ರಯೋಗಂ.**—ನಿಮ್ಮುತ್ತಿರ್ವರುಂ, ಎಮ್ಮುತ್ತೈವರುಂ, ತಮ್ಮುತಱುವರುಂ; ಏೞ್ಬರುಂ, ಎಣ್ಬರುಂ—ಎಂಬಿವರ್ಕಮಂತೆ. ಒಂಬತ್ತೆಂಬುದರ್ಕೆ ಲಕ್ಷಣಮುಂಟಾದೊಡಮುಚ್ಚಾರಣಂ ಸುಭಗಮಲ್ತಾಗಿ ಮಾಣ್ಬುದು.

**ಸೂತ್ರಂ ॥** ಎತ್ತಣದೆಂಬೀ ಶಬ್ದಮು।
ನೆತ್ತಣ್ತೆಂದಿಂತು ಕೂಡಿ ನುಡಿಯಲ್ಕಕ್ಕುಂ॥
ಮತ್ತಾರದೆಂಬುದಂ ವಿಬು।
ಧೋತ್ತಮರಾರ್ತೆಂದು ಕೂಡಿ ನುಡಿಯಲ್ಕಕ್ಕುಂ ॥ ೧೪೯ ॥

---

**ಟೀಕೆ.**—ಇದಿರೊಳ್=ಪರದಲ್ಲಿ, ಸ್ವರಾದಿ ಸಂಖ್ಯೆಗಳ್ = ಸ್ವರಾಕ್ಷರಂಗಳಾದಿಯಾದ ಸಂಖ್ಯಾವಾಚಿಗಳ್, ಒದವಿರೆ=ಬಂದಿರೆ, ನಿಮ್ಮ, ಎಮ್ಮ, ತಮ್ಮ, ಎನಿಪ್ಪ=ಎನಿಸುವ; ಇವು=ಈ ಪದಂಗಳ್, ಪಿಂತಣ್ಗೆ=ಹಿಂದುಗಡೆಗೆ, ಒದವಿರೆ=ಬಂದಿರೆ, ನಡುವಣ್ಗೆ=ಮಧ್ಯಕ್ಕೆ, ಉತು=ಉತು ಎಂದು, ಅಪ್ಪುದು=ಆಕ್ಕುಂ; ಇವಱ=ಈ ಪದಂಗಳ, ಬಹುವಚನದಲ್ಲಿ = ಬಹುತ್ವದಲ್ಲಿ, ಒಂದಂ = ಒಂದೆಂಬುದಂ, ಪುಗಿಸದಿರ್= ಪ್ರವೇಶವಂ ಮಾಡದಿರ್. ॥ ೧೪೮ ॥

**ಟೀಕೆ.**—'ಎತ್ತಣದು' ಎಂಬೀಶಬ್ದಮಂ, ಎತ್ತಣ್ತೆಂದು, ಇಂತು=ಹೀಗೆ, ಕೂಡಿ ನುಡಿಯಲ್ಕೆ = ಕೂಡಿ ನುಡಿವುದರ್ಕೆ, ಆಕ್ಕುಂ=ಅಪ್ಪುದು ; ಮತ್ತೆ=ಬಳಿಕಂ,

**ವೃತ್ತಿ.**—ಎತ್ತಣದೆಂಬೀ ಶಬ್ದಕ್ಕೆ ಎತ್ತಣ್ತೆಂದುಂ, ಆರದೆಂಬ ಶಬ್ದಕ್ಕೆ ಆರ್ತೆಂದುಮಾದೇಶಮಕ್ಕುಂ.

**ಪ್ರಯೋಗಂ.**— ದೆಸೆಯೆತ್ತಣ್ತಾಗಸಮೆತ್ತಣ್ತೆತ್ತಣ್ತುರ್ವಿಯೆನಿಸಿ ಪರ್ಬಿದುದು ತಮಂ. ಆರ್ತೀ ತುರಂಗಮಿಂತಿದನಾರ್ ತಂದರ್ ದಿವ್ಯವಸ್ತುವಂ.

**ಸೂತ್ರಂ** ॥ ಅದುವಿದುವುದುವೆಂಬಿವಱಂ ।
ತ್ಯದುಕಾರಕ್ಕೊದವುಗುಂ ವಕಾರಂ ಪುಲ್ಲಿಂ ॥
ಗದೊಳಲ್ಲಿ ತಕಾರಂ ಮೇ ।
ಣೊದವಿರೆ ಬೆಚ್ಚರದೆ ಬರ್ಪುದಾದಿಗೆ ದೀರ್ಘಂ ॥ ೧೫೦ ॥

**ವೃತ್ತಿ.**—ಅದು ಇದು ಉದು ಎಂಬಿವಱ ಕಡೆಯ ದುಕಾರಕ್ಕೆ ವಕಾರಾದೇಶಮಕ್ಕುಂ; ಆ ದುಕಾರಕ್ಕೊರ್ಮೆ ಪೂರ್ವಕ್ಕೆ ದೀರ್ಘಂ ಬೆರಸು ತಕಾರಾದೇಶಮಕ್ಕುಂ.

**ಪ್ರಯೋಗಂ.**—ವಕಾರಾದೇಶಕ್ಕೆ—ಅವಂ, ಇವಂ, ಉವಂ.

ಬಹುವಚನಕ್ಕೆ—ಅವರ್, ಇವರ್, ಉವರ್.

ತಕಾರಾದೇಶಕ್ಕೆ—ಆತಂ, ಈತಂ, ಊತಂ. ಆತಂ ದುರ್ಯೋಧನನೀತಂ ರವಿಜಾತನೂತನಶ್ವತ್ಥಾಮಂ.

ಬಹುವಚನಕ್ಕೆ—ಆತಂಗಳ್, ಈತಂಗಳ್, ಊತಂಗಳ್.

**ಸೂತ್ರಂ** ॥ ಆವುದೆನಿಪ್ಪೀ ಶಬ್ದ ।
ಕ್ಕಾವಂ ಬಹುವಚನದೆಡೆಯೊಳಾರೆಲ್ಲದೆನಿ ॥
ಪ್ಪಾ ವಚನಮುದೇಕತ್ವಮು ।
ನಾವರಿಸಿದೊಡೆಲ್ಲಮೆಂದೆ ಆಯ್ತಾದೇಶಂ ॥ ೧೫೧ ॥

---

ಆರದೆಂಬುದಂ = ಆರದೆಂಬ ಶಬ್ದಮಂ, ವಿಬುಧೋತ್ತಮರ್ = ವಿದ್ವಚ್ಛ್ರೇಷ್ಠರ್, ಆರ್ತೆಂದು=ಆರ್ತು ಎಂದು, ಕೂಡಿ ನುಡಿಯಲ್ಕೆ=ಕೂಡಿನುಡಿವುದರ್ಕೆ, ಅಕ್ಕುಂ= ಅಪ್ಪುದು. ॥ ೧೪೯ ॥

**ಟೀಕೆ.**—ಪುಲ್ಲಿಂಗದೊಳ್=ಪುಲ್ಲಿಂಗದಲ್ಲಿ, ಅದು, ಇದು, ಉದು, ಎಂಬಿವಱ= ಎಂಬೀ ಶಬ್ದಂಗಳ, ಅಂತ್ಯ ದುಕಾರಕ್ಕೆ=ಕಡೆಯ ದುಕಾರಕ್ಕೆ, ವಕಾರಂ=ವತ್ವಂ, ಒದವುಗುಂ=ಬರ್ಪುದು; ಅಲ್ಲಿ=ಈ.ಶಬ್ದಂಗಳ್ ಪುಲ್ಲಿಂಗವಾಗುವಲ್ಲಿ, ಮೇಣ್=ವಿಕಲ್ಪದಿಂದೆ, ತಕಾರಂ, ಒದವಿರೆ=ಬಂದಿರೆ, ಬೆಚ್ಚರದೆ=ಶೀಘ್ರದಿಂದೆ, ಆದಿಗೆ= ಮೊದಲ ಅಕ್ಷರಕ್ಕೆ, ದೀರ್ಘಂ, ಬರ್ಪುದು. ॥ ೧೫೦ ॥

ವೃತ್ತಿ.— ಆವುದೆಂಬ ಶಬ್ದಕ್ಕೆ ಪುಲ್ಲಿಂಗದೇಕವಚನದೊಳಾವನೆಂದುಂ ಬಹುವಚನದೊಳಾರೆಂದುಮಾದೇಶಂ; ಎಲ್ಲದೆಂಬ ಶಬ್ದಕ್ಕೆ ಲಿಂಗತ್ರಯದಲ್ಲಿಯುಂ ಎಲ್ಲಮೆಂದಾದೇಶಂ.

ಪ್ರಯೋಗಂ.—ಆವುದೆಂಬುದರ್ಕೆ—ಆವಂ ಮುರನಂ ಕೊಂದಂ? ಆವಂ ಬಕ ಕಂಸ ಕೇಶಿಗಳನದಟಲೆದಂ? ಆರ್ಮೆಯ್ದೋರ್ಪರಾರ್ಮಲೆವರಾರ್ ಪೊಣರ್ವರಾರ್ ತೂಳ್ದುವರಾರವಂ ಜವನೆ ದಲ್ ತಾನೆಂದು.

ಎಲ್ಲದೆಂಬುದರ್ಕೆ— ಎಲ್ಲಂಗಮೆಲ್ಲ ಧನಮುಮನೆಲ್ಲೆಡೆಯೊಳಮೆಲ್ಲ ತೆಱದೊಳಂ ಕುಡುಗೆಮ. ಎಲ್ಲರುಮಾ ಕರ್ಣನಂತಿರೇನ್ ಚಾಗಿಗಳ್?

ಸೂತ್ರಂ॥ ಪೆಱತೆಂಬಿವಱಂತ್ಯಾಕ್ಷರ ।
ಮಱೆಗುಂ ಗುಣವಚನದಂತ್ಯದುತ್ವಕ್ಕತ್ವಂ ॥
ನೆಱೆಗುಂ ತುಕಾರಮಿರೆ ಬಂ ।
ದೆಱಗುಗುಮಾ ತಾಣದೊಳ್ ದಕಾರಾದೇಶಂ ॥ ೧೩೨ ॥

ವೃತ್ತಿ.—ಪೆಱತು ಪೆಱದು ಎಂಬ ಶಬ್ದಂಗಳ ಕಡೆಯಕ್ಕರಕ್ಕೆ ಲೋಪಂ; ಗುಣವಚನದ ಕಡೆಯ ದುಕಾರಕ್ಕಕಾರಾದೇಶಂ; ಆ ಗುಣವಚನಂ ತುಕಾರಾಂತಮಾಗಿರೆ ದಕಾರಾದೇಶಂ.

ಪ್ರಯೋಗಂ.— ಅಂತ್ಯಾಕ್ಷರಲೋಪಕ್ಕೆ— ನರನೆಂಬಾತಂ ಪೆಱನಲ್ಲೀತನಾಗಲೆವೇಟ್ಕುಂ.

---

ಟೀಕೆ.—ಪುಲ್ಲಿಂಗದೊಳ್ ಎಂಬುದು ಅನುವರ್ತನೆ—ಆವುದು= ಆವುದೆಂದು ಎನಿಪ್ಪ=ಎನಿಸುವ, ಈ ಶಬ್ದಕ್ಕೆ=ಈ ಸರ್ವನಾಮಶಬ್ದಕ್ಕೆ, ಆವಂ=ಆವಂ ಎಂದಾಗುವುದು; ಬಹುವಚನದ=ಬಹುತ್ವದ, ಎಡೆಯೊಳ್=ಸ್ಥಾನದಲ್ಲಿ, ಆರ್=ಆರೆಂದಾಗುವುದು; ಎಲ್ಲದು=ಎಲ್ಲದೆಂದು, ಎನಿಪ್ಪ=ಎನಿಸುವ, ಆ ವಚನಂ=ಆ ಬಹುವಚನಂ, ಅದು, ಏಕತ್ವಮುಂ=ಏಕವಚನಮುಂ, ಅವರಿಸಿದೊಡೆ=ಪೊರ್ದುಗೆಯಾದೊಡೆ, ಎಲ್ಲಮೆಂದೆ=ಎಲ್ಲಂ ಎಂದೆ, ಆದೇಶಂ, ಆಯ್ತು. ॥ ೧೩೧ ॥

ಟೀಕೆ.—ಪುಲ್ಲಿಂಗದೊಳ್ ಎಂಬುದು ಅನುವರ್ತನೆ—ಪೆಱತೆಂಬಿವಱ=ಪೆಱತು ಪೆಱದು ಎಂಬೀ ಶಬ್ದಂಗಳ, ಅಂತ್ಯಾಕ್ಷರಂ=ಕಡೆಯುಣಕ್ಷರಂ, ಅಱೆಗುಂ=ಲೋಪವಾಗುವುದು; ಗುಣವಚನದ=ಗುಣವಚನಂಗಳ, ಅಂತ್ಯದುತ್ವಕ್ಕೆ=ಅಂತ್ಯದ ದುಕಾರಕ್ಕೆ, ಅತ್ವಂ=ಅಕಾರಂ, ನೆಱೆಗುಂ=ಬರ್ಪುದು; ತುಕಾರಂ, ಇರೆ, ಆ ತಾಣದೊಳ್=ಆ ತಾವಿನಲ್ಲಿ, ದಕಾರಾದೇಶಂ, ಬಂದು, ಎಱಗುಗುಂ=ಪೊರ್ದುಗೆಯಾಗುವುದು. ॥ ೧೩೨ ॥

ಬಹುವಚನಕ್ಕೆ—ಪೆಱರುಮೆಂದರ್.

ಅಕಾರಾದೇಶಕ್ಕೆ—ಇನಿಯನೆ? ಬೆಲ್ಲದಿಂದಿನಿಯನೀವನೆ? ಪಿರಿಯಂ, ಆಃ! ಪಿರಿದೀವನಿತ್ತುದಂ ನೆನೆವನೆ? ಚಿಃ! ಅದಂ ನೆನೆಯಂ. ಕಿಱಿಯಂ, ಬಱಿಯಂ(?), ಅಸಿಯಂ, ಬಸಿಯಂ, ಕರಿಯಂ, ಕಡಿಯಂ, ನಿಡಿಯಂ.

ದಕಾರಾದೇಶಕ್ಕೆ—ಒಳ್ಳಿದಂ, ತೆಳ್ಳಿದಂ, ಮೆಲ್ಲಿದಂ, ಬೆಟ್ಟಿದಂ, ತೋರಿದಂ, ನೇರಿದಂ, ಕೂರಿದಂ. ಕೂರಿದನುಂ ಕೂರಸಿಯಂತೆನಿಸಿ ಮೆಱೆವನಾ ನರನಾಥಂ.

ಸೂತ್ರಂ ॥ ಎಳದು ಪಟಿದೆಂಬ ಶಬ್ದಂ।
ಗಳ ಮಧ್ಯಕ್ಕುಂಟೆಕಾರಮುತ್ವಂ ಬಱಿದೆಂ॥
ದೊಳಱುವ ಱಿಕಾರದೊಳ್ ನೀಂ।
ತಿಳಿ ಪೊಸತಱ ಕಡೆಗೆ ಬಿಂದುವೆರಸು ಬಕಾರಂ ॥ ೧೫೩ ॥

ವೃತ್ತಿ.—ಎಳದು ಪಟಿದು ಎಂಬ ಶಬ್ದಂಗಳ್ಗೆ ಪುಲ್ಲಿಂಗದಕಾರಂ ಬರೆ ಮಧ್ಯಕ್ಕೆ ಹ್ರಸ್ವಮಪ್ಪೆತ್ವಮಕ್ಕುಂ; ಬಱಿದೆಂಬ ಶಬ್ದದ ಱಿಕಾರಕ್ಕೆ ಉಕಾರಾದೇಶಂ; ಪೊಸತೆಂಬುದಱ ತುಕಾರಕ್ಕೆ ಬಿಂದುವೆರಸು ಬಕಾರದೇಶಮಕ್ಕುಂ.

ಪ್ರಯೋಗಂ.— ಎಳದು ಪಟಿದೆಂಬುವರ್ಕೆ—ಎಳೆಯಂ, ಪಟೆಯಂ; ಸ್ತ್ರೀಲಿಂಗದ ಆಳ್ ಪರಮಾಗೆಯುಮಂತೆ—ಎಳೆಯಳ್, ಪಟೆಯಳ್.

ಬಱಿದೆಂಬುದರ್ಕೆ—ಬಱುವಂ.

ಪೊಸತರ್ಕೆ— ಪೊಸಂಬಂ. ವಿಚಾರಿಸದುಂತೆ ಪೊಸಂಬರೊತ್ತೆಯಂ ಕೊಳ್ವುದು ತಕ್ಕುದಲ್ತು.

---

ಟೀಕೆ.—ಗುಣವಚನಪುಲ್ಲಿಂಗದಲ್ಲಿ ಎಂಬುದು ಅನುವರ್ತನೆ, ಎಳದು ಪಟಿದು ಎಂಬ ಶಬ್ದಂಗಳ, ಮಧ್ಯಕ್ಕೆ=ನಡುವಣಕ್ಕರಕ್ಕೆ, ಎಕಾರಂ, ಉಂಟು; ಬಱಿದುಎಂದು, ಒಳಱುವ=ಧ್ವನಿಗೆಯ್ವ, ಱಿಕಾರದೊಳ್, ಉತ್ವಂ, ಉಂಟಾಗುವುದು; ಪೊಸತಱ= ಪೊಸತೆಂಬ ಶಬ್ದದ, ಕಡೆಗೆ=ಅಂತ್ಯಾಕ್ಷರಕ್ಕೆ, ಬಿಂದುವೆರಸು ಬಕಾರಂ = ಆದಿಯಲ್ಲಿ ಬಿಂದುಗೂಡಿದ ಬಕಾರಂ ಉಂಟಾಗುವುದು; ನೀಂ, ತಿಳಿ. ॥ ೧೫೩ ॥

**ಸೂತ್ರಂ** ॥ ಅದುವಿದುವುದುವೆಂಬಿವಱಂ।
ತ್ಯದೊಳ್ ವಳಾದೇಶವಿಧಿ ಕೆಕಾರಂ ಮೇಣ್ ಬಂ॥
ದೊದವಿರೆ ಬರ್ಕುಂ ಸ್ತ್ರೀಲಿಂ।
ಗದೊಳಂ ಪುಲ್ಲಿಂಗದಂತಿರಾದಿಗೆ ದೀರ್ಘಂ ॥ ೧೩೪ ॥

**ವೃತ್ತಿ.**—ಅದು ಇದು ಉದು ಎಂಬಿವಱ ದುಕಾರಕ್ಕೆ ಸ್ತ್ರೀಲಿಂಗದೊಳ್ ವಳಾದೇಶಂ; ಆ ದುಕಾರಕ್ಕೆ ಮೇಣ್ ಕೆಕಾರಮುಂ, ಪುಲ್ಲಿಂಗದಂತಿರೆ ಆದಿಗೆ ದೀರ್ಘಮುಮಕ್ಕುಂ.

**ಪ್ರಯೋಗಂ.**—ವಳ್ಗೆ—ಅವಳ್, ಇವಳ್, ಉವಳ್.

ಕೆಕಾರಕ್ಕೆ—ಆಕೆ, ಈಕೆ, ಊಕೆ.

**ಸೂತ್ರಂ** ॥ ಕೆಲ ಕೆಲವು ಸಕ್ಕದದ ಮೂ।
ಱು ಲಿಂಗಮುಂ ರೂಢಿವೆತ್ತ ಕರ್ಣಾಟಕದೊಳ್ ॥
ನಿಲೆ ನಪ್ಪುಱು ಸಜ್ಜನವದು।
ಕುಲವಧುವೆಂಬಲ್ಲಿ ಕನ್ನಡಂ ನಪ್ಪದುವುಂ. ॥ ೧೩೫ ॥

**ವೃತ್ತಿ.**—ಕೆಲ ಕೆಲವು ಸಕ್ಕದದ ಮೂಱು ಲಿಂಗಮುಂ ಕನ್ನಡಕ್ಕೆ ಬಂದಲ್ಲಿ ನಪುಂಸಕಮಕ್ಕುಂ; ಸಜ್ಜನಶಬ್ದಂ ಕುಲಸ್ತ್ರೀಯಂ ಪೇೞ್ವಲ್ಲಿ ಕನ್ನಡದೊಳೆಂದುಂ ನಪುಂಸಕಮೆ ಅಕ್ಕುಂ.

**ಪ್ರಯೋಗಂ.**—ಸಂಸ್ಕೃತ ಲಿಂಗತ್ರಯಂಗಳೊಳ್ ಪುಲ್ಲಿಂಗಕ್ಕೆ—ವೃಕ್ಷಂ ತಳಿರ್ತುದು, ವಾಯು ತೀಡಿದುದು.

..............................................................................

**ಟೀಕೆ.**—ಸ್ತ್ರೀಲಿಂಗದೊಳಂ=ಸ್ತ್ರೀಲಿಂಗದಲ್ಲಿಯುಂ, ಅದು, ಇದು, ಉದು, ಎಂಬಿವಱ=ಎಂಬೀ ಶಬ್ದಂಗಳ, ಅಂತ್ಯದೊಳ್=ಕಡೆಯಕ್ಷರದಲ್ಲಿ, ವಳಾದೇಶವಿಧಿ= ವಳ್ ಎಂಬಾದೇಶದ ವಿಧಿ ಬರ್ಪುದು; ಮೇಣ್=ವಿಕಲ್ಪದಿಂದೆ, ಕೆಕಾರಂ, ಬಂದು= ಆದೇಶವಾಗಿ ಬಂದು, ಒದವಿರೆ=ಬಂದಿರೆ, ಪುಲ್ಲಿಂಗದಂತಿರೆ=ಪುಲ್ಲಿಂಗದ ಹಾಗೆ ಸ್ತ್ರೀ ಲಿಂಗದಲ್ಲಿಯುಂ, ಆದಿಗೆ=ಮೊದಲಕ್ಷರಕ್ಕೆ, ದೀರ್ಘಂ, ಬರ್ಕುಂ=ಬರ್ಪುದು. ॥೧೩೪॥

**ಟೀಕೆ.**—ಕೆಲ ಕೆಲವು=ಹಲವು ಕೆಲವು, ಸಕ್ಕದದ=ಸಂಸ್ಕೃತದ, ಮೂಱು ಲಿಂಗಮುಂ=ಸ್ತ್ರೀಪುಂನಪುಂಸಕಂಗಳೆಂಬ ಮೂಱು ಲಿಂಗಮುಂ, ರೂಢಿವೆತ್ತ ಕರ್ಣಾ ಟಕದೊಳ್=ರೂಢಿಯಾದ ಕನ್ನಡದಲ್ಲಿ, ನಿಲೆ=ನೆಲಸೆ, ನಪ್ಪು=ನಪುಂಸಕಲಿಂಗವಾಗು ವುವು; ಅಱು=ತಿಳಿ; ಸಜ್ಜನಂ ಅದು=ಸಜ್ಜನವೆಂಬ ಶಬ್ದಂ, ಕುಲವಧು=ಕುಲವಧು ವೆಂದು, ಎಂಬಲ್ಲಿ=ಎಂಬೆಡೆಯುಲ್ಲಿ, ಕನ್ನಡಂ=ಕನ್ನಡವಾಗಿ, ಅದುವುಂ=ಆ ಶಬ್ದವುಂ, ನಪ್ಪು=ನಪುಂಸಕಲಿಂಗವಾಗುವುದು, ತಿಳಿ. ॥ ೧೩೫ ॥

ಸ್ತ್ರೀಲಿಂಗಕ್ಕೆ—ಪ್ರೀತಿಯಾದುದು, ಧರೆ ಬೆಳೆದುದು, ನದಿ ಬಂದುದು, ಮತಿ ಪೆರ್ಚಿದುದು.

ನಪುಂಸಕಕ್ಕೆ—ಕುಲಂ ಮೇಲೆನಿಸಿದುದು.

ಸಜ್ಜನಶಬ್ದಕ್ಕೆ—ಆ ಸತಿ ಸಜ್ಜನಮಾಟಕ್ಕೆಯಿನೆಂದುಂಟು.

ಸಮುಚ್ಚಯದಿಂ ಅಪತ್ಯ, ಕಳತ್ರ—ಎಂಬ ಶಬ್ದಂಗಳ್ ಸ್ತ್ರೀವಾಚಕಮಾಗಿಯುಂ, ಜನಶಬ್ದ ಲೋಕಶಬ್ದಂಗಳ್ ಪುರುಷವಾಚಕಂಗಳಾಗಿಯುಂ ನಪುಂಸಕಂ—ಇದು ಕಳತ್ರಂ; ಇದಪತ್ಯಂ; ಇದು ಜನಂ; ಇದು ಲೋಕಂ.

**ಸೂತ್ರಂ** ॥ ನೆಲಸಿರ್ದ ವಿಶೇಷಣದಿ।
ಷ್ಟಲಿಂಗಮೆನಿಪುದು ವಿಶೇಷ್ಯಮದಱಿಷ್ಟದಿನ॥
ಗ್ಗಲಿಕುಂ ವಿಶೇಷಣದ ಲಿಂ।
ಗ ಲಕ್ಷಣಂ ದೋಷರಹಿತಮಿದು ರೂಪಕದೊಳ್ ॥ ೧೫೬ ॥

**ವೃತ್ತಿ.**—ವಿಶೇಷಣದ ಲಿಂಗದಿಷ್ಟದಿಂ ವಿಶೇಷ್ಯಮುಮನಾ ಲಿಂಗಮಾಗಿ ಯೋಜಿಸಿ ಕೊಳ್ವುದು; ವಿಶೇಷ್ಯಲಿಂಗದಿಷ್ಟದಿಂ ವಿಶೇಷಣಮುಮನಾ ಲಿಂಗಮಾಗಿ ಯೋಜಿಸಿ ಕೊಳ್ವುದು. ರೂಪಕದೊಳಿದು ನಿರ್ದೋಷಂ.

**ಪ್ರಯೋಗಂ.**—ವಿಶೇಷಣ ಬಲಕ್ಕೆ—

ಮ॥ ಉದಯಾಸ್ತೋನ್ನತ ಶೈಲ ಸೇತು ಹಿಮವತ್ಕುಕ್ಷೀಲ ಪರ್ಯಂತ ಸಂ।
ಪದೆಯಂ ವಾರ್ಧಿ ತರತ್ತರಂಗ ನಿನದತ್ಕಾಂಚೀ ಕಲಾಪಾಂಚಿತಾ॥
ಸ್ಪದೆಯಂ ಸಾಧಿಸಿ ಕಬ್ಬಿಗಂಗೆ ನೆಲನಂ ನಿರ್ವ್ಯಾಜದಿಂದಂ ನಿಮಿ।
ರ್ಚಿದ ಗೆಲ್ಲಂ ಭುವನೈಕರಾಮ ಮಹಿಪಂಗಕ್ಕುಂ ಪೆಱರ್ಗಕ್ಕುಮೇ॥

—ಎಂಬಲ್ಲಿ ನೆಲನೆಂಬುದು ನಪುಂಸಕಲಿಂಗಮಂ ಬಿಟ್ಟು, ಧರಾವನಿತೆಯೆಂದು ಸ್ತ್ರೀಲಿಂಗಮಾಗಿ ಯೋಜಿಸಿಕೊಳ್ವುದು.

..............................................................................

**ಟೀಕೆ.**—ವಿಶೇಷ್ಯಂ=ವಿಶೇಷ್ಯಲಿಂಗಂ, ನೆಲಸಿರ್ದ, ವಿಶೇಷಣದ, ಇಷ್ಟಲಿಂಗಂ= ಇಷ್ಟವಾದ ಲಿಂಗಂ, ಎನಿಪುದು; ಅದಱ=ಆ ವಿಶೇಷ್ಯದ, ಇಷ್ಟದಿಂ, ವಿಶೇಷಣದ, ಲಿಂಗಲಕ್ಷಣಂ, ಅಗ್ಗಲಿಕುಂ=ಪೆರ್ಚುಗೆವಡೆವುದು; ಇದು=ಈ ಪ್ರಯೋಗಂ, ರೂಪಕದೊಳ್, ದೋಷರಹಿತಂ = ನಿರ್ದೋಷವಪ್ಪುದು. ॥ ೧೫೬ ॥

ವಿಶೇಷ್ಯಬಲಕ್ಕೆ—ಆತಂ ಜಗದ್ದರ್ಪಣಂ; ಆ ಪೆಣ್ ಜಗದ್ದರ್ಪಣಂ; ಅದು ಜಗದ್ದರ್ಪಣಂ.

**ಸೂತ್ರಂ ॥** ಪದಮಧ್ಯ ವತ್ವ ಯತ್ವ ।
ಕ್ಕೊದವುಗುಮೌತ್ವೈತ್ವವಿಧಿಯದಂತಕ್ಕೊತ್ವಂ ॥
ಪುದಿದಿರ್ಕುಂ ಹ್ರಸ್ವತೆಯಿಂ ।
ವಿದಿತವಿಕಲ್ಪಂ ತಗುಳ್ಗುವಿಾ ಮೂಱಱೊಳಂ ॥ ೧೩೭ ॥

**ವೃತ್ತಿ.**—ಪದಮಧ್ಯ ವಕಾರ ಯಕಾರಂಗಳ್ಗೆ ಔಕಾರಮುಂ ಐಕಾರಮುಮಕ್ಕುಂ; ಪದಾಂತ್ಯದ ಅಕಾರಕ್ಕೆ ಹ್ರಸ್ವೋತ್ವಮುಕ್ಕುಂ; ಇವಱೊಳ್ ವಿಕಲ್ಪಮುಂಟು.

**ಪ್ರಯೋಗಂ.**— ಔಕಾರಕ್ಕೆ—ಕವುಂಗು, ಕೌಂಗು; ಕವುಂಕುೞ್, ಕೌಂಕುೞ್; ಅವುಂಕಿದಂ, ಔಂಕಿದಂ; ಅವುಂಡು, ಔಂಡು; ಕವುಂಡೆ, ಕೌಂಡೆ; ತವುಂಕಲ್, ತೌಂಕಲ್.

ಐಕಾರಕ್ಕೆ—ತೇರಯಿಸಿದಂ, ತೇರೈಸಿದಂ; ಕೋರಯಿಸಿದಂ, ಕೋರೈಸಿದಂ; ತೆಲ್ಲಯಿಸಿದಂ, ತೆಲ್ಲೈಸಿದಂ; ಹೊಲ್ಲಯಿಸಿದಂ, ಹೊಲ್ಲೈಸಿದಂ; ಕಯ್ವಾರಂ, ಕೈವಾರಂ.

ಒತ್ವಕ್ಕೆ— ಆವಂ, ಆವೊಂ; ನುಡಿದಂ, ನುಡಿದೊಂ; ಪಾಡಿದಂ, ಪಾಡಿದೊಂ.

**ಸೂತ್ರಂ ॥** ಅಸಮಾಸದೊಳಂ ದೊರೆವೆ ।
ತ್ತ ಸಮಾಸದೊಳಂ ಣಕಾರದಿಂ ಪರದೊಳ್ ಸಂ ॥
ದಿಸಿದ ನಕಾರಂ ಣತ್ವಂ ।
ಪ್ರಸಿದ್ಧಮುಚ್ಚರಿಸುವರ್ಗೆ ದುಷ್ಕರಮದುವುಂ ॥ ೧೩೮ ॥

---

**ಟೀಕೆ.**—ಪದ=ಪದಂಗಳ, ಮಧ್ಯ=ನಡುವಣ, ವತ್ವಯತ್ವಕ್ಕೆ=ವಕಾರ ಯಕಾರಂಗಳ್ಗೆ, ಔತ್ವೈತ್ವವಿಧಿ=ಔಕಾರದ ಐಕಾರದ ವಿಧಿ, ಒದವುಗುಂ=ಬರ್ಪುದು; ಅದಂತಕ್ಕೆ=ಅಕಾರಾಂತಕ್ಕೆ, ಹ್ರಸ್ವತೆಯಿಂ=ಹ್ರಸ್ವತ್ವದಿಂದೆ, ಒತ್ವಂ, ಪುದಿದಿರ್ಕುಂ=ಪ್ರವೇಶವಾಗಿರ್ಪುದು; ಈ ಮೂಱಱೊಳಂ, ವಿದಿತ=ಪ್ರಸಿದ್ಧವಾದ, ವಿಕಲ್ಪಂ, ತಗುಳ್ಗುಂ=ಎಯ್ದುವುದು. ॥ ೧೩೭ ॥

**ಟೀಕೆ.**—ಅಸಮಾಸದೊಳಂ=ಸಮಾಸವಲ್ಲದಲ್ಲಿಯುಂ, ದೊರೆವೆತ್ತ = ಪ್ರಸಿದ್ಧಿವಡೆದ, ಸಮಾಸದೊಳಂ, ಣಕಾರದಿಂ, ಪರದೊಳ್, ಸಂದಿಸಿದ, ನಕಾರಂ, ಣತ್ವಂ=

**ವೃತ್ತಿ.**—ಭಿನ್ನಪದದೊಳಂ ಸಮಾಸಪದದೊಳಂ ಣಕಾರಕ್ಕೆ ಪರಮಾದ ನಕಾರಂ ಣಕಾರಮನೆಯ್ದುಗುಂ; ಪ್ರಯೋಗಮುಂಟಾದೊಡವಿಾಯುಚ್ಚಾರಣಂ ಸುಭಗಮಲ್ಲ.

**ಪ್ರಯೋಗಂ.**—ಭಿನ್ನಪದಕ್ಕೆ—ಕಣ್ ನೊಂದಪುದು, ಕಣ್ಣೊಂದಪುದು; ಪುಣ್ ನಾಳಿವೋದಪುದು, ಪುಣ್ಣಾಳಿವೋದಪುದು ; ಜಾಣ್ ನೆರೆದಪುದು, ಜಾಣ್ಣೆರೆದಪುದು.

ಸಮಾಸಕ್ಕೆ—ತಣ್ + ನೆಟಿಲ್=ತಣ್ಣೆಟಿಲ್; ಕಣ್ + ನೀರ್= ಕಣ್ಣೀರ್; ಕಣ್ + ನೋಟಂ= ಕಣ್ಣೋಟಂ.

**ಸೂತ್ರಂ** ॥ ಸಂದ ಪಕಾರಕ್ಕೆ ಹಕಾ।
ರಂ ದೊರೆಕೊಳ್ಗುಂ ವಿಕಲ್ಪದಿಂ ಸಂಯೋಗಂ॥
ಸಂದಿಸಿದೊಡೆ ದುಷ್ಕರಮದು।
ಸುಂದರಮಾ ದೇಶಿಯಿಂದಮೆಂಬರ್ ವಿಬುಧರ್ ॥ ೧೫೯ ॥

**ವೃತ್ತಿ.**—ಕರ್ಣಾಟಕ ಶಬ್ದದ ಪಕಾರಕ್ಕೆ ವಿಕಲ್ಪದಿಂ ಹಕಾರಮಕ್ಕುಂ; ದ್ವಿತ್ವದೊಳ್ ಪಕಾರಕ್ಕೆ ಹಕಾರಮಿಲ್ಲ.

**ಪ್ರಯೋಗಂ.**—ಹಕಾರಕ್ಕೆ—ಪಲಗೆ, ಹಲಗೆ; ಪಂದರ್, ಹಂದರ್; ಪಾಸು, ಹಾಸು; ಪಂದಿ, ಹಂದಿ; ಪುಲಿ, ಹುಲಿ; ಪಲಸು, ಹಲಸು. ಇದು ದೇಶಿಯೊಳ್ ಚೆಲ್ವು.

ದ್ವಿತ್ವಕ್ಕಿಲ್ಲದುದರ್ಕೆ—ತಪ್ಪು, ಸೊಪ್ಪು, ಹೆಪ್ಪು, ಟೆಪ್ಪರಂ, ಮುಪ್ಪು, ಉಪ್ಪರಂ, ಟಿಪ್ಪಣಂ, ಮುಪ್ಪುರಿ, ಬಿಪ್ಪಂಡಂ, ಕಪ್ಪುರಂ—ಎಂಬಂತೆ.

---

ಣಕಾರವಪ್ಪುದು, ಪ್ರಸಿದ್ಧಂ; ಅದುವುಂ= ಆ ಪ್ರಯೋಗವುಂ, ಉಚ್ಚರಿಸುವರ್ಗೆ = ಓದುವರ್ಗೆ, ದುಷ್ಕರಂ, ಆಗಿರ್ಪುದು. ॥ ೧೫೮ ॥

**ಟೀಕೆ.**— ಸಂದ ಪಕಾರಕ್ಕೆ=ಕನ್ನಡದಲ್ಲಿ ಸಂದ ಪತ್ವಕ್ಕೆ, ಹಕಾರಂ, ವಿಕಲ್ಪದಿಂ, ದೊರೆಕೊಳ್ಗುಂ=ಬರ್ಪುದು; ಸಂಯೋಗಂ=ದ್ವಿತ್ವಾಕ್ಷರಂ, ಸಂದಿಸಿದೊಡೆ=ಬಂದೊಡೆ, ಅದು, ದುಷ್ಕರಂ=ಮಾಡಬಾರದು; ಆ ದೇಶಿಯಿಂದಂ=ಪ್ರಸಿದ್ಧವಾದ ದೇಶಿಯ ಭಾಷೆಯಿಂದಂ, ಸುಂದರಂ=ಸೌಂದರ್ಯವೆಂದು, ವಿಬುಧರ್=ವಿದ್ವಾಂಸರ್, ಎಂಬರ್= ಪೇೞ್ವರ್. ॥ ೧೫೯ ॥

**ಸೂತ್ರಂ** || ಅಂತಹನಿಂತಹನುಂತಹ।
ನೆಂತಹನೆಂದಿಂತು ಪದ್ವಿರುಕ್ತಿಗೆ ಹತ್ವಂ ||
ಭ್ರಾಂತೇಂ ಗಡಾರ್ಥದೊಳ್ ವೇ।
ಣಂತವಱೆಡೆಗಂನನಿಂನನುಂನಮುವೆಂನಂ || ೧೬೦ ||

**ವೃತ್ತಿ.**—ಪ್ರಕಾರಾರ್ಥದ ಅಂತಪ್ಪಂ ಇಂತಪ್ಪಂ ಉಂತಪ್ಪಂ ಎಂತಪ್ಪಂ—ಎಂಬಿವರ್ಕೆ ಹಕಾರಮಕ್ಕುಂ; ವೇಣೆಂಬುದಱಿಂದವರ್ಕೆ ಗಡಶಬ್ದಾರ್ಥಮಪ್ಪಲ್ಲಿ ಅಂನಂ ಉಂನಂ ಇಂನಂ ಎಂದುಮಕ್ಕುಂ.

**ಪ್ರಯೋಗಂ.**—ಅಂತಪ್ಪಂ ಮೊದಲಾದುವಱ ಹಕಾರಕ್ಕೆ—ಅಂತಹಂ, ಇಂತಹಂ, ಉಂತಹಂ, ಎಂತಹಂ.

ಅಂನವಾದಿ ವಿಕಲ್ಪಕ್ಕೆ— ಸಿಡಿಲಂನಂ ಸಿಂಗದಂನಂ ಪುರಹರನುರಿಗಣ್ಣಂನನೀ ನಾರಸಿಂಹಂ. ಮನಸಿಜನೆಂನನಿಂನಂ ಅರುಣಪ್ರಿಯನಂದನನೆಂನನಿಂನಂ ಆದಿನಕರನೆಂನನಿಂನಂ.

**ಸೂತ್ರಂ** || ಮ ನ ಕಾರದ ಪರದೊಳ್ ವ್ಯಂ।
ಜನಮಿರ್ದೊಡಮಿಲ್ಲದೊಡಮನುಸ್ವಾರಂ ಸಂ ||
ಜನಿಯಿಪುದು ವರ್ಗಮಿದಿರಿರೆ।
ತನಗೆ ವಿಕಲ್ಪದೆ ತದೀಯ ಪಂಚಮುಮಕ್ಕುಂ || ೧೬೧ ||

**ವೃತ್ತಿ.**—ಮ ನ ಕಾರಂಗಳ್ಗೆ ಪರಮಾಗಿ ವ್ಯಂಜನಮಿರ್ದೊಡಮಿಲ್ಲದೊಡಂ ಬಿಂದುವಕ್ಕುಂ. ಆ ಬಿಂದುವಿಂಗಿದಿರಾಗಿ ವರ್ಗಮಿರೆ ವಿಕಲ್ಪದಿನಾ ವರ್ಗದ ಪಂಚಮುಮಕ್ಕುಂ.

---

**ಟೀಕೆ.**—ಪದ್ವಿರುಕ್ತಿಗೆ = ಅಂತಪ್ಪನಿಂತಪ್ಪನುಂತಪ್ಪನೆಂತಪ್ಪನೆಂಬ ಪಕಾರದ ದ್ವಿರ್ಭಾವಕ್ಕೆ, ಅಂತಹಂ, ಇಂತಹಂ, ಉಂತಹಂ, ಎಂತಹಂ—ಎಂದು, ಇಂತು= ಹೀಗೆ, ಹತ್ವಂ=ಹಕಾರಮಪ್ಪುದು; ಭ್ರಾಂತೇಂ=ಭ್ರಮೆಯೇಂ; ಗಡಾರ್ಥದೊಳ್=ಗಡ ಶಬ್ದದರ್ಥದಲ್ಲಿ, ವೇಣ್=ವಿಕಲ್ಪದಿಂದೆ, ಅಂತು=ಹಾಗೆ, ಅವಱ=ಅಂತಹಂ ಗಡ ಇಂತಹಂ ಗಡ ಉಂತಹಂ ಗಡ ಎಂತಹಂ ಗಡ—ಎಂಬಾ ಶಬ್ದಂಗಳ, ಎಡೆಗೆ= ಸ್ಥಾನಕ್ಕೆ, ಅಂನಂ, ಇಂನಂ, ಉಂನಂ, ಎಂನಂ—ಎಂದು ಆಗುವುದು. || ೧೬೦ ||

**ಟೀಕೆ.**—ಮ ನ ಕಾರದ=ಮಕಾರ ನಕಾರಂಗಳ, ಪರದೊಳ್=ಮುಂದೆ, ವ್ಯಂಜನಂ, ಇರ್ದೊಡಂ, ಇಲ್ಲದೊಡಂ, ಅನುಸ್ವಾರಂ=ಸೊನ್ನೆ, ಸಂಜನಿಯಿಪುದು=ಹುಟ್ಟುವುದು; ತನಗೆ=ಆ ಸೊನ್ನೆಯಾದ ತನಗೆ, ವರ್ಗಂ=ವರ್ಗಾಕ್ಷರಂ, ಇದಿರಿರೆ, ವಿಕಲ್ಪದೆ, ತದೀಯಪಂಚಮಂ=ಆ ವರ್ಗದೈದನೆಯಕ್ಷರಂ, ಅಕ್ಕುಂ=ಅಪ್ಪುದು. || ೧೬೧ ||

**ಪ್ರಯೋಗಂ.**—ಮಕಾರಕ್ಕೆ—ನೀಮ್ ಯೋಗ್ಯರ್, ನೀಂ ಯೋಗ್ಯರ್; ಆಮ್ ಸುಖಿಗಳ್, ಆಂ ಸುಖಿಗಳ್; ತಾಮ್ ಸೇವ್ಯರ್, ತಾಂ ಸೇವ್ಯರ್.

ನಕಾರಕ್ಕೆ—ಆನ್ ವಾದಿ, ಆಂ ವಾದಿ; ನೀನ್ ಶುಚಿ, ನೀಂ ಶುಚಿ; ತಾನ್ ಸುಜನಂ, ತಾಂ ಸುಜನಂ.

ವ್ಯಂಜನಶೂನ್ಯಕ್ಕೆ—ನೀನ್, ಆನ್, ತಾನ್; ನೀಂ, ಆಂ, ತಾಂ: ನೀಮ್, ಆಮ್, ತಾಮ್.

ವರ್ಗಪಂಚಮಕ್ಕೆ—ಅವಙ್ಕಡುಗಲಿ, ಅವಂ ಕಡುಗಲಿ; ಅವಞ್ಚಲವಾದಿ. ಅವಂ ಚಲವಾದಿ; ಕರಣ್ಟಕ್ಕಂ, ಕರಂ ಟಕ್ಕಂ; ಕೆನ್ದಳಿರ್, ಕೆಂದಳಿರ್; ಕೆಮ್ಮಣ್, ಕೆಂಮಣ್; ಹೊಮ್ಬಣ್ಣಂ, ಹೊಂಬಣ್ಣಂ; ಪೊಮ್ಮದಿಲ್, ಪೊಂಮದಿಲ್.

ಇದು ಸಮಸ್ತ ಶಾಬ್ದಿಕಜನ ಮನೋಜನಿತ ಶಬ್ದ ಸಂದೇಹಶಲ್ಯ
ಚಾರುಚುಂಬಕಾಯಮಾನಾನೂನ ಕರ್ಣಾಟಕ ಲಕ್ಷಣ
ಶಿಕ್ಷಾಚಾರ್ಯ ಸುಕವಿ ಕೇಶಿರಾಜ ವಿರಚಿತ
ಮಪ್ಪ ಶಬ್ದಮಣಿದರ್ಪಣದೊಳ್
ನಾಮನಿಯಾಮಲಕ್ಷಣಮೆಂಬ
ದ್ವಿತೀಯ ಸಂಧಿ
ಸಂಪೂರ್ಣಂ.

## ಮೂರನೆಯ ಸಂಧಿ

---

### ಸಮಾಸಪ್ರಕರಣಂ

**ಸೂತ್ರಂ** ॥ ಕಱು ತಾಯ ಬೞಿಯನುೞಿಯದ ।
ತೆಱದಿಂದಂ ನಾಮಪದಮುದರ್ಥಾನುಗಮಾ ॥
ಗೆಱಗೆ ಸಮಾಸಂ ನೆಗಟ್ಗುಂ ।
ನೆಱೆ ಪೋಕುಂ ಮಧ್ಯಗತ ವಿಭಕ್ತಿಗಳವಱೊಳ್ ॥ ೧೬೨ ॥

**ವೃತ್ತಿ**—. ತಾಯ ಬೞಿಯ ಕಱುವಿನಂತೆ ನಾಮಪದಂಗಳರ್ಥಾನುಗತಂಗಳಾಗೆ ಸಮಾಸಂ ಘಟಿಸುಗುಂ; ಅವಱಂತರಾಳದೊಳಿರ್ದ ವಿಭಕ್ತಿಯೆಲ್ಲಂ ಪೋಕುಂ.

**ಪ್ರಯೋಗಂ**.—ತೊಱೆಯ ಮಾವು = ತೊಱೆಮಾವು; ತೊಡೆಯ ಸಕ್ಕೆ= ತೊಡೆಸಕ್ಕೆ; ಎಡೆಯ ನುಡಿ= ಎಡೆನುಡಿ; ನೀರಂ ಕುಡಿದಂ= ನೀರ್ಗುಡಿದಂ; ಮರನಂ ಪಾಯ್ದಂ= ಮರವಾಯ್ದಂ; ಪುಯಲ್ಗೆ ಪೋದಂ= ಪುಯಲ್ವೋದಂ; ಮೆಲ್ಲಿತ್ತು ಅಡಿ= ಮೆಲ್ಲಡಿ.

**ಸೂತ್ರಂ** ॥ ಇರ್ದುದನೞಿಯದೆ ನಯದಿಂ ।
ಪೊರ್ದುವುವಾಗಮಮುವೆಯ್ದೆ ಪೋಪುವು ಲೋಪಂ ॥
ಬೊರ್ದಿ ವಿಭಕ್ತಿಯ ಬೞಿವಿಡಿ ।
ದಿರ್ದುದನೞಿದಿರ್ಪುದರಿಯ ವೋಲಾದೇಶಂ ॥ ೧೬೩ ॥

........................................................................................................

**ಟೀಕೆ.**—ಕಱು, ತಾಯ ಬೞಿಯುಂ, ಉೞಿಯದ ತೆಱದಿಂದಂ=ಬಿಡದ ರೀತಿಯಿಂದೆ, ನಾಮಪದಂ, ಅದು, ಅರ್ಥಾನುಗಂ = ಅರ್ಥದ ಬೆಂಬೞಿವಿಡಿದೆಯ್ದುವುದು, ಆಗಿ, ಎಱಗೆ= ಪೊರ್ದುಗೆಯಾಗೆ, ಸಮಾಸಂ=ಸಮಾಸಪದಂ, ನೆಗಟ್ಗುಂ= ಪ್ರಸಿದ್ಧಿವಡೆವುದು; ಅವಱೊಳ್=ಆ ಸಮಾಸಂಗಳಲ್ಲಿ, ಮಧ್ಯಗತ ವಿಭಕ್ತಿಗಳ್=ನಡುವಿರ್ದ ಪ್ರತ್ಯಯಂಗಳ್, ನೆಱೆ=ಚೆನ್ನಾಗಿ, ಪೋಕುಂ=ಲೋಪವಾಗಿ ಹೋಗುವುವು. ॥

**ಟೀಕೆ.**—ಇರ್ದುದಂ=ಶಬ್ದಂಗಳಲ್ಲಿರ್ದುದಂ, ಅೞಿಯದೆ=ಲೋಪವಂಮಾಡದೆ, ನಯದಿಂ=ಹಿತದಿಂದೆ, ಪೊರ್ದುವುವು = ಪೊರ್ದುಗೆಯಾಗುವುವು, ಆಗಮುಂ=ಆಗಮವೆನಿಸುವುವು; ಅವು=ಆ ಆಗಮುಂಗಳ್, ಎಯ್ದೆ=ಚೆನ್ನಾಗಿ, ವಿಭಕ್ತಿಯ ಬೞಿವಿಡಿದು

ವೃತ್ತಿ.—ಇರ್ದುದಂ ಕಿಡಿಸದೆ ಪತ್ತುವುವಾಗಮಂ; ಅವು ವಿಭಕ್ತಿಯೊಡನೆ ಲೋಪಮಪ್ಪುವು. ಪಗೆಯಂತೆ ಇರ್ಪುದಂ ಕಿಡಿಸಿ ಬರ್ಪುದಾದೇಶಂ.

ಪ್ರಯೋಗಂ.—ಆಗಮಕ್ಕೆ—ಮಾತಿನ (=ಮಾತು+ಇನ್+ಅ) ಬಲ್ಲಹಂ; ನೂಱಱ ಪತ್ತು; ತೆಂಕಣ ಪಕ್ಕಂ.

ಆಗಮವಿಭಕ್ತಿಗಳ ಲೋಪಕ್ಕೆ—ಮಾತುವಲ್ಲಹಂ; ನೂಱುಪತ್ತು; ತೆಂಕವಕ್ಕಂ. ತೆಂಕವಕ್ಕದೊಳಸಂಖ್ಯ ಬಲಂ.

ಆದೇಶಕ್ಕೆ — ಕಿಱ್ಱೊಂಬು; ಒರ್ಮೊದಲ್; ಇರ್ಮೆಯ್; ಕುತ್ತಡಿ. ಕುತ್ತಡಿ ಸಿಲ್ಕುತ್ತಿರ್ಕೆ.

ಸೂತ್ರಂ ॥ ಪರ ಪದದೊಳರ್ಥವರ್ತನ ।
ಮಿರೆ ತತ್ಪುರುಷಂ ಸಮಂತದೇಕಾಶ್ರಯಮಾ ॥
ಗಿರೆ ಕರ್ಮಧಾರಯಂ ನೆಲ ।
ಸಿರೆ ಮೊದಲೊಳ್ ಸಂಖ್ಯೆಯದೆ ವಲಂ ದ್ವಿಗುವಕ್ಕುಂ ॥ ೧೬೪ ॥

ವೃತ್ತಿ.—ಮುಂದಣ ಪದದೊಳರ್ಥಂ ಪ್ರವರ್ತಿಸೆ ತತ್ಪುರುಷಸಮಾಸಂ; ಆ ತತ್ಪುರುಷಮೇಕಾಶ್ರಯಮಾಗೆ ಕರ್ಮಧಾರಯಮಕ್ಕುಂ; ಅದು ಸಂಖ್ಯಾ ಪೂರ್ವಕಮಾಗೆ ದ್ವಿಗುವಕ್ಕುಂ.

ಪ್ರಯೋಗಂ.— ತತ್ಪುರುಷಕ್ಕೆ— ಮಲ್ಲಿಗೆನನೆ, ಮಾಣಿಕಗೆಂಪು, ಅಲರ್ವಕ್ಕಿ, ಕನ್ನಡವಕ್ಕಿ, ಕಡೆಸೆಱಂಗು, ಉಡೆನೂಲ್.

ಕರ್ಮಧಾರಯಕ್ಕೆ— ತೆಳ್ಗದಂಪು, ಒಳ್ಗನ್ನಡಂ, ಮೆಲ್ನುಡಿ, ಬಲ್ಮುಗುಳ್, ಕಿಱುಗೂಸು. ಕಿಱುಗೂಸಾಗಿ[1]ಯುಪಾಯಮಂ ಮಱೆದನೆ.

..................................................................................................

=ವಿಭಕ್ತಿಗಳ ಬೆಂಬಳಿವಿಡಿದು, ಲೋಪಂಬೊರ್ದಿ=ಲೋಪವಂ ಪೊರ್ದಿ, ಪೋಪುವು=ಹೋಗುವುವು; ಇರ್ದುದಂ=ಮೊದಲಿರ್ದುದಂ, ಅೞಿದು=ಲೋಪಿಸಿ, ಇರ್ಪುದು, ಅರಿಯ ಪೋಲ್=ಹಗೆಯ ಹಾಗೆ, ಆದೇಶಂ=ಆದೇಶವೆನಿಸುವುದು. ॥೧೬೩॥

ಟೀ.ಕೆ.—ಪರಪದದೊಳ್=ಮುಂದಣ ಪದದಲ್ಲಿ, ಅರ್ಥವರ್ತನಂ, ಇರೆ, ತತ್ಪುರುಷಂ=ತತ್ಪುರುಷಸಮಾಸಂ ಅಪ್ಪುದು; ಸಮಂತು=ಹಾಗೆ, ಅದು=ಆ ಸಮಾಸಂ, ಏಕಾಶ್ರಯಂ=ಸಮಾನಾಶ್ರಯಂ, ಆಗಿ, ಇರೆ, ಕರ್ಮಧಾರಯಂ=ಕರ್ಮಧಾರಯ

1. ಯುಪಾಯಮಂ.

ದ್ವಿಗುವಿಂಗೆ— ಎರಟ್ಬ್ಮಾತು ಎರಟ್ತಿರಂ; ಇರ್ಪೆಂಡಿರ್, ಇರ್ಬಾಳ್, ಮೂವಾಟ್. ಮೂವಾಟಿಕ್ಕಿದುರ್ವರೆಯೊಳ್.

ಸೂತ್ರಂ ‖ ಪದನೆರಡುಂ ಮೇಣ್ ಪಲವುಂ ।
ಪದಾರ್ಥಮಂ ಬಯಸುತಿರೆ ಬಹುವ್ರೀಹಿ ಪದಾ ‖
ರ್ಥದ ಗಡಣಂ ದ್ವಂದ್ವಮೆನಿ ।
ಪ್ಪುದವ್ಯಯೀಭಾವಮಾದಿಪದ ಮುಖ್ಯತೆಯಿಂ ‖ ೧೬೫ ‖

ವೃತ್ತಿ.—ಎರಡುಂ ಪದಂ ಮೇಣ್ ಪಲವುಂ ಪದಂ ಅನ್ಯ ಪದಾರ್ಥಮಂ ಬಯಸುತ್ತಿರೆ ಬಹುವ್ರೀಹಿಯಕ್ಕುಂ; ಪದಾರ್ಥಂಗಳ ಸಮುಚ್ಚಯಂ ದ್ವಂದ್ವಮಕ್ಕುಂ; ಪೂರ್ವಪದಂ ಪ್ರಧಾನಮಾದೊಡೆ ಅವ್ಯಯೀಭಾವಮಕ್ಕುಂ.

ಪ್ರಯೋಗಂ. — ಬಹುವ್ರೀಹಿಗೆ—ಕಡುಚಾಗಿ, ಚಲವಾದಿ, ಮೆಲ್ಪಿನ್ನಣಿ, ಕಡುಗೇಡಿ, ನಿಡುಮೂಗಿ, ಹೆಟಿಗಾಲಿ.

ದ್ವಂದ್ವಕ್ಕೆ — ಮರ ಗಿಡು ಬಳ್ಳಿ ಪುಲ್ಪೊದಱ್ ಪಕ್ಕಿ ಮಿಗಂಗಳ್; ಆಟ ಪಾಟ ಕೂಟಂಗಳ್. ಆಟ ಪಾಟ ಕೂಟಂಗಳ ಕೆಳೆಗೆಯ್ದಿಸದು ಪೊಟ್ತು.

ಅವ್ಯಯೀಭಾವಕ್ಕೆ—ಅಂಗಯ್, ಮೇಂಗಾಲ್, ಮೇಂಗಯ್, ಪಿಂತಿಲ್, ಪಿನ್ತೊಲೆ, ಕಿಟಿಪ್ಪೊಡೆ, ಕಿಟಿಕ್ಕಿಱಿ, ಕಿಟ್ಪುರೆ, ಬೆಂಬಿಸಿಲ್, ಬೆಂಗೊಡಂ, ಬಯ್ಗಿರುಳ್.

ಸೂತ್ರಂ ‖ ಅಡಿ ಮೇಗುಗಳಂತ್ಯಾಕ್ಷರ ।
ದೆಡೆಗಕ್ಕುಂ ಬಿಂದು ಮುಂದು ಪಿಂದುಗಳಂತ್ಯ ‖
ಕ್ಕೊಡರಿಸುಗುಂ ಲೋಪಂ ನೋ ।
ಟ್ಪೊಡವ್ಯಯೀಭಾವದೊಳ್ ಕೆಳಗು ಕಿಟಿನಿಕ್ಕುಂ ‖ ೧೬೬ ‖

---

ಸಮಾಸಂ ಅಪ್ಪುದು; ಮೊದಲೊಳ್=ಮೊದಲಲ್ಲಿ, ಸಂಖ್ಯೆ=ಸಂಖ್ಯಾವಾಚಿ, ನೆಲಸಿರೆ, ಆದೆ, ವಲಂ=ನಿಶ್ಚಯವಾಗಿ, ದ್ವಿಗು=ದ್ವಿಗುಸಮಾಸಂ, ಅಕ್ಕುಂ=ಅಪ್ಪುದು. ‖ ೧೬೪ ‖

ಟೀಕೆ.—ಪದನೆರಡುಂ=ಎರಡು ಪದಂಗಳುಂ, ಮೇಣ್=ಅದಲ್ಲದೆ, ಪಲವುಂ =ಪಲವಾದ ಪದಂಗಳುಂ, ಪದಾರ್ಥಮಂ=ಮತ್ತೊಂದು ಪದಾರ್ಥಮಂ, ಬಯಸುತೆ= ಇಚ್ಛಿಸುತೆ, ಇರೆ, ಬಹುವ್ರೀಹಿ=ಬಹುವ್ರೀಹಿಸಮಾಸಂ ಎನಿಸುವುದು; ಪದಾರ್ಥದ= ಪದಾರ್ಥಂಗಳ, ಗಡಣಂ=ಸಮೂಹಂ, ದ್ವಂದ್ವಂ = ದ್ವಂದ್ವಸಮಾಸಂ, ಎನಿಪ್ಪುದು= ಎನಿಸುವುದು; ಆದಿಪದ=ಮೊದಲ ಪದದ, ಮುಖ್ಯತೆಯಿಂ=ಮುಖ್ಯತ್ವದಿಂದೆ, ಅವ್ಯಯೀಭಾವಂ=ಅವ್ಯಯೀಭಾವಸಮಾಸಂ ಎನಿಸುವುದು. ‖ ೧೬೫ ‖

**ವೃತ್ತಿ.**—ಅವ್ಯಯೀಭಾವದೊಳ್ ಅಡಿ ಮೇಗೆಂಬ ಶಬ್ದಂಗಳ ಕಡೆಯಕ್ಕರಕ್ಕೆ ಬಿಂದುವಕ್ಕುಂ; ಮುಂದು ಪಿಂದೆಂಬಿವಱ ಕಡೆಯಕ್ಕರಕ್ಕೆ ಲೋಪಮಕ್ಕುಂ; ಕೆಳಗೆಂಬುದರ್ಕೆ ಕಿಱ್ ಎಂದಾದೇಶಮಕ್ಕುಂ ; ಪೆಱಗೆಂಬುದುಮಾ ತೆಱದಿಂ ಪಿಂತೆಂದಕ್ಕುಂ.

**ಪ್ರಯೋಗಂ.**—ಅಂಗಯ್, ಅಂಗಾಲ್; ಮೇಂಗಯ್, ಮೇಂಗಾಲ್. ಉದ್ದವಾಗಿ ಬಿಗಿದ ಮೇಂಗಾಲ್. ಮುಂಗಯ್, ಮುಂಗಾಲ್, ಮುಂಜೂರ್, ಮುಂಬಗಲ್, ಮುಂಮಾಗಿ; ಹಿಂಗಾಲ್, ಪಿಂಬೆದೆ, ಪಿಂಬೊಟ್ಟು; ಕಿಱ್ಕಿಱಿ, ಕಿಱ್ಪೊಡೆ, ಕಿಱ್ಪಿರೆ; ಪಿಂತಿಲ್, ಪಿಂತೊಳೆ.[1]

ಸೂತ್ರಂ ॥ ವಿದಿತಂ ಕ್ರಿಯಾಸಮಾಸಂ ।
ಮೊದಲೊಳ್ ಕಾರಕಮುಮಗ್ರದೊಳ್ ಕ್ರಿಯೆಯುಂ ಸಂ ॥
ನಿದಮಾಗೆ ಬಿಂದು ಸಕ್ಕದ ।
ದದಂತದೊಳ್ ಕನ್ನಡಕ್ಕೆ ಮೇಣುತ್ವದೊಳಂ ॥ ೧೬೭ ॥

**ವೃತ್ತಿ.**—ಮೊದಲೊಳ್ ಕಾರಕಮುಂ ಪರದೊಳ್ ಕ್ರಿಯೆಯುಂ ಅರ್ಥವ್ಯಕ್ತಿಯಂ ಕುಡೆ, ಕ್ರಿಯಾಸಮಾಸಂ; ಅಲ್ಲಿ ಸಂಸ್ಕೃತದಕಾರಾಂತಕ್ಕೆ ಬಿಂದು ನಿತ್ಯಂ; ಕನ್ನಡದದಂತಕ್ಕಮುದಂತಕ್ಕಂ ಮೇಣೆಂಬುದಱಿಂ ಬಿಂದುವಿಕಲ್ಪಂ.

**ಪ್ರಯೋಗಂ.**—ಕ್ರಿಯಾಸಮಾಸಕ್ಕೆ— ಬಳೆದೊಟ್ಟಂ ; ಕೆಳೆಗೊಂಡಂ, [2]ತೆಱೆದೆತ್ತಂ; ಮಱೆವೊಕ್ಕಂ.

..........

**ಟೀಕೆ.**—ಅವ್ಯಯೀಭಾವದೊಳ್=ಅವ್ಯಯೀಭಾವಸಮಾಸದಲ್ಲಿ, ನೋಱ್ಪೊಡೆ=ನೋಡುವೊಡೆ, ಅಡಿಮೇಗುಗಳ=ಅಡಿ ಮೇಗು ಎಂಬ ಶಬ್ದಂಗಳ, ಅಂತ್ಯಾಕ್ಷರದ=ಕಡೆಯಣಕ್ಷರದ, ಎಡೆಗೆ=ಸ್ಥಾನಕ್ಕೆ, ಬಿಂದು=ಸೊನ್ನೆ, ಅಕ್ಕುಂ=ಅಪ್ಪುದು; ಮುಂದು ಪಿಂದುಗಳ=ಮುಂದು ಪಿಂದು ಎಂಬ ಶಬ್ದಂಗಳ, ಅಂತ್ಯಕ್ಕೆ=ಕಡೆಯಣಕ್ಷರಕ್ಕೆ, ಲೋಪಂ, ಒದರಿಸುಗುಂ=ಬರ್ಪುದು; ಕೆಳಗು=ಕೆಳಗು ಎಂಬ ಶಬ್ದಂ, ಕಿಱ್=ಕಿಱೆಂದು, ಎನಿಕ್ಕುಂ=ಎನಿಸುವುದು. ॥ ೧೬೬ ॥

**ಟೀಕೆ.**—ಮೊದಲೊಳ್=ಆದಿಯಲ್ಲಿ, ಕಾರಕಮುಂ=ಕಾರಕಪದಮುಂ, ಅಗ್ರದೊಳ್=ಪರದಲ್ಲಿ, ಕ್ರಿಯೆಯುಂ=ಕ್ರಿಯಾಪದಮುಂ, ಸನ್ನಿದಂ=ಸಂಬಂಧಂ, ಆಗೆ, ವಿದಿತಂ=ಪ್ರಸಿದ್ಧವಾದ, ಕ್ರಿಯಾಸಮಾಸಂ=ಕ್ರಿಯಾಸಮಾಸವಪ್ಪುದು; ಸಕ್ಕದದ=ಸಂಸ್ಕೃತದ, ಅದಂತದೊಳ್=ಅಕಾರಾಂತದಲ್ಲಿ, ಬಿಂದು=ಸೊನ್ನೆ ಬರ್ಪುದು; ಕನ್ನಡಕ್ಕೆ=ಕರ್ಣಾಟಕಶಬ್ದಕ್ಕೆ, ಮೇಣ್=ವಿಕಲ್ಪದಿಂದೆ, ಉತ್ವದೊಳಂ=ಉಕಾರಾಂತದಲ್ಲಿಯುಂ, ಬಿಂದು=ಸೊನ್ನೆ ಬರ್ಪುದು. (ಅಂ ಎಂಬ ಸಮುಚ್ಚಯದಿಂದೆ ಅಕಾರಾಂತದಲ್ಲಿಯುಂ ಬಿಂದು ಬರ್ಪುದು.) ॥ ೧೬೭ ॥

---

1. ೧೭೩ ನೆಯ ಸೂತ್ರ ನೋಡಿ. 2. ತೆಱದೆತ್ತಂ.

ಸಂಸ್ಕೃತದ ನಿತ್ಯಬಿಂದುಗೆ—ಗುಣಂಗೊಂಡಂ ; ಕಾಲಂಗಂಡಂ; ಪ್ರಿಯಂ ನುಡಿದಂ; ಧನಂಬಡೆದಂ; ರಂಗಂಬೊಕ್ಕಂ.

ಕನ್ನಡದ ಅತ್ವದೊಳ್ ವಿಕಲ್ಪಬಿಂದುವಿಂಗೆ—ಮೊಗಂನೋಡಿದಂ, ಮೊಗ ನೋಡಿದಂ; ಪದಂಗೊಂಡಂ, ಪದಗೊಂಡಂ; ಬೆಸಂಬಡೆದಂ, ಬೆಸವಡೆದಂ; ಕೆಯ್ವೊಲಂಗಾದಂ, ಕೆಯ್ವೊಲಗಾದಂ; ಕಡಂಗೊಂಡಂ, ಕಡಗೊಂಡಂ. ಕಡ ಗೊಂಡನೊ ಬಡ್ಡಿಗೊಂಡನೊ.

ಉತ್ವಕ್ಕೆ—ಪುದುಂಗೊಳಿಸಿದಂ, ಪುದುಗೊಳಿಸಿದಂ; ಮಾತುಂಗುಟ್ಟಿದಂ, ಮಾತುಗುಟ್ಟಿದಂ. ಮೂಗುವಟ್ಟಿರೆ ಕೃಷ್ಣಂ. ಮಾತುಗುಟ್ಟಿದಂ. ಬಱುವಾತು ಗುಟ್ಟಿ ಪೋಪರೆ ಗಂಡರುಂ. ಅಸುಂಗೊಂಡಂ, ಅಸುಗೊಂಡಂ. ನಿನ್ನಸುಂಗೊಂಡಡೆ ದೋಷಮಾದುದೆ. ಅಸುಂಗೊಳಿಸುವರ್.

ಅರ್ಥವ್ಯಕ್ತಿ ಕಿಡುವೊಡೆ ಬಿಂದುವಂ ಕಳೆಯಲಾಗದು—ಪಯಣಂಬೋದಂ; ಪಸರಂಬಡೆದಂ; ಗಡಣಂಗೊಂಡಂ; ಬಿಜಯಂಗೈದಂ; ಕೆಲಸಂಬೊಕ್ಕಂ; ಕರಗಂ ಬೊತ್ತಂ. ಜರಂ ಮೃಡನೊಳೆ ಕಾದುವ ಕಾಲಮಾನೆ ಕರಗಂಬೊತ್ತೆಂ.

ಇದಱೊಳರಿಪದಂ (=ಅರಿಸಮಾಸಂ) ನಿರ್ದೋಷಂ—

ಕಂ॥ ಸವಣಂ ಬಳಪಂಗೊಳೆ ಗಾಂ ।
ಡಿವಿ ಬಿಲ್ಗೊಳೆ ಬಲವಿರೋಧಿ ವಜ್ರಂಗೊಳೆ ದಾ ॥
ನವರಿಪು ಚಕ್ರಂಗೊಳೆ ಕೌ ।
ರವಾರಿ ಗದೆಗೊಳೆ ಪೊಣರ್ಕೆಗಾವಂ ನಿಲ್ವಂ ॥

**ಸೂತ್ರಂ॥** ಜನಿಯಿಸುಗುಂ ಸಂಖ್ಯಾ ಸ ।
ರ್ವನಾಮ ಗುಣವಚನ ಕೃತ್ಪ್ರಪೂರ್ವಂ ಗಮಕಂ ॥
ತನಗತ್ವಂ ಪೆಱಗಿತ್ವಂ ।
ತನಗರಿಪದನಿಲ್ಲ ಕರ್ಮಧಾರಯಮದುವುಂ ॥ ೧೬೮ ॥

---

**ಟೀಕೆ.**—ಸಂಖ್ಯಾ=ಸಂಖ್ಯಾವಾಚಿಗಳ್, ಸರ್ವನಾಮ=ಸರ್ವನಾಮಂಗಳ್, ಗುಣವಚನ= ಗುಣವಚನಂಗಳ್, ಕೃತ್= ಕೃತ್ತುಗಳ್, ಪ್ರಪೂರ್ವಂ=ಆದಿಯಾಗೆ, ಗಮಕಂ=ಗಮಕಸಮಾಸಂ, ಜನಿಯಿಸುಗುಂ=ಹುಟ್ಟುವುದು; ತನಗೆ=ಗಮಕಸಮಾಸ ವಾದ ತನಗೆ, ಅತ್ವಂ=ಮಧ್ಯಕ್ಕೆ ಅಕಾರಂ, ಪೆಱಗೆ=ಅತ್ವದ ಪಿಂದುಗಡೆಯಲ್ಲಿ, ಇತ್ವಂ= ಇಕಾರಂ ಹುಟ್ಟುವುದು ; ತನಗೆ = ಗಮಕಸಮಾಸವಾದ ತನಗೆ, ಅರಿಪದಂ= ಅರಿಸಮಾಸಂ, ಇಲ್ಲ=ಉಂಟಾಗದು ; ಅದುವುಂ=ಆ ಗಮಕಸಮಾಸವುಂ, ಕರ್ಮ ಧಾರಯಂ=ಕರ್ಮಧಾರಯ ಸಮಾಸವೆನಿಸುವುದು. ಉಂ ಎಂಬ ಸಮುಚ್ಚಯದಿಂದೆ ಎತ್ತಾನುಂ ತತ್ಪುರುಷಮುಮಪ್ಪುದು. ॥ ೧೬೮ ॥

**ವೃತ್ತಿ.**—ಪರಪದದೊಳ್ ಕಾರಕಮುಂ ಪೂರ್ವಪದದೊಳ್ ಸಂಖ್ಯಾ ಸರ್ವನಾಮ ಗುಣವಚನ ಕೃತ್ಪದಂಗಳಾವುವಿರ್ದೊಡಂ ಗಮಕಸಮಾಸಮಕ್ಕುಂ. ಗುಣವಚನದೊಳಂತರಾಳಕ್ಕೆ ಬಂದಕಾರಂ(ಅಕ್ಕುಂ;)ಪಿಂತಣ ಮೆಯ್ಯೊಳ್ ಇಕಾರಮಕ್ಕುಂ (ಮಿರ್ಕುಂ); ಇದಱೊಳ್ ಅರಿಸಮಾಸದೋಷಮಿಲ್ಲ; ಅದು ಕರ್ಮಧಾರಯದ ಭೇದಂ; ಎತ್ತಾನುಂ ತತ್ಪುರುಷಮುಪ್ಪುದು.

**ಪ್ರಯೋಗಂ.**—ಸಂಖ್ಯೆಗೆ— ಇರ್ಪತ್ತೈದು, ನೂಱುಪತ್ತು. ಮೂವತ್ತಾಱುಂ ಗುಣಂಗಳ್ ತಮಗಮರ್ದಿರೆ.

ಸರ್ವನಾಮಕ್ಕೆ—ಆವಮಾತು, ಆವಕಾರ್ಯಂ, ಆವನಾಯಕಂ, ಆವಕಾಂತೆ. ಆವ ರಾವುತರಾವ ವಾಜಿಗಳಾವವಾನೆಗಳಾವನಾಳೊಳವಾವ ನಾಯಕರೊ ನಿಮ್ಮ ವ್ಯೂಹದೊಳ್.

ಗುಣವಚನದತ್ವಮಿತ್ವಕ್ಕೆ—(ಅಸಿ + ಅ + ನಡು =)ಅಸಿಯನಡು, ಪಸಿಯಬಣ್ಣಂ, ಬಿಳಿಯಕರ್ಬು, ನಿಡಿಯನಾಲಗೆ, ಪಿರಿಯಮಗಂ, ಕಿಱಿಯಮಗಂ.

ಕೃತ್ತಿಂಗೆ—ಪಾಡುವ ತುಂಬಿ; ಕೋಡುವ ಪುಟಿಲ್. ಆಡಿದ ಪೊಲನುಂಡಮರ್ದು ಕಂಡವಿಚಾರಂ.

ಅರಿಸಮಾಸದ ನಿರ್ದೋಷಕ್ಕೆ—ಬೀಸುವ ಚಾಮರಂ; ಪೊಡೆವ ಭೇರಿ; ಪೂರೈಸುವ ಶಂಖಂ; ಪಿಡಿವ ಕಹಳೆ; ಆದವಿಷ್ಣುವಿಜಯಾದಿತ್ಯಂ; ಪೂಸಿದ ಭಸ್ಮಪರಾಗಂ; ಪೊಣ್ಮುವ ಘರ್ಮಜಲಂಗಳಾ ಪಾಂಗುಂ.

**ಸೂತ್ರಂ ॥** ಅದುವಿದುವುದುಗಾಯಿಯೂ ।
ವೊದವುಗುಮಾದೇಶವಾಗಿ ಗಮಕದೊಳಾಯೆಂ ॥
ಬುದು ಪೂರ್ವಪರಾಮರ್ಶೆಗ ।
ವೊದವುಗುಮಾ ರೂಢಿಗಂ ಕವೀಶ್ವರಮತದಿಂ ॥ ೧೯ ॥

.............................................................................................

**ಟೀಕೆ.**—ಗಮಕದೊಳ್ = ಗಮಕಸಮಾಸದಲ್ಲಿ, ಅದುವಿದುವುದುಗೆ= ಅದು ಇದು ಉದು ಎಂಬ ಶಬ್ದಂಗಳ್ಗೆ, ಆಯಿಯೂ=ಆ ಎಂಬುದು, ಈ ಎಂಬುದು, ಊ ಎಂಬುದು, ಆದೇಶವಾಗಿ, ಒದವುಗುಂ=ಬರ್ಪುದು; ಕವೀಶ್ವರಮತದಿಂ=ಕವೀಶ್ವರ ಮತದಿಂದೆ, ಆಯೆಂಬುದು=ಆ ಎಂಬ ಶಬ್ದಂ, ಪೂರ್ವಪರಾಮರ್ಶೆಗಂ=ಪೂರ್ವಸ್ಮರಣಕ್ಕೆಯುಂ, ಆ ರೂಢಿಗಂ=ಆ ಪ್ರಸಿದ್ಧಿಗೆಯುಂ, ಒದವುಗುಂ=ಬರ್ಪುದು.॥ ೧೯ ॥

**ವೃತ್ತಿ.**—ಗಮಕಸಮಾಸದೊಳ್ ಆದು ಇದು ಉದು ಎಂಬ ಸರ್ವನಾಮಕ್ಕೆ ಆ ಈ ಊ ಎಂಬಿವಾದೇಶಮಕ್ಕುಂ; ಆ ಎಂಬುದು ಪೂರ್ವಸ್ಮರಣದೊಳಂ ಪ್ರಸಿದ್ಧಿಯೊಳಮುಂಟು.

**ಪ್ರಯೋಗಂ.**—ಆ ಈ ಊ ಎಂಬ ಆದೇಶಕ್ಕೆ—ಆ ಮನೆ ಸಿರಿಯ ತವರ್ಮನೆ ಪಲದಿವಸಕ್ಕೆ ಕಂಡೆವಣ್ಣ. ಈ ಮನೆಯತ್ತಲೆ ಬಾರೀಕೆಗಿನ್ನಲಸದಿರಕ್ಕ. ಕಱು ತಡೆದತ್ತು ಕನ್ನದನುಣಲೂ ಮನೆಯೂಕೆಗೆಳುಯ್ವರ್. ಆ ಬನವೀ ಬನವೂಬನವೆನ್ನದೆ ತೊಟಲ್ಬು ಪೂಗೊಯ್ವರವರ್.

ಸ್ಮರಣಕ್ಕೆ—ನೆನೆದನಾ ಹಿರಣ್ಯಕನಂದು ಬಿಚ್ಚಿಂದವಮಂ. ಬಿದ್ದಿಗಾ ಪೊಟಲಿಚರ್ ಮಾನ್ಯದೊಕ್ಕಲ್.

ಪ್ರಸಿದ್ಧಿಗೆ—ಗಜ ಹಯ ರೂಢಿಯೊಳ್ ಆ ಭಗದತ್ತನಿನಾ ನಳನಿಂ ಮಿಗಿಲಾದಂ.

**ಸೂತ್ರಂ** ॥ ಗ ದ ಬ ಜಕಾರಮವಿದಿರಿರೆ ।
ಮೊದಲ ಪದಂ ತಾಂ ಕೃದಂತಮಾಗಿರೆ ದೊರೆಕೊ ॥
ಳ್ವುದನುಸ್ವಾರಮುದಂತದೊ ।
ಳಿದಂತದೊಳ್ ಕರ್ಮಧಾರಯಂ ಬರೆ ಬಹುಳಂ ॥ ೧೭೦ ॥

**ವೃತ್ತಿ.**—ಕರ್ಮಧಾರಯದೊಳ್ ಗ ದ ಬ ಜಕಾರಾದಿ ಪದಂಗಳ್ ಪರದೊಳಿರೆ ಪೂರ್ವಪದಂ ಕೃತ್ತಾಗಿ ಉಕಾರಾಂತಮಿಕಾರಾಂತಮಾಗಿರೆ ಬಿಂದುವಕ್ಕುಂ; ಬಹುಳದಿಂ ಕೆಲಱೊಳಿಲ್ಲ.

**ಪ್ರಯೋಗಂ.**–ಉಕಾರಾಂತದೊಳ್ ಗಕಾರಂ ಪರಮಾದುದರ್ಕೆ–ಎತ್ತುಂಗೋಲ್, ಕುತ್ತುಂಗಱ, ಪೊತ್ತುಂಗೊಱಡು, ಪುಟ್ಟುಂಗುರುಡಂ, ಸುರ್ಕುಂಗುರುಳ್,ಕರ್ಚುಂಗಲ್ಲಂ, ಚುರ್ಚುಂಗೊಳ್ಳಿ, ಇರ್ಕುಂಗೂಟ್, ಇಡುಕುಂಗಬ್ಬಂ. ಇಡುಕುಂ ಗಬ್ಬಂ ಮುಕ್ತಕವೊಡಂಬಡೆ.

---

**ಟೀಕೆ.**—ಕರ್ಮಧಾರಯಂ=ಕರ್ಮಧಾರಯಸಮಾಸಂ, ಬರೆ, ಗ ದ ಬ ಜಕಾರಂ=ಗಕಾರ ದಕಾರ ಬಕಾರ ಜಕಾರಂಗಳ್, ಅವು, ಇದಿರಿರೆ=ಇದಿರಾಗಿರೆ, ಮೊದಲ ಪದಂ=ಆದಿಯ ಪದಂ, ತಾಂ, ಕೃದಂತಂ=ಕೃಲ್ಲಿಂಗಂ, ಆಗಿರೆ, ಉದಂತದೊಳ್=ಉಕಾರಾಂತದಲ್ಲಿ, ಇದಂತದೊಳ್=ಇಕಾರಾಂತದಲ್ಲಿ, ಬಹುಳಂ=ಬಹುಳವಾಗಿ, ಅನುಸ್ವಾರಂ=ಸೊನ್ನೆ, ದೊರೆಕೊಳ್ವುದು=ಬರ್ಪುದು. ॥ ೧೭೦ ॥

ದಕಾರಕ್ಕೆ— ಕಡುಕುಂದಱಿ, ಉರ್ಕುಂದೊಱೆ, ತೂಗುಂದೊಟ್ಟಿಲ್, ಆಡುಂದೊಲೆ, ತೂಗುಂದಲೆ. ಎತ್ತುವೇತದಾಡುಂದೊಲೆಯನ್ತೆ ಕಣ್ಗೆಸೆದುದಿಭಂ ಕದನತ್ರಿಣೇತ್ರನಾ. ತೂಪ ತೂಗುಂದೊಲೆ ಬಾಟಿಸ್ವಿಣಂ ಪೊಡರೆ ಬಳ್ಸುವ ಸನ್ಮ್ರನ ಶೂಲವಾಲದೊಳ್.

ಬಕಾರಕ್ಕೆ—ಬತ್ತುಂಬಯಂ, ಬತ್ತುಂಬಟಿ, ಅಟ್ಟುಂಬರಿ, ಆಡುಂಬೊಲಂ, ನಿಂಚುಂಬುಟು, ಪೆರ್ಚುಂಬುರುಳ್, ತೋಱುಂಬೊಣೆ, ಹೇಱುಂಬಳೆ. ಪಾಱುಂ ಬಳೆ ನಾರಾಚಂ ತೂಱುವ ಸರಲ್.

ಜಕಾರಕ್ಕೆ— ತೂಗುಂಜೊಡರ್, ಆಟ್ಟುಂಜಗಳಂ, ಕಟ್ಟುಂಜುರಿಗೆ. ಕಟ್ಟುಂಜೋಳಂ, ಏಱುಂಜವ್ವನಂ. ಏಱುಂಜವ್ವನದೊಳ್ ಸೊಕ್ಕಿಱಿದ ನೀಱೆ ಯರ.

ಇಕಾರಾಂತದೊಳ್–ಸಿಡಿಯುಂದಲೆ, ಇಟಿಯುಂಬೊಟ್ಟು. ಇಲ್ಲಿ ಉಕಾರಂ ಪೊಕ್ಕುದು.

ಬಹುಳದಿಂ ಕೃತ್ತಿಲ್ಲದಲ್ಲಿಯುಂ ಬಿಂದುಮುಂಟು—ಬೆಟ್ಟುಂಬೊಱೆ ಎಂದು.

**ಸೂತ್ರಂ ॥** ಸುಡುಗಾಡಿಡುಗಿಚ್ಚಡುಗೂ ।
ಟುಡುಗೊಱೆಯುಂ ಮಾಱುದಾಂಟು ಬಿಡುಗಣ್ ಬಿಡುವಾಯ್ ॥
ತುಡುಜೊಡರಱುಗೆಱೆ ಯೆಂಬಿವು ।
ಪಡೆಯವು ಬಿಂದುವನುದಂತವೃತ್ತಿಯನಾಳ್ದಂ ॥ ೧೭೧ ॥

ವೃತ್ತಿ.—ಇದರ್ಕಿದೆ ವೃತ್ತಿ.

**ಸೂತ್ರಂ ॥** ಕೃತ್ತಿರದೆಯುಮುತ್ಸ್ವಾತ್ಸ್ವಾ ।
ಯತ್ತಮನುಸ್ವಾರಮಸ್ವರದ ಣಣಕತ್ವಂ ॥
ಮತ್ತೆ ಳಕಾರಕ್ಕುತ್ವಂ ।
ಪತ್ತಲೊಡಂ ಬಿಂದು ಬಂದು ನೆಲೆಗೊಂಡಿರ್ಕುಂ ॥ ೧೭೨ ॥

---

ಟೀಕೆ.—ಸುಡುಗಾಡು, ಇಡುಗಿಚ್ಚು, ಅಡುಗೂಟಿ್, ಉಡುಗೊಱೆ, ಮಾಱು ದಾಂಟು, ಬಿಡುಗಣ್, ಬಿಡುವಾಯ್, ತುಡುಜೊಡರ್, ಅಱುಗೆಱೆ, ಎಂಬಿವು= ಎಂಬೀ ಸಮಾಸಪದಂಗಳ್, ಉದಂತವೃತ್ತಿಯಂ=ಉಕಾರಾಂತದ ವರ್ತನೆಯಂ, ಆಳ್ದಂ=ತಾಳ್ದಂ, ಬಿಂದುವಂ=ಸೊನ್ನೆಯಂ, ಪಡೆಯವು=ಪೊರ್ದವು. ॥ ೧೭೧ ॥

ಟೀಕೆ.—ಕೃತ್ತು=ಕೃತ್ಪದಂ, ಇರದೆಯುಂ= ಇಲ್ಲದೆಯುಂ, ಅನುಸ್ವಾರಂ= ಸೊನ್ನೆ, ಉತ್ಸ=ಉಕಾರದಲ್ಲಿ, ಅತ್ಸ=ಅಕಾರದಲ್ಲಿ, ಆಯತ್ತಂ=ಸಂಬಂಧವಪ್ಪುದು;

**ವೃತ್ತಿ.**— ಕೃತ್ತಿಲ್ಲದುದಂತಕ್ಕಂ ಅದಂತಕ್ಕಂ ಬಿಂದು ಸಂದಿಸುಗುಂ; ವ್ಯಂಜನ ನಕಾರ ಣಕಾರಂಗಳ್ಗೆ ಅತ್ವಮುಂ, ಳಕಾರಕ್ಕುಕಾರಮುಂ ಪತ್ತಲೊಡಂ ಸೊನ್ನೆಯವತರಿಸುಗುಂ.

**ಪ್ರಯೋಗಂ.**—ಉದಂತಕ್ಕೆ— ಕಕ್ಕುಂದಱ, ದಕ್ಕುಂದಲೆ, ತಾಱುಂ ಬೞ. ತಾಱುಂಬೞಿಯೆಟ್ಟಿ ಚುಂಚು ಬೆಮರಿಂ ಕಡೆಗೆನ್ನೆಯ ಬಾನಲಾದ ಬೊಟ್ಟು(?).

ಅದಂತಕ್ಕೆ—ಬಕ್ಕಂಬಯಲ್, ಕಳ್ಳಂಗಡಲೆ, ಜಕ್ಕಂದೊಟಲಿ. ಜವನೇಱ ದೊಂದು ಜಕ್ಕಂದೊಟಲಿಯನ್ತೆ ಕಣ್ಗೆಸೆದುದೇಱದಿಭಂ ಚಲದಂಕರಾಮನಾ.

ನಕಾರಕ್ಕೆ—ಮೀನಂಬುಟು, ಬಾನಂಗುಳಿಗೆ.

ಣತ್ವಕ್ಕೆ—ಕಣ್ಣಂದೊಟಲಿ.

ಳಕಾರಕ್ಕೆ—ಬೆಳ್ಳುಂಬಟ್ಟೆ.

**ಸೂತ್ರಂ** ॥ ಪೆಡವೆಂಬಾದೇಶಂ ಬಂ।
ದೆಡೆಗೊಳ್ಗುಂ ಪೆಱಗೆನಿಪ್ಪ ಶಬ್ದದೊಳದು ತಾಂ॥
ಪಡೆಗುಂ ಬಿಂದುಮನರೆಬರ್।
ತಡಗಾಲೆಂಬಂತಬಿಂದುವುಮನಾಚರಿಪರ್ ॥ ೧೭೩ ॥

**ವೃತ್ತಿ.**— ಪೆಱಗೆಂಬುದರ್ಕೆ ಪೆಡವೆಂದಾದೇಶಮಾದುದರ್ಕೆ ಬಿಂದು ವಕ್ಕುಂ; ಕೆಲರ್ ತಡಗಾಲೆಂಬವೊಲ್ ಅದರ್ಕೆ ಬಿಂದುವಿಲ್ಲದೆಯುಂ ಒಲ್ವರ್.

**ಪ್ರಯೋಗಂ.**—ಪೆಡವಾದೇಶಕ್ಕೆ—ಪೆಡಂಗಯ್, ಪೆಡಂದಲೆ, ಪೆಡಂ ಮೆಟ್ಟು. ಪೆಡಂಮೆಟ್ಟದೆ ಸೂೞಱದುದೇಱದಿಭಂ ಭುವನೈಕ ರಾಮನಾ. ತಡಂಗಾಲ್ ಎಂಬಂತೆ.

---

ಅಸ್ವರದ=ವ್ಯಂಜನದ, ನಣಕೆ=ನಕಾರ ಣಕಾರಂಗಳ್ಗೆ, ಅತ್ವಂ=ಅಕಾರಂ, ಬುತ್ತೆ= ಬಟಿಕ, ಳಕಾರಕ್ಕೆ=ವ್ಯಂಜನದ ಳಕಾರಕ್ಕೆ, ಉತ್ವಂ=ಉಕಾರಂ, ಪತ್ತಲೊಡಂ=ಪತ್ತ ಲೊಡನೆ, ಬಿಂದು=ಸೊನ್ನೆ,ಬಂದು, ನೆಲೆಗೊಂಡು=ನೆಲಸಿ,ಇರ್ಕುಂ=ಇರ್ಪುದು. ॥೧೭೨॥

**ಟೀಕೆ.**—ಪೆಱಗು, ಎನಿಪ್ಪ ಶಬ್ದದೊಳ್=ಎನಿಸುವ ಶಬ್ದದಲ್ಲಿ, ಪೆಡಂ ಎಂಬಾ ದೇಶಂ, ಬಂದು, ಎಡೆಗೊಳ್ಗುಂ=ಎಡೆಗೊಂಬುದು; ಅದು ತಾಂ=ತಾನದು, ಬಿಂದು ಮುಂ=ಸೊನ್ನೆಯುಂ, ಪಡೆಗುಂ=ಪಡೆವುದು; ಅರೆಬರ್=ಕೆಲಂಬರ್, ತಡಗಾಲೆಂಬಂತೆ= ತಡಗಾಲೆಂಬ ಹಾಗೆ, ಅಬಿಂದುವುಮಂ= ಬಿಂದುವಿಲ್ಲದುದನಾಗಿಯುಂ, ಆಚರಿಪರ್= ಪೇೞ್ವರ್. ॥ ೧೭೩ ॥

ಅಬಿಂದುವಿಗೆ—ಪೆಡಗಯ್, ಪೆಡದಲೆ, ಪೆಡಮೆಟ್ಟು. ಪೆಡಮೆಟ್ಟಿ ಬರ್ಪ ದುರ್ಯೋಧನನನಿಭಘಟಿಯುಂ. ತಡಗಾಲ್ ಎಂಬಂತೆ.

**ಸೂತ್ರಂ** ॥ ಪದವಿಧಿ ಕನ್ನಡಕಂ ಸ ।
ಕ್ಕದಕ್ಕಮಿಲ್ಲಾದ್ಯರಿಂದೆ ಸಂದುವನಱಿದಿ ॥
ರ್ಪುದು ಬಿರುದಾವಳಿಯೊಳ್ ಪೇ ।
ಳ್ವುದು ಪೆಱವಱೊಳಾಗದಿದು ವಿರುದ್ಧಸಮಾಸಂ ॥ ೧೭೪ ॥

**ವೃತ್ತಿ.**—ಕನ್ನಡಕ್ಕಂ ಸಂಸ್ಕೃತಕ್ಕಂ ಸಮಾಸಮಿಲ್ಲ. ಆದಿಮಾರ್ಗದಿನೆಂತರ್ಕೆ ಕೆಲವಂ ಸಂದುವನಱಿದಿರ್ಪುದು; ಬಿರುದಾವಳಿಯೊಳ್ ಮೆಚ್ಚಿದಂತೆ ಪೇಳ್ವುದು; ಮಿಕ್ಕೆಡೆಯೊಳ್ ಮಾಣ್ಬುದು.

**ಪ್ರಯೋಗಂ.**—ಅರಿಸಮಾಸಕ್ಕೆ—ಮುಖತಾವರೆ, ಅರಸುಕುಮಾರಂ, ಕೆಳದಿಸಮೇತಂ. ಇವು ಅರಿಸಮಾಸಂ.

ಮಾರ್ಗದೊಳುಳ್ಳವರ್ಕೆ—ಕಡುರಾಗಂ, ಮೊಗರಾಗಂ, ಅಱಿಕೆನಾಯಕಂ, ಗುಣಕಱಿಗೊಂಡಂ, ಕಟ್ಟೇಕಾಂತಂ, ಕೂರಸಿ, ಮಾರ್ಬಲಂ, ಇರ್ಬಲಂ, ಪೆರ್ಬಲಂ, ಆಳಿಜನಂ, ತುರಗದಳಂ, ಮಂಗಳಾರತಿ, ಮಂಗಳವಸದನಂ, ಮಂಗಳವಱೆ, ಅರಸುಗುಣಂ, ಕಡುದರ್ಪಂ. ಪೆಱವುಮನೀ ತೆಱದಿನಱಿವುದು. ಇವಱಂತೆ ಬೇಱೆ ಮಾಡಲಾಗದು.

ಬಿರುದಿಂಗೆ—ಗಜದುಳಿ, ಗಜಪಾಱಿ, ನರಲೋಕದಲ್ಲಣಂ, ಮಾಸವಳ ಮದನಮಹೇಶಂ, ಅಂಕತ್ರಿಣೇತ್ರಂ, ಗುಣಕ್ಕೆ ನಲ್ಲಗಣೇಶಂ, ದಳಮುಖ ಧವಳಂ, ದಳಮುಖಾದಿತ್ಯಂ, ರಾಯಕೋಳಾಹಳಂ. ಈ ತೆಱದೆ ಬಿರುದಿನೊಳ್ ಎತ್ತಾನುಂ ಸಲ್ವುದು.

**ಸೂತ್ರಂ** ॥ ಸವನಿಸುವುದೆಲ್ಲಶಬ್ದ ।
ಕ್ಕೆ ವಿಕಲ್ಪದೆ ದೀರ್ಘವಿಧಿ ಮಹಚ್ಛಬ್ದಕ್ಕು ॥
ಧ್ಭವಿಕುಂ ಮಾದೇಶಂ ದೋ ।
ಷವಿಲ್ಲ ಸಂಸ್ಕೃತಪದಂ ಪರಕ್ಕೊದವಲೊಡಂ ॥ ೧೭೫ ॥

---

**ಟೀಕೆ.**—ಕನ್ನಡಕಂ=ಕರ್ಣಾಟಕಶಬ್ದಕ್ಕೆಯುಂ, ಸಕ್ಕದಕ್ಕಂ=ಸಂಸ್ಕೃತಶಬ್ದಕ್ಕೆಯುಂ, ಪದವಿಧಿ=ಸಮಾಸವಿಧಿ, ಇಲ್ಲ=ಉಂಟಾಗದು; ಆದ್ಯರಿಂದೆ=ಪುರಾತನ ಕವಿಗಳಿಂದೆ, ಸಂದುವಂ=ಸಲುವಳಿಯಾದುವಂ, ಅಱಿದಿರ್ಪುದು=ತಿಳಿದಿರ್ಪುದು; ಬಿರು

ವೃತ್ತಿ.—ಎಲ್ಲ ಎಂಬ ಶಬ್ದಕ್ಕೆ ವಿಕಲ್ಪದಿಂ ದೀರ್ಘಮಕ್ಕುಂ; ಮಹ ಚ್ಛಬ್ದಕ್ಕೆ ಮಾ ಎಂಬಾದೇಶಮಕ್ಕುಂ. ಇವರ್ಕೆ ಸಂಸ್ಕೃತಪದಂ ಪರಮಾದೊಡಂ ದೋಷಮಿಲ್ಲ.

ಪ್ರಯೋಗಂ.—ದೀರ್ಘವಿಕಲ್ಪಕ್ಕೆ—ಎಲ್ಲಕಾರ್ಯಂ, ಎಲ್ಲಾಕಾರ್ಯಂ; ಎಲ್ಲರತ್ನಂ, ಎಲ್ಲಾರತ್ನಂ; ಎಲ್ಲಧನಂ, ಎಲ್ಲಾಧನಂ; ಎಲ್ಲಾಪುರುಷರ್; ಎಲ್ಲಾ ಕಾಂತೆಯರ್. ಎಲ್ಲಂಗಮೆಲ್ಲ ಧನಮುಮನೆಲ್ಲೆಡೆಯೊಳಮೆಲ್ಲ ತೆಱದೊಳಂಕುಡು ಗೆಮಗೆ. ಎಲ್ಲಾರತ್ನಂಗಳುಮನೊಳಕೊಂಡಾಳ್ವನಂಭೋನಿಧಿ ಲೋಕಕ್ಕೆಲ್ಲಂ ಬೀಱುಗುಂ.

ಮಹಚ್ಛಬ್ದಕ್ಕೆ—ಮಾದೇವಂ, ಮಾಕಾಳಿ, ಮಾದಾನಿ, ಮಾಶೌರ್ಯಂ.

ಕನ್ನಡಕ್ಕೆ—ಮಾಸಾವಂತಂ, ಮಾಲಕುಮಿ, ಮಾನಾಮಿ.

ಸೂತ್ರಂ ॥ ನೆಲೆಗೊಳ್ಗುಂ ಪೂರ್ವಪದಾಂ।
ತ್ಯಲೋಪಮದು ಬಹುಳದಿಂದೆ ತತ್ಪುರುಷಕ್ಕ ॥
ಗ್ಗಲಿಪುದುಚಿತಾಕ್ಷರಾಗಮ।
ಮೊಲೆಗುಂ ಕೆಳಗಣ್ಗೆ ಕಿಟ್ಕಿನೆಂಬಾದೇಶಂ ॥ ೧೭೬ ॥

ವೃತ್ತಿ.—ತತ್ಪುರುಷಕ್ಕೆ ಬಹುಳದಿಂ ಕೆಲವೆಡೆಯೊಳ್ ಮೊದಲ ಪದದ ಕಡೆಯಕ್ಕರಕ್ಕೆ ಲೋಪಂ; ಕೆಲವೆಡೆಯೊಳ್ ಲೋಪಂಬೆರಸುಚಿತಾಕ್ಷರಾಗಮಮುಂ; ಕೆಳಗೆಂಬುದರ್ಕೆ ಕಿಟಿಂದುಂ ಕಿನ್ ಎಂದುಮಾದೇಶಮಕ್ಕುಂ.

..................................................................................................

ದಾವಳಿಯೊಳ್=ಬಿರುದಾವಳಿಯಲ್ಲಿ, ಪೇೞ್ಪುದು=ಹೇೞ್ಪುದು; ಪೆಱವಱೊಳ್=ಅನ್ಯ ವಾದುವಱಲ್ಲಿ, ಆಗದು; ಇದು, ವಿರುದ್ಧಸಮಾಸಂ=ಅರಿಸಮಾಸವೆನಿಸುವುದು. ॥೧೭೪॥

ಟೀಕೆ.—ಎಲ್ಲ ಶಬ್ದಕ್ಕೆ=ಎಲ್ಲ ಎಂಬ ಶಬ್ದಕ್ಕೆ, ವಿಕಲ್ಪದೆ, ದೀರ್ಘವಿಧಿ, ಸವ ನಿಸುವುದು=ಬರ್ಪುದು; ಮಹಚ್ಛಬ್ದಕ್ಕೆ=ಮಹತ್ ಎಂಬ ಶಬ್ದಕ್ಕೆ, ಮಾದೇಶಂ=ಮಾ ಎಂಬಾದೇಶಂ, ಉದ್ಭವಿಕುಂ = ಹುಟ್ಟುವುದು; ಸಂಸ್ಕೃತಪದಂ, ಪರಕ್ಕೆ=ಮುಂದು ಗಡೆಗೆ, ಒದವಲೊಡಂ=ಬರಲೊಡನೆ, ದೋಷಂ=ಅರಿಸಮಾಸದ ದೋಷಂ, ಇಲ್ಲ= ಉಂಟಾಗದು. ॥ ೧೭೫ ॥

ಟೀಕೆ.—ತತ್ಪುರುಷಕ್ಕೆ=ತತ್ಪುರುಷಸಮಾಸಕ್ಕೆ, ಪೂರ್ವಪದ=ಮೊದಲ ಪದದ, ಅಂತ್ಯ=ಕಡೆಯಣಕ್ಷರದ, ಲೋಪಂ, ಅದು, ಬಹುಳದಿಂದೆ, ನೆಲೆಗೊಳ್ಗುಂ = ನೆಲೆ ಗೊಂಬುದು; ಉಚಿತ=ಉಚಿತವಾದ, ಅಕ್ಷರ=ಅಕ್ಷರದ, ಆಗಮಂ, ಅಗ್ಗಲಿಪುದು= ಬರ್ಪುದು; ಕೆಳಗಣ್ಗೆ=ಕೆಳಗೆಂಬ ಶಬ್ದಕ್ಕೆ, ಕಿಟಿನ್=ಕಿಟಿಂದು, ಕಿನ್ = ಕಿನೆಂದು, ಎಂಬಾದೇಶಂ, ಒಲೆಗುಂ=ಬರ್ಪುದು. (ಅಗ್ಗಲಿಪುದೆಂದೊಡೆ ವೆಗ್ಗಳವಪ್ಪುದು; ಒಲೆ ಗುಂ ಎಂದೊಡೆ ಒಲೆವುದೆಂಬುದರ್ಥಂ=ಔಚಿತ್ಯದಿಂ ಬರ್ಪುದೆಂಬುದರ್ಥಂ.) ॥ ೧೭೬ ॥

**ಪ್ರಯೋಗಂ.**—ಪದಾಂತ್ಯಲೋಪಕ್ಕೆ— ಒಳಕೋಂಟೆ, ಹೊಱವೇಲಿ, ಜೇನೆಯ್, ತೆಂಗಾಳಿ, ಅರಮನೆ.

ಉಚಿತಾಕ್ಷರಾಗಮಕ್ಕೆ—ತೆಂಬೆಲರ್, ದಾಂಗುಡಿ, ಮಾಂಗಾಯ್, ಆಂಗೊಳಗು, ಆಂಗೊಳಂ, ಕಂಮಂಗಣೆ. ಕಂಮಂಗಣೆಯಿಂದಮೆಚ್ಚನಿಂಮಾವಿನ ಪೊದಱೊಳಿರ್ದು. ಕಡಲಾನ್ತ್ರೊಂಗೊಳಗಿರಂ.

ಲೋಪಮಿಲ್ಲದುಚಿತಾಕ್ಷರಾಗಮಕ್ಕೆ-ನಟ್ಟೆವಾನ್, ನಟ್ಟೆವನೆ, ನಟ್ಟೆಗೊಂಬು, ನಟ್ಟೆವನಿ. ಇಲ್ಲಿ ಎಕಾರಮುಚಿತವರ್ಣಾಗಮಂ.

ಕಿಱಾದೇಶಕ್ಕೆ — ಕಿಱ್ಕೊಂಬು, ಕಿಱ್ಕುವಲ್, ಕಿಱ್ಕಣೆ ಕಿಱ್ಕಿಟ್ಟು, ಕಿಱ್ಕಡಲ್.

ಕಿನಾದೇಶಕ್ಕೆ—ಕಿನ್ನೀರ್, ಕಿನ್ನೆಲಂ.

**ಸೂತ್ರಂ** ॥ ಅಕ್ಕುಂ ಪದಾಂತ್ಯಲೋಪಂ।
ತಕ್ಕಂತಿರೆ ಕರ್ಮಧಾರಯಕ್ಕಂ ದ್ವಿಗುಗಂ॥
ಮಿಕ್ಕಾ ದ್ವಂದ್ವಕ್ಕಂ ಮೇ।
ಲಕ್ಕರಿಗರಿನಾ ಕ್ರಿಯಾಸಮಾಸೋಪೇತಂ ॥ ೧೭೭ ॥

**ವೃತ್ತಿ.**—ಕರ್ಮಧಾರಯಕ್ಕಂ ದ್ವಿಗುವಿಂಗಂ ದ್ವಂದ್ವಕ್ಕಂ ಕ್ರಿಯಾಸಮಾಸಕ್ಕಂ ಪೂರ್ವಪದಾಂತ್ಯಲೋಪಂ ಕೆಲವಱೊಳಕ್ಕುಂ.

**ಪ್ರಯೋಗಂ.**—ಕರ್ಮಧಾರಯಕ್ಕೆ—ಬಡವುನಡು, ಬಡನಡು; ಅರಸುನೇಱಲ್, ಅರನೇಱಲ್; ಪೊಲ್ಲದುಮೊಗಂ, ಪೊಲ್ಲಮೊಗಂ. ಪೊಲ್ಲಮಾನಿಸರ ಪೊಲ್ಲಮೊಗಂಗಳ್.

ದ್ವಿಗುವಿಂಗೆ—ಪಲವುದೆವಸಂ, ಪಲದೆವಸಂ; ಪಲವುಕಣ್, ಪಲಗಣ್; ಪಲವುಪಣ್, ಪಲವಣ್. ಪಾದರಿಗಂ [1]ಪಲಗಣ್ಣದೇವನೀವಂ.

---

**ಟೀಕೆ.**—ಕರ್ಮಧಾರಯಕ್ಕಂ = ಕರ್ಮಧಾರಯಸಮಾಸಕ್ಕೆಯುಂ, ದ್ವಿಗುಗಂ= ದ್ವಿಗುಸಮಾಸಕ್ಕೆಯುಂ, ಮಿಕ್ಕ=ಉಱದ ಆ, ದ್ವಂದ್ವಕ್ಕಂ=ದ್ವಂದ್ವಸಮಾಸಕ್ಕೆಯುಂ, ತಕ್ಕಂತಿರೆ=ತಕ್ಕ ಹಾಗೆ, ಪದಾಂತ್ಯಲೋಪಂ=ಪೂರ್ವಪದದ ಕಡೆಯಕ್ಷರದ ಲೋಪಂ, ಅಕ್ಕುಂ=ಅಪ್ಪುದು; ಮೇಲೆ=ಆ ಮೇಲೆ, ಅಕ್ಕರಿಗರಿಂ=ಅಕ್ಷರಜ್ಞರಿಂದೆ, ಆ ಕ್ರಿಯಾಸಮಾಸೋಪೇತಂ=ಆ ಕ್ರಿಯಾಸಮಾಸದಲ್ಲಿಯುಂ ಕೂಡಿರ್ಪುದು. ॥ ೧೭೭ ॥

1. ಪಲಗಣ್ಣನದೇವನೀವಂ.

ದ್ವಂದ್ವಕ್ಕೆ—ತಮ್ಮತಮ್ಮರಾಜ್ಯಂ, ತಂತಮ್ಮರಾಜ್ಯಂ; ತಂತಮ್ಮ ಮಹಾ ವಿಭೂತಿ; ತಂತಮ್ಮಬಲಂ.

ಕಂ॥ ತಂತಮ್ಮ ರಾಜ್ಯಚಿಹ್ನಂ।
ತಂತಮ್ಮ ಮಹಾವಿಭೂತಿ ತಂತಮ್ಮ ಬಲಂ॥

ಕ್ರಿಯಾಸಮಾಸಕ್ಕೆ—ಪೋಗುತಂದಂ, ಪೋತಂದಂ; ಕೆಳಗುಸಾರ್ದಂ, ಕೆಳಸಾರ್ದಂ; ಎಯ್ದಿತಂದಂ, ಎಯ್ತಂದಂ; ಕಳವಂಸುತ್ತಿದಂ, ಕಳಸುತ್ತಿದಂ; ಏನಂಪೇೞ್ವೆಂ, ಏವೇೞ್ವೆಂ. ಏವೇೞ್ವೆನವನ ಚಾಗದ ಪೆಂಪಂ. ಏತರ್ಕೆ ಬಂದಂ, ಏವಂದಂ; ಏತರ್ಕೆ ಪೋದಂ, ಏವೋದಂ. ಏವಂದರೇವೋದರೆನ್ನದೆ ಕಾಲ್ತಱಿಸಲ್ವಮೆಂದು (?).

ಸೂತ್ರಂ॥ ದೊರೆಕೊಳ್ವುದತ್ವವಿಧಿಯಂ।
ತರಾಳದೊಳ್ ಬಹುಳಮಾಗಿ ಮಧ್ಯಪದಕ್ಕಂ॥
ದೊರೆಕೊಳ್ವುದದರ್ಶನವಿಧಿ।
ವಿರಳತೆಯಿಂ ಕರ್ಮಧಾರಯಕ್ಕಱಿವವರಿಂ॥ ೧೭೮॥

ವೃತ್ತಿ.—ಕರ್ಮಧಾರಯದೊಳೆತ್ತಾನುಂ ಮಧ್ಯದೊಳೊಂದಕಾರಮಕ್ಕುಂ; ಕೆಲವೆಡೆಯೊಳ್ ಮಧ್ಯಪದಕ್ಕೆ ಲೋಪಮಕ್ಕುಂ.

ಪ್ರಯೋಗಂ.—ಅತ್ವಕ್ಕೆ—ಬಟ್ಟಿತ್ತುತೊಡೆ, ಬಟ್ಟದೊಡೆ; ಬೆಟ್ಟವೇಸಗೆ, ದಟ್ಟವಳ್ಳಿ—ಇವುಮುದಱಂತೆ.

ಮಧ್ಯಪದ ಲೋಪಕ್ಕೆ—ಅಲರಂತಪ್ಪ ಕಣ್—ಎಂಬಲ್ಲಿ ಅಂತಪ್ಪ ಎಂಬು ದರ್ಕೆ ಲೋಪಮಾಗಿ ಅಲರ್ಗಣ್ ಎಂದಾಯ್ತು. ಪೆಱೆನೊಸಲ್, ತೊಂಗ ಲ್ಗುರುಳ್, ತುಂಬಿಗುರುಳ್—ಇವುಮಂತೆ.

ಸೂತ್ರಂ॥ ಮುಂದಣ ಪದಂ ವಿಶೇಷ್ಯದೊ।
ಳೊಂದಿರೆ ಪಿಂದಿರ್ದ ಪದದುಪಾಂತ್ಯಸ್ವರದಿಂ॥
ಸಂದಿಪುದು ಲೋಪಮಾದಿಯೊ।
ಳೊಂದಿದಿಕಾರಕ್ಕೆಕಾರವಿಧಿ ಬಹುಳತೆಯಿಂ॥ ೧೭೯॥

---

ಟೀಕೆ.—ಕರ್ಮಧಾರಯಕ್ಕೆ=ಕರ್ಮಧಾರಯಸಮಾಸಕ್ಕೆ, ಅಂತರಾಳದೊಳ್= ಮಧ್ಯದಲ್ಲಿ, ಅತ್ವವಿಧಿ=ಅಕಾರದ ವಿಧಿ, ಬಹುಳವಾಗಿ, ದೊರೆಕೊಳ್ವುದು=ಬರ್ಪುದು; ಅಱಿವವರಿಂ=ಬಲ್ಲವರಿಂದೆ, ಮಧ್ಯಪದಕ್ಕಂ=ನಡುವಣ ಪದಕ್ಕೆಯುಂ, ವಿರಳತೆಯಿಂ= ವಿರಳತ್ವದಿಂದೆ, ಅದರ್ಶನವಿಧಿ=ಲೋಪದ ವಿಧಿ, ದೊರೆಕೊಳ್ವುದು=ಬರ್ಪುದು.॥ ೧೭೮॥

ವೃತ್ತಿ.— ಪರಪದಂ ವಿಶೇಷ್ಯಮಾಗಿರೆ ಪೂರ್ವಪದದುಪಾಂತ್ಯಸ್ವರದಿಂ ಲೋಪಂ; ಪದದಾದಿಯಿಕಾರಕ್ಕೆ ಬಹುಳದಿಂದೆಕಾರಮಕ್ಕುಂ.

ಪ್ರಯೋಗಂ.—ಉಪಾಂತ್ಯಸ್ವರಲೋಪಕ್ಕೆ (ಸೂ. ೧೬೪)—ತೆಳಿತ್ತು + ಬಸಿಱು = ತೆಳ್ವಸಿಱು; ಒಳಿತ್ತು + ನುಡಿ = ಒಳ್ನುಡಿ; ಬಲ್ಲಿತು + ಮುಗುಳ್ = ಬಲ್ಮುಗುಳ್; ಮೆಲ್ಲಿತು + ಅಡಿ = ಮೆಲ್ಲಡಿ.

ಎತ್ವಕ್ಕೆ—ಪಿರಿದು + ಮೊಲೆ = ಪೆರ್ಮೊಲೆ; ಪೆರ್ಮರಂ; ಪೆರ್ಮಾತು. ಬಿಳಿದು + ತಿಂಗಳ್ = ಬೆಳ್ದಿಂಗಳ್; ಬೆಳ್ಮುಗಿಲ್, ಬೆಳ್ವಲ್, ಬೆಳ್ವಯಲ್.

ಬಹುಳಕ್ಕೆ—ಬಿಣ್ಣಿತು + ಕೊನೆ = ಬಿಣ್ಗೊನೆ; ಬಿಣ್ಪೊಱೆ. ಇನಿದು + ಮಾವು = ಇಂಮಾವು.

ಸೂತ್ರಂ ॥ ಅಗುರುಪದಾದಿಗೆ ದೀರ್ಘಂ।
ನೆಗಱ್ಗುಂ ಸ್ವರಮಿದಿರೊಳೊದವೆ ಬಹುಳತೆಯಿಂದಂ॥
ಪುಗೆ ಪೆಱತೇಂ ದ್ವಿರ್ಭಾವಂ।
ನೆಗಱ್ಗುಂ ಮತ್ತಲ್ಲಿ ಬಂದು ಣ ಟ ಳ ನ ತಂಗಳ್ ॥ ೧೬೦ ॥

ವೃತ್ತಿ.—ಸ್ವರಂ ಪರಮಾಗೆ ಪದದಾದಿಯ ಹ್ರಸ್ವಕ್ಕೆ ಬಹುಳತೆಯಿಂ ದೀರ್ಘಮಕ್ಕುಂ; ಪೂರ್ವಪದಾಂತ್ಯದೊಳ್ ಣ ಟ ಳ ನ ತಂಗಳಿರೆ ದ್ವಿರ್ಭಾವಮಕ್ಕುಂ.

ಪ್ರಯೋಗಂ.— ದೀರ್ಘಕ್ಕೆ — ಪಿರಿದು+ಆನೆ=ಪೇರಾನೆ; ಪೇರಡವಿ, ಪೇರೊಕ್ಕಲ್, ಪೇರಡಿ, ಪೇರೊಡಲ್; ಓರೆಂಜಲ್; ಈರೈದು, ಈರೊತ್ತೆ.

---

ಟೀಕೆ.—ಮುಂದಣ = ಅಗ್ರದ, ಪದಂ, ವಿಶೇಷ್ಯದೊಳ್ = ವಿಶೇಷ್ಯದಲ್ಲಿ, ಒಂದಿರೆ=ಕೂಡಿರೆ, ಪಿಂದೆ = ಇರ್ದ ಪದದ, ಉಪಾಂತ್ಯಸ್ವರದಿಂ = ಉಪಾಂತ್ಯಸ್ವರದೊಡನೆ, ಲೋಪಂ, ಸಂದಿಪುದು; ಆದಿಯೊಳ್=ಮೊದಲಲ್ಲಿ, ಒಂದಿದಿಕಾರಕ್ಕೆ=ಕೂಡಿದ ಇಕಾರಕ್ಕೆ, ಬಹುಳತೆಯಿಂ, ಎಕಾರವಿಧಿ ಸಂದಿಪುದು. ॥ ೧೫೯ ॥

ಟೀಕೆ.—ಸ್ವರಂ=ಸ್ವರಾಕ್ಷರಂ, ಇದಿರೊಳ್=ಪರದಲ್ಲಿ, ಒದವೆ=ಬರೆ, ಬಹುಳತೆಯಿಂದಂ=ಬಹುಳದಿಂದೆ, ಅಗುರು=ಲಘುವಾದ, ಪದ=ಪದಂಗಳ, ಆದಿಗೆ=ಮೊದಲ್ಗೆ, ದೀರ್ಘಂ, ನೆಗಱ್ಗುಂ = ಪ್ರಸಿದ್ಧಿವಡೆವುದು; ಮತ್ತೆ=ಆಮೇಲೆ, ಅಲ್ಲಿ=ಆ ಸ್ವರಾಕ್ಷರಂ ಗಳಿದಿರಾದಲ್ಲಿ, ಣ ಟ ಳ ನ ತಂಗಳ್=ಣಕಾರ ಟಕಾರ ಳಕಾರ ನಕಾರ ತಕಾರಂಗಳ್, ಬಂದು, ಪುಗೆ=ಪ್ರವೇಶವಾಗೆ, ಪೆಱತೇಂ=ಅನ್ಯವೇಂ, ದ್ವಿರ್ಭಾವಂ=ದ್ವಿತ್ವಂ, ನೆಗಱ್ಗುಂ=ಪ್ರಸಿದ್ಧಿವಡೆವುದು. ॥ ೧೬೦ ॥

ಬಹುಳದಿಂ ವ್ಯಂಜನಪರಮಾದಲ್ಲಿಯುಂ ದೀರ್ಘಮಾಯ್ತು—ಇನಿದು+ಸರಂ= ಇಂಚರಂ; ಈಂಚರಂ, ಈಂಬುಳಿ, ಈಂಗಡಲ್, ಈಂದೋಳ್, ಈಂದುಟಿ. ಈಂಗಡಲೊಳ್ಪವೆತ್ತ ಪಸೆ ಕನ್ನಡಿ ಚಂದ್ರಮಾ.

ದ್ವಿತ್ವಕ್ಕೆ—ಪೆಣ್+ಉಡೆ=ಪೆಣ್ಣುಡೆ; ನುಣಿತ್ತು+ಅರಿಸಿನಂ=ನುಣ್ಣರಿಸಿನಂ; ತಣ್ಣೆಲರ್, ಕಟ್ಟಾಯಂ, ಕಟ್ಟೇಱ್ಗೆ, ಕಟ್ಟಳೆ, ಕಟ್ಟಳ್ಕೆ; ನಿಟ್ಟೆಯ್ದೆ, ನಿಟ್ಟೆಸಳ್; ಕಟ್ಟುಬ್ಬಟೆ; ಬೆಳ್ಳಾನೆ, ಒಳ್ಳುಣಿಸು, ಅಳ್ಳೇಱು, ಬೆಳ್ಳಾಳ್. ಬೆಳ್ಳಾಳಿಡೆಗೊಂಡನೊದಱಿ ಭಟ್ಟನೊಳೊವಜಂ. ಇನ್ನುಣಿಸು; ಕಿತ್ತಡಿ, ಕುತ್ತಡಿ, ಕಿತ್ತೀಳೆ, ಕುತ್ತಳೆ, ಕುತ್ತೆಸಳ್.

**ಸೂತ್ರಂ** ॥ ಕಡಿದು ನಿಡಿದೆಂಬ ನಡುವೆಂ।
ಬ ಡಕಾರಂ ಟತ್ವಮಾಯ್ತು ಕಿಱಿದರ್ಕೆ ಕುಱಿಂ॥
ಬೆಡೆಯಲ್ಲಿ ತಕಾರಂ ಸ್ವರ।
ಮಡಸೆ ಪರಕ್ಕುತ್ವಮಸ್ವರಂ ನಿಲೆ ಪರದೊಳ್ ॥ ೧೮೧ ॥

**ವೃತ್ತಿ.**—ಸ್ವರಂ ಪರಮಾಗೆ ಕಡಿದು ನಿಡಿದು ನಡುವೆಂಬ ಡಕಾರಕ್ಕೆ ಟಕಾರಮಕ್ಕುಂ; ಕಿಱಿದೆಂಬ ಱಕಾರಕ್ಕಂ ಕುಱು ಎಂಬ ಱಕಾರಕ್ಕಂ ತಕಾರಮಕ್ಕುಂ; ವ್ಯಂಜನ ಪರಮಾದೆಡೆಯೊಳಿವರ್ಕೆ ಉಕಾರಮಕ್ಕುಂ.

**ಪ್ರಯೋಗಂ.**—ಟಕಾರಕ್ಕೆ—ಕಟ್ಟಾಳ್, ಕಟ್ಟುಬ್ಬಸಂ; ನಿಟ್ಟಡಕಿಲ್, ನಿಟ್ಟೆರ್ಕೆ; ನಟ್ಟಡವಿ. ನಟ್ಟಾಳಂ, ನಟ್ಟೆರುಳ್.

ತಕಾರಕ್ಕೆ—ಕಿತ್ತಡಿ, ಕಿತ್ತೀಳೆ, ಕಿತ್ತೆಸಳ್; ಕುತ್ತಡಿ, ಕುತ್ತೆಸಳ್.

ಉಕಾರಕ್ಕೆ—ಕಡುಗುದುರೆ, ಕಡುಗಾಳಿ; ನಿಡುದೋಳ್, ನಿಡುವಯ್ಱಣಂ; ನಡುಸೆಱಿಂಗು. ನಿಡುಮಾಳಂ ಮುಂದೆ ನೀರಿಲ್ಲಣಮೆ ಮುಗುಳ್ಪೊಡಂ ಪಿಂತಣೂರ್ಗೆಂಟು. ಕಿಱುಗೂಸು, ಕಿಱುನೆಲ್ಲಿ, ಕಿಱುವಿದಿರ್, ಕಿಱುವಲೆ, ಕಿಱುನಾಯ್; ಕುಱುದಡಿ, ಕುಱುಗಿಡ.

---

**ಟೀಕೆ.**—ಪರಕ್ಕೆ=ಮುಂಗಡೆಗೆ, ಸ್ವರಂ=ಸ್ವರಾಕ್ಷರಂ, ಅಡಸೆ=ಪೊರ್ದುಗೆಯಾಗೆ, ಕಡಿದು ನಿಡಿದೆಂಬ ನಡುವೆಂಬ ಡಕಾರಂ=ಕಡಿದು ನಿಡಿದು ನಡುವೆಂಬ ಶಬ್ದಂಗಳ ಡಕಾರಂ, ಟತ್ವಂ=ಟಕಾರಂ, ಆಯ್ತು; ಕಿಱಿದರ್ಕೆ=ಕಿಱಿದೆಂಬ ಶಬ್ದಕ್ಕೆ, ಕುಱಿಂಬೆಡೆಯಲ್ಲಿ=ಕುಱು ಎಂಬಾದೇಶಂ ಬಂದಲ್ಲಿ, ತಕಾರಂ=ತತ್ವಂ ಆಯ್ತು, ಪರದೊಳ್=ಮುಂದೆ, ಅಸ್ವರಂ=ವ್ಯಂಜನಂ, ನಿಲೆ=ನೆಲೆಗೊಳೆ, ಉತ್ವಂ=ಈ ಪೇೞ್ದ ಶಬ್ದಂಗಳ ಕಡೆಯಣಕ್ಷರಕ್ಕೆ ಉಕಾರಂ ಆಯ್ತು. ॥ ೧೮೧ ॥

**ಸೂತ್ರಂ** ॥ ಜನಿಯಿಸುಗುಂ ಪಚ್ಚನೆ ಕೆ।
ಚ್ಚನೆ ಬೆಚ್ಚನೆಗಳ ಚಕಾರದೊಳ್ ಮತ್ವಂ ಕೆ ॥
ಚ್ಚನೆಯಾದಿಗೆ ಚತ್ವಂ ಮೇ ॥
ಣನಿತಱ ಮತ್ವಂ ಸುಕಾರಮೆತ್ವಕ್ಕಿತ್ವಂ ॥ ೧೮೨ ॥

**ವೃತ್ತಿ.**—ಪಚ್ಚನೆ, ಕೆಚ್ಚನೆ, ಬೆಚ್ಚನೆಯೆಂಬಿವಱ ಚಕಾರಕ್ಕೆ 'ಮ್' ಎಂಬುದಕ್ಕುಂ; ಕೆಚ್ಚನೆಯಾದಿಯ ಕಕಾರಕ್ಕೊರ್ಮೆ ಚಕಾರಮುಕ್ಕುಂ; ಈ ಶಬ್ದಂಗಳ ಕಡೆಯ ಮಕಾರಕ್ಕೆ ಸುಕಾರಮುಮಾದಿಯ ಎತ್ವಕ್ಕಿತ್ವಮುಮುಕ್ಕುಂ.

**ಪ್ರಯೋಗಂ.**—ಮಕಾರಕ್ಕೆ—ಪಂದೊೞ್, ಪಂದೊವಲ್, ಪಂದಳೆ, ಪಂದಳಿರ್.

ಕಂ॥ ಪಂದಳಿರ ತೋರಣಂ ತ।
ಳ್ತೊಂದಿದ ಕೆಂಗುಡಿಯು[1] ಪುಡಿಯು ಮುತ್ತಿನ ಕೊಡೆ ಚೆ ॥
ಲ್ವಿಂದೆಸೆವ ಮಂಗಳಾನಕ।
ದೊಂದುರವಂ ಬಗೆಗೆವಂದುದಂದರಮನೆಯೊಳ್ ॥

ಕೆಂಗಾಱೆ (ಕೆಂಗಱೆ), ಕೆಂಗಱು, ಕೆಂಜೆಡೆ, ಕೆಂಗೊಡೆ, ಕೆಂದಳಿರ್, ಕೆಂಬಿಸಿಲ್, ಕೆಂಬಟ್ಟೆ; ಬೆಂಗಲ್, ಬೆಂಗದಿರ್, ಬೆಂನೀರ್.

ಕಂ॥ ಎನಿತುಂ ಕಾಯ್ದುಂ ಬೆಂನೀರ್।
ಮನೆ ಸುಡದೆಂಬಂತೆ ನಿನಗವರ್ ನಿಲೆ ಕಾಯ್ದುಂ ॥
ಮನದೊಳ್ ಪೊಲ್ಲಮನೆಂದುಂ।
ನೆನೆಯುರದಂ ನಂಬು ಕುರುಕುಲಾನ್ವಯಭಾನೂ ॥

ಚಕಾರಕ್ಕೆ— ಚೆಂಗಣಿಗಿಲೆ, ಚೆಂದೆಂಗು, ಚೆಂನೆಯ್ದಿಲ್, ಚೆಂಬೊನ್, ಚೆಂಗೋಲ್, ಚೆಂಬೋತಂ, ಚೆಂಗೊರಲ್, ಚೆಂದುಟಿ. ಅಲರ್ದಂಭೋರುಹ ಷಣ್ಡಮುಳ್ಳಲರ್ದ ಚೆಂನೆಯ್ದಿಲ್ಗೊಳಂ.

---

**ಟೀಕೆ.**— ಅಸ್ವರಂ ನಿಲೆ ಪರದೊಳೆಂಬುದನುವರ್ತನೆ—ಪಚ್ಚನೆ, ಕೆಚ್ಚನೆ, ಬೆಚ್ಚನೆಗಳ=ಪಚ್ಚನೆ ಕೆಚ್ಚನೆ ಬೆಚ್ಚನೆ ಎಂಬ ಶಬ್ದಂಗಳ, ಚಕಾರದೊಳ್=ಚಕಾರದಲ್ಲಿ, ಮತ್ವಂ=ಮಕಾರಂ, ಜನಿಯಿಸುಗುಂ= ಹುಟ್ಟುವುದು; ಕೆಚ್ಚನೆಯ=ಕೆಚ್ಚನೆ ಎಂಬ ಶಬ್ದದ, ಆದಿಗೆ=ಮೊದಲ್ಗೆ, ಚತ್ವಂ=ಚಕಾರಂ ಜನಿಯಿಸುಗುಂ; ಮೇಣ್=ವಿಕಲ್ಪದಿಂದೆ,

1. ಮುಡಿಯು.

ಆದಿಯಿತ್ವಂ ಬೆರಸು ಸುಕಾರಕ್ಕೆ—ಕಿಸುಗಣಿಗಿಲೆ, ಕಿಸುಗಲ್, ಕಿಸುಗಟ್ಟ, ಕಿಸುವೊನಲ್, ಕಿಸುವೊನ್, ಕಿಸುಸಂಜೆ. ಪೋಲ್ತಂ ಕಿಸುಸಂಜೆ ಕವಿದ ನೀಲಾಚಲಮಂ. ಬಿಸುಗದಿರ್, ಬಿಸುನೆತ್ತರ್, ಬಿಸುನೀರ್, ಬಿಸುಗಾಳಿ. ಬಿಸುನೆತ್ತರ ಧಾರೆಗೆ ಬಾಯನೊಡ್ಡಿ ಮೆಯ್ವೆಣದೆ.

ಪಚ್ಚನೆ ಎಂಬುದರ್ಕೆ ಆದಿಯಿತ್ವಮಿಲ್ಲಾಗಿ—ಪಸುಂಗೞ್, ಪಸುರ್ವಂದರೆಂದಾಯ್ತು.

ಸ್ವರಂ ಪರಮಾಗೆ—ಪಚ್ಚೋಲೆ, ಪಚ್ಚಡಕೆ, ಪಚ್ಚಿಲೆ. ಪಚ್ಚೋಲೆ ಪಚ್ಚದೊಳೊಡಂಬಡೆ ಬಂದು ವಿದಗ್ಧೆ.

ಕೆಚ್ಚನೆ ಎಂಬುದರ್ಕೆ ಮೋಱೆಂಬುದಱಿಂ—ಕೇಸಡಿ, ಕೇಸುರಿ, ಕೇಸಕ್ಕಿ—ಎಂದಾಯ್ತು.

**ಸೂತ್ರಂ** ॥ ಪದದ ಕಡೆಯಣ ಡಕಾರ।
ಕ್ಕುದಯಿಪುದು ಟಕಾರಮಾ ಱಕಾರಕ್ಕೊದವಿ॥
ರ್ಪುದು ರೇಫಂ ವ್ಯಂಜನಪದ।
ಮಿದಿರೊಳ್ ಸಂದಿಸೆ ಸಮಾಸದೊಳ್ ಬಹುಳತೆಯಿಂ ॥ ೧೮೩ ॥

**ವೃತ್ತಿ.**— ವ್ಯಂಜನಂ ಪರದೊಳಿರೆ ಸಮಾಸದೊಳ್ ಮೊದಲ ಪದದ ಕಡೆಯಣ ಡಕಾರಕ್ಕೆ ಟಕಾರಮಕ್ಕುಂ; ಱಕಾರಕ್ಕೆ ರೇಫೆಯಕ್ಕುಂ; ಬಹುಳದಿಂದೆ ಅಸಮಾಸದೊಳಮಂತೆ.

**ಪ್ರಯೋಗಂ.**— ಟಕಾರಕ್ಕೆ—ಕಾಟ್ಕಿಚ್ಚು, ಕೋಟ್ಕುಟ್ಟು, ನಾಟ್ಕಿಡೆ, ನೀಟ್ಕಿಲಸಿದಂ, ಎರಟ್ಕಿಡಿ, ಎರಟ್ತಿರಂ, ಎರಟ್ಮೂಱು, ಎರಟ್ಮಾತು. ಎರಟ್ಮಾತಾಗಿ ಬಟ್ಟಿಂ ಜಗದ್ವಳಯಕ್ಕೊಳ್ನುಡಿಕಾಱನಾದ.

ರೇಫಕ್ಕೆ—ಕೆಸರ್ಮಲ್ಲಿಗೆ, ನೇಸರ್ಮಯಣಂ, ಬೇಸರ್ನುಡಿ, ಏರ್ಪೆತ್ತರ್. ಏರ್ಪೆತ್ತರೇರ್ಪೆತ್ತರಂ ಪದುಳಂ ಮಾಟ್ಪುದುಚಿತಂ.

---

ಅನಿತಱ=ಎಲ್ಲ ಶಬ್ದಂಗಳ, ಮತ್ವಂ=ಮಕಾರಂ, ಸುಕಾರಂ = ಸುಕಾರಮುಪ್ಪುದು; ಎತ್ವಕ್ಕೆ=ಆದಿಯ ಎಕಾರಕ್ಕೆ, ಇತ್ವಂ=ಇಕಾರಂ ಬರ್ಪುದು. ॥ ೧೮೨ ॥

**ಟೀಕೆ.**—ಸಮಾಸದೊಳ್, ಬಹುಳತೆಯಿಂ=ಬಹುಳದಿಂದೆ, ವ್ಯಂಜನಪದಂ=ವ್ಯಂಜನಾದಿಯ ಪದಂ, ಇದಿರೊಳ್=ಪರದಲ್ಲಿ, ಸಂದಿಸೆ=ಇದಿರಾಗೆ, ಪದದ=ಪದಂಗಳ, ಕಡೆಯಣ, ಡಕಾರಕ್ಕೆ, ಟಕಾರಂ, ಉದಯಿಪುದು=ಹುಟ್ಟುವುದು; ಆ ಱಕಾರಕ್ಕೆ=ಆ ಪದದ ಕಡೆಯಣ ಱಕಾರಕ್ಕೆ, ರೇಫಂ, ಒದವಿರ್ಪುದು=ಬರ್ಪುದು. ॥ ೧೮೩ ॥

ಅಸಮಾಸದ ಟಕಾರಕ್ಕೆ—ನೋಟ್ಪಿಂ, ಮಾಟ್ಪಿಂ, ಬೇಟ್ಪಿಂ, ಬಿಸುಟ್ಪಿಂ, ಬೆಗಟ್ಪಿಂ. ನಿನ್ನ ಬೆಗಟ್ಪಿ ಭಂಗಿ ಕರಮುಕ್ಕೆವಮಾಗಿ ಮನಕ್ಕೆ ತೋಱುಗುಂ.

ಸ್ರ॥..........................................ಒಂದೆರಟ್ಮೂಱುನಾಲ್ಕೈ।
ದಾಱೇೞೆಂಟೊಂಬತಂತಿಂತಱುಗುವ ಕಲೆಯೊಂಬತ್ತುಮಂ ದೈತ್ಯರಾಜಂ॥

ರೇಫೆಗೆ— ಕೆಸರ್ಮಸಗಿದುದು; ಏರ್ಮಾಣ್ದುದು; ಎರ್ಪೂತುದು. ನೇಸರ್ಮೂಡಿದುದು ಮಿಟ್ತು ಮೂಡುವ ತೆಱದಿಂ.

ಸೂತ್ರಂ ॥ ಕಿಱಿದರ್ಕಾದೇಶಂ ಕುಱು।
ಬಿಱುವೆಂಬುದು ಬೆಟ್ಟಿತರ್ಕ್ಕೆ ಕೊಂಕಿಂಗೆ ಕುಡೆಂ॥
ದಱಿ ರೇಫೆ ತಳ್ತ ವರ್ಣ।
ಕ್ಕೆಱಗಿರ್ಕ್ಕುಂ ದ್ವಿತ್ವವೃತ್ತಿಯಸಮಾಸದೊಳಂ ॥ ೧೮೪ ॥

ವೃತ್ತಿ.—ಕಿಱಿದರ್ಕೆ ಕುಱು ಎಂದು, ಬೆಟ್ಟಿತರ್ಕ್ಕೆ ಬಿಱು ಎಂದು, ಕೊಂಕಿಂಗೆ ಕುಡು ಎಂದು, ಆದೇಶಮಕ್ಕುಂ; ಸಮಾಸದೊಳಮಸಮಾಸ ದೊಳಂ ರೇಫೆಯಡರ್ದಕ್ಕರಕ್ಕೆ ದ್ವಿತ್ವಮಕ್ಕುಂ.

ಪ್ರಯೋಗಂ.—ಕುಱು, ಬಿಱು, ಕುಡು ಎಂಬಿವರ್ಕೆ—ಕುಱುಗಿಡಂ, ಕುಱುವಡ್ಡಿ, ಕುಱುಗಡ್ಡಂ, ಕುಱುಗಂಟು, ಕುಱುದಱಿ, ಕುಱುಗಯ್. ಅಚ್ಚಡಿ ಕೀಲ್ ಕುಱುಗಯ್ ಮಡಂ ಮೊಗಂ. ಬಿಱುವೊಯಲ್, ಬಿಱುಬಿದ್ದಂ, ಬಿಱು ವಡಿ, ಬಿಱುಗಾಳಿ. ಬೀಸುವ ಬಿಱುಗಾಳಿ ಕೊಳ್ವ ಮಟಿ ಪೊಯ್ವ ಸಿಡಿಲ್ ಚಿಳಿಲೆಂಬ ಮಿಂಚು. ಕುಡುವುರ್ವು, ಕುಡುಗೋಲ್. ಕುಡುವೆಱ ತೋರ್ಪ ಕುಡುದಾಡೆ. ಕುಡುಮಿಂಚು. ಕುಡುಮಿಂಚಂ ಮಸೆದನ್ನರಪ್ಪ ಪಲರೊಳ್ ಪೆಂಡಿರ್.

ದ್ವಿತ್ವಕ್ಕೆ—ನೀರ್ಗ್ಗಿಚ್ಚು, ಊರ್ವ್ವೇಲಿ. ನೀರ್ವ್ವಾನಿಸೆಯಂತೆ ವಿಜಯವಧು ನೆಲಸಿರ್ಪಳ್. ಕಾರ್ಗ್ಗಾಲ್. ಕಾರ್ಗ್ಗಾಲದಂತೆ ಮಿಂಚಿ ಪೊಳೆದುವೊ ಬಾಳ್ಗಳ್.

.........................................................................

ಟೀಕೆ.— ಕಿಱಿದರ್ಕೆ=ಕಿಱಿದೆಂಬ ಶಬ್ದಕ್ಕೆ, ಕುಱು, ಎಂದು, ಆದೇಶಂ, ಬರ್ಪುದು; ಬೆಟ್ಟಿತರ್ಕ್ಕೆ=ಬೆಟ್ಟಿತೆಂಬ ಶಬ್ದಕ್ಕೆ, ಬಿಱು ಎಂಬುದು ಆದೇಶಂಬರ್ಪುದು; ಕೊಂಕಿಂಗೆ=ಕೊಂಕೆಂಬ ಶಬ್ದಕ್ಕೆ, ಕುಡು ಎಂದು, ಅಱಿ=ತಿಳಿ; ಅಸಮಾಸದೊಳಂ= ಸಮಾಸವಲ್ಲದಲ್ಲಿಯುಂ, ರೇಫೆ ತಳ್ತ ವರ್ಣಕ್ಕೆ = ರೇಫೆಗೂಡಿದಕ್ಷರಕ್ಕೆ, ದ್ವಿತ್ವವೃತ್ತಿ, ಎಱಗಿರ್ಕ್ಕುಂ=ಬರ್ಪುದು. ॥ ೧೮೪ ॥

ಆಸಮಾಸಕ್ಕೆ—ಬೇರ್ಪಱಿದುದು, ತೇರ್ಪರಿದುದು, ಕೇರ್ಕಡೆದುದು. ಬೆಳಗಿದುದೆಂಟುಂ ದೆಸೆ ನೀರ್ತಿಳಿದುದು.

**ಸೂತ್ರಂ** ॥ ಇತರೇತರ ಕ್ರಿಯಾ ಸಂ।
ಹತಮದು ತಾನಾವುದಲ್ಲಿ ಮತ್ತೆ ಬಹುವ್ರೀ ॥
ಹಿ ತಗುಳ್ಗುಮಾತ್ವವಿಧಿ ಸಂ।
ಗತಮಾದಿ ಪದಾಂತ್ಯದಲ್ಲಿ ಚರಮಕ್ಕಿತ್ವಂ ॥ ೧೮೫ ॥

**ವೃತ್ತಿ.**—ಓರೊಂದಱ ಕ್ರಿಯೆಯನೋರೊಂದು ಕೈಕೊಂಡು ಮಾಡುವೆಡೆಯೊಳ್ ನೆಱೆವಣಿಗೆಯುಂ ಪಡೆವುದದುವುಂ ಮತ್ತೆ ಬಹುವ್ರೀಹಿಯಕ್ಕುಂ; ಅದಱ ಮೊದಲ ಪದದ ಕಡೆಗಾತ್ವಮುಂ ಪರಪದದ ಕಡೆಗಿತ್ವಮುಮಕ್ಕುಂ.

**ಪ್ರಯೋಗಂ.**—ಖಡ್ಗದಿಂ ಖಡ್ಗದಿಂ ಮಾಡುವ ಯುದ್ಧಮಾವುದದು, ಖಡ್ಗಾಖಡ್ಗಿ.

ಮುಷ್ಟಿಯಿಂ ಮುಷ್ಟಿಯಿಂ ಪೈಯೊಡ್ಡಿ ಮಾಡುವ ಯುದ್ಧಮಾವುದದು, ಮುಷ್ಟಾಮುಷ್ಟಿ. ಮುಟ್ಟಾಮುಟ್ಟಿ, ಹೆಲ್ಲಾಹೆಲ್ಲಿ, ದಾಱಾದಾಱಿ, ದೆಕ್ಕಾದೆಕ್ಕಿ, (ಹಾಣಾಹಾಣಿ) ಹಣಾಹಣಿ. ಘಟ್ಟಾಘಟ್ಟಿ, ಮಲ್ಲಾಮಲ್ಲಿ—ಇವು ತತ್ಸಮಂಗಳ್.

**ಸೂತ್ರಂ** ॥ ಅಡಸುವುದು ಬಹುವ್ರೀಹಿಯ।
ಕಡೆಗತ್ವಂ ಬಹುಳಮಗ್ರಮಿಲ್ಲೆಂದಿರೆ ತಾಂ ॥
ಕಡೆಗಕ್ಕುಂ ಲಿತ್ವಂ ಕೊ।
ಲ್ವೆಡೆಯೊಳ್ ಕುಲಿಯೆಂಬುದಕ್ಕುಮಂತ್ಯಾದೇಶಂ ॥ ೧೮೬ ॥

..............................................................................

**ಟೀಕೆ.**—ಇತರೇತರ=ಅನ್ಯೋನ್ಯವಾದ, ಕ್ರಿಯಾ=ಕ್ರಿಯೆಯಿಂದೆ, ಸಂಹತಂ=ಕಾದುವುದು, ಅದು ತಾಂ, ಆವುದು=ಆವುದುಂಟು, ಅಲ್ಲಿ=ಆ ಯುದ್ಧದಲ್ಲಿ, ಮತ್ತೆ=ಬಱಿಕಂ, ಬಹುವ್ರೀಹಿ=ಬಹುವ್ರೀಹಿಸಮಾಸಂ, ತಗುಳ್ಗುಂ= ಎಯ್ದುವುದು; ಆದಿ ಪದಾಂತ್ಯದಲ್ಲಿ= ಮೊದಲ ಪದದ ಕಡೆಯಲ್ಲಿ, ಆತ್ವವಿಧಿ= ಆಕಾರದ ವಿಧಿ, ಸಂಗತಂ= ಎಯ್ದಲ್ಪಡುವುದು; ಚರಮಕ್ಕೆ = ಕಡೆಯ ಪದದಂತ್ಯಕ್ಕೆ, ಇತ್ವಂ, ಎಯ್ದಲ್ಪಡುವುದು. ॥ ೧೮೫ ॥

**ಟೀಕೆ.**—ಬಹುವ್ರೀಹಿಯ, ಕಡೆಗೆ=ಅಂತ್ಯಕ್ಕೆ, ಬಹುಳಂ=ಬಹುಳವಾಗಿ, ಅತ್ವಂ, ಅಡಸುವುದು=ಪೊರ್ದುಗೆಯುಪ್ಪುದು; ಬಹುಳಮೆಂಬುದಱಿಂದೆ ಇಕಾರವುಂ ಬರ್ಪುದೆಂಬುದರ್ಥಂ; ಅಗ್ರಂ=ಪದಾಂತ್ಯಂ, ಇಲ್ಲೆಂದು=ಇಲ್ಲವೆಂದು, ಇರೆ, ಕಡೆಗೆ=ಅಂತ್ಯಕ್ಕೆ, ಲಿತ್ವಂ=ಲಿಕಾರಂ, ತಾಂ, ಅಕ್ಕುಂ=ಆಗುವುದು; ಕೊಲ್ವೆಡೆಯೊಳ್=ಕೊಲ್ವನೆಂಬೆಡೆ

**ವೃತ್ತಿ.**— ಬಹುವ್ರೀಹಿಯ ಕಡೆಯೊಳಕಾರಮುಂ ಬಹುಳದಿನಿಕಾರಮು ಮಕ್ಕುಂ; ಪರದೊಳಿಲ್ಲವೆಂದಿರೆ ಕಡೆಯಕ್ಕರಕ್ಕೆ ಲಿತ್ವಮಕ್ಕುಂ; ಪರದೊಳ್ ಕೊಳ್ವಂ ಎಂದಿರೆ ಕುಲಿ ಎಂದಾದೇಶಮಕ್ಕುಂ.

**ಪ್ರಯೋಗಂ.**—ಅತ್ವಕ್ಕೆ-ಅಲರ್ಗಣ್ಣಂ, ಬಟ್ಟದೊಡೆಯಂ, ಕೇಸಡಿಯಂ, ಕುಡುವಿಲ್ಲಂ, ಬಲ್ದಲೆಯಂ, ಅಗಲ್ದರದಂ.

ಕಂ॥ ಕುಡುವಿಲ್ಲನೆಚ್ಚ ಕೋಲುಂ।
ನಡೆದು ದಲನ್ದೊರ್ವನೆರ್ದೆಯನೊಳ್ಗಬ್ಬಮುಮೊ॥
ಳ್ನುಡಿಯುಂ ಗೇಯಮುಮುರ್ಚದ।
ಕಡುಗಲ್ಲೆರ್ದೆಯೆರ್ದೆಯನಂಬು ಮೇಣುರ್ಚುಗುಮೇ॥

ಇತ್ವಕ್ಕೆ—ಕಡುಗೆಲಸಿ, ನಿಡುಮೂಗಿ, ಚಲವಾದಿ, ಕೃತ್ತನಾಸಿ, ಕಡು ಚಾಗಿ.

ಲಿಕಾರಕ್ಕೆ—ಪಲ್ಲಿಲಿವಾಯ್, ಅಗಿಲಿಲಿಗಂಧಂ, ಕೂರಿಲಿಕುಡುಗೋಲ್, ಬೆಳಗಿಲಿಗಣ್, ನಾಣಿಲಿವೆಣ್.

ಕಂ॥ ಸೊಗಯಿಸುಗುಮೆ ಪಲ್ಲಿಲಿವಾ।
ಯಗಿಲಿಲಿಗಂಧಂ ಸಮಂತು ಕೂರಿಲಿಕುಡುಗೋಲ್॥
ಮಿಗೆ ನಾಣಿಲಿಯೆನಿಸುವ ವಧು।
ನಗೆಗೆಡೆಯಕ್ಕುಂ ಸಮಸ್ತ ಜಗತೀ ತಳದೊಳ್॥

ಕುಲಿ ಎಂಬುದರ್ಕೆ—ಮಿಾಂಗುಲಿ, ಅಜಿಗುಲಿ.

ಸೂತ್ರಂ॥ ದೊರೆಕೊಳ್ವುದಖಿಳ ವೈಯಾ।
ಕರಣರಿನೊಂದೆಂಬುದರ್ಕೊರೆಂಬಾದೇಶಂ॥
ಎರಡರ್ಕಮಿರಾದೇಶಂ।
ದೊರೆಕೊಳ್ಗುಮದಲ್ಲದಂದುಕಾರಾಭಾವಂ॥ ೧೮೭॥

ಯಲ್ಲಿ, ಕುಲಿ ಎಂಬುದು, ಅಂತ್ಯಾದೇಶಂ=ಕಡೆಯಣ ಪದಕ್ಕಾದೇಶಂ, ಅಕ್ಕುಂ= ಅಪ್ಪುದು. ॥ ೧೮೬ ॥

**ಟೀಕೆ.**—ಅಖಿಳವೈಯಾಕರಣರಿಂ=ಸಮಸ್ತವ್ಯಾಕರಣಜ್ಞರಿಂದೆ, ಒಂದೆಂಬು ದರ್ಕೆ=ಒಂದೆಂಬ ಶಬ್ದಕ್ಕೆ, ಒರ್ ಎಂಬಾದೇಶಂ, ದೊರೆಕೊಳ್ವುದು=ಬರ್ಪುದು; ಎರಡರ್ಕಂ=ಎರಡೆಂಬ ಶಬ್ದಕ್ಕೆಯುಂ, ಇರ್ ಎಂಬಾದೇಶಂ, ದೊರೆಕೊಳ್ಗುಂ= ಬರ್ಪುದು; ಅದಲ್ಲದಂದು=ಆ ಇರಾದೇಶಂ ಬಾರದಂದು, ಉಕಾರ=ಉಕಾರದ,

ವೃತ್ತಿ.—ಒಂದೆಂಬುದರ್ಕೊರಾದೇಶಂ; ಎರಡೆಂಬುದರ್ಕೆ ಇರಾದೇಶಂ; ಅದಲ್ಲದಂದುಕಾರಂ ಲೋಪಮಾಗೆ ಱಟಂ.

ಪ್ರಯೋಗಂ.—ಒರ್ನುಡಿ, ಒರ್ಪೆಸರ್, ಒರ್ಮೊದಲ್, ಒರ್ಪಿಡಿಗೂೞ್. ಒರ್ಪಿಡಿಗೂೞಿಂ ಸಿತಗನ ಕಪ್ಪಡಮುಂ ರಾಜಸೇವೆಯಿಲ್ಲದೆ. ಇರ್ಬೇನೆ, ಇರ್ತೆರೆ, ಇರ್ಕಟ್ಟು, ಇರ್ತಡಿ, ಇರ್ತಡಿಯ ಪೂಮರಂಗಳ ಮೊತ್ತಂ ಕಪಿಕುಲದೊಳಾದೊಡಲ್ಲೊಕ್ಕಲರಿಂ.

ಉಕಾರಲೋಪಕ್ಕೆ—ಎರಟ್ಕಿದುರೆ, ಎರಟ್ಮಾತು.

ಉಕಾರಾಭಾವಮೆಂಬುದು ಉಪಲಕ್ಷಣಮಾಗೆ ವ್ಯಂಜನ ಡಕಾರಕ್ಕೆಲ್ಲಕ್ಕೆಯುಂ ಟಕಾರಾದೇಶಂ ಬರ್ಪುದು:—'ಮಾಟ್ಪುದು, ಬಿಸುಟ್ಪುದು' ಎಂಬಂತೆ.

ಸೂತ್ರಂ ॥ ಚರಮಕ್ಕದರ್ಶನಂ ಮೂ ।
ಱಿರೆ ಬರೆ ಕ ಪ ವರ್ಗಮಗ್ರದೊಳ್ ದ್ವಿರ್ಭಾವಂ ॥
ಪಿರಿದುಂ ಹ್ರಸ್ವಂ ಮೊದಲೊಳ್ ।
ಸ್ವರಮಿದಿರಿರೆ ಮೂಱಱಲ್ಲಿ ಮುಯ್ಯಾದೇಶಂ ॥ ೧೮೮ ॥

ವೃತ್ತಿ.— ವ್ಯಂಜನಂ ಪರಮಾಗೆ ಮೂಱೆಂಬುದಱ ಕಡೆಯಕ್ಕರಕ್ಕೆ ಲೋಪಂ; ಕವರ್ಗ ಪವರ್ಗಂಗಳ್ ಪರಮಾಗೆ ತಮಗೆ ದ್ವಿತ್ವಮುಂ ಮೊದಲ್ಗೆ ಹ್ರಸ್ವಮುಮಕ್ಕುಂ; ಸ್ವರಂ ಪರಮಾಗೆ ಮೂಱೆಂಬುದರ್ಕೆ ಮುಯ್ಯಾದೇಶಂ.

ಪ್ರಯೋಗಂ.—ಅಂತ್ಯಲೋಪಕ್ಕೆ–ಮೂಗೊಂಕು, ಮೂವಿಟ್ಟೆ, ಮೂವೆಳಸು, ಮೂನೂಱು, ಮೂಲೋಕ, ಮೂದಲೆ. ಮೂಲೋಕಕ್ಕೆ ಪೆಂಪಿಂದಗುಂದಲೆಯಾಗಿರ್ದುದು. ಚೋಳನ ತಲೆ ನಾಳೆ ಮೂದಲೆಗೆ ಬಾರದೆ ಮಾಣ್ಬುದೆ ದೇವ.

..............................................................................

ಅಭಾವಂ=ಲೋಪಂ, ಬರ್ಪುದು. ಉಕಾರಾಭಾವಮೆಂಬುದು—ಉಕಾರಂ ಪೋಗೆ, ಪೂರ್ವಸೂತ್ರದಿಂ (ಸೂ. ೧೮೪) ಱಟಾದೇಶಂ ಬರ್ಪುದೆಂಬುದರ್ಥಂ. ॥ ೧೮೭ ॥

ಟೀಕೆ.—ಮೂಱು=ಮೂಱೆಂಬ ಶಬ್ದಂ, ಇರೆ; ಚರಮಕ್ಕೆ=ಅಂತ್ಯಕ್ಕೆ, ಅದರ್ಶನಂ=ಲೋಪಮಪ್ಪುದು; ಕ ಪ ವರ್ಗಂ=ಕವರ್ಗ ಪವರ್ಗಂಗಳ್, ಅಗ್ರದೊಳ್=ಮುಂದುಗಡೆಯಲ್ಲಿ, ಬರೆ, ದ್ವಿರ್ಭಾವಂ=ದ್ವಿತ್ವಮಪ್ಪುದು; ಪಿರಿದುಂ=ವಿಶೇಷವಾಗಿ, ಮೊದಲೊಳ್=ಆದಿಯಲ್ಲಿ, ಹ್ರಸ್ವಂ=ಹ್ರಸ್ವಂ ಬರ್ಪುದು; ಸ್ವರಂ=ಸ್ವರಾಕ್ಷರಂ, ಇದಿರಿರೆ=ಮುಂದಿರೆ, ಮೂಱಱಲ್ಲಿ=ಮೂಱೆಂಬ ಸಂಖ್ಯಾವಾಚಕದಲ್ಲಿ, ಮುಯ್ಯಾದೇಶಂ=ಮುಯ್ಯೆಂಬಾದೇಶಂ ಬರ್ಪುದು. ॥ ೧೮೮ ॥

ಹ್ರಸ್ವದ್ವಿತ್ವಂಗಳ್ಗೆ—ಮುಕ್ಕಪ್ಪೆ. ಮುಕ್ಕೊಡೆ ಪುಷ್ಪವೃಷ್ಟಿ ಸುರದುಂದುಭಿ. ಮುಗ್ಗಡ್ಡೆ, ಮುಪ್ಪೊಟಿಲ್, ಮುಪ್ಪುರಿ, ಮುಮ್ಮೊಱು.

ಪಿರಿದೆಂಬುದಱಿಂ ಕವರ್ಗ ಪವರ್ಗಮಲ್ಲದಲ್ಲಿಯುಮೀ ಲಕ್ಷಣಮಾಯ್ತು—ಮುಚ್ಚೋಟು, ಮುಚ್ಚವಡಿ, ಮುಚ್ಚಿರಿ, ಮುಚ್ಚಾಲ್. ಪಿರಿದೆಂಬುದಱಿಂ ಕ ಪ ವರ್ಗಮಿರ್ದುಂ ಕೆಲವಱೊಳೀ ಮಾರ್ಗಮಿಲ್ಲ—ಮೂಗೇಣ್, ಮೂಗಾವುದಂ, ಮೂಗೋಱು, ಮೂಗಯ್. ಮೂಗಯ್ಯ ಕವಲ್ಕವಲ್ತು ಪಲವುಂ.

ಕಂ ॥ ಕಿಡೆ ಮೂಗೋಱಂ ಬೋೞಿಸಿ ।
ನಡುಪಲೆಯೊಳ್ ಮೆಟ್ಟಿಸನೊಡೆದು ಪಣೆಯಂ......॥

ಮುಯ್ಯೆಂಬುದರ್ಕೆ—ಮುಯ್ಯೊರಡಿ, ಮುಯ್ಯೆಂದಂ, ಮುಯ್ಯಡಿ.

ಮ ॥ ಸ್ರ ॥ ಚಲದಿಂ ಮುಯ್ಯೇೞುಸೂೞ್ ಕ್ಷತ್ರಿಯರನಱಿಸಿ ಕೊಂದಿಕ್ಕಿದಂ ಜಾಮದಗ್ನ್ಯಂ ।

**ಸೂತ್ರಂ** ॥ ಅಕ್ಕುಂ ಲೋಪಂ ನಾಲ್ಕೈ ।
ದರ್ಕ್ಕಂತ್ಯಕ್ಕಾಱಱಾದಿಯೊಳ್ ಹ್ರಸ್ವಂ ತಾ ॥
ನಕ್ಕುಮದೇೞರ್ಕ್ಕೇೞಿಂ ।
ದಕ್ಕುಂ ಚರಮಕ್ಕೆ ಲೋಪಮೆಂಟರ್ಕ್ಕಕ್ಕುಂ ॥ ೧೪ ॥

**ವೃತ್ತಿ.**— ನಾಲ್ಕೈದೆಂಬಿವಱ ಕಡೆಯಕ್ಕರಕ್ಕೆ ಸ್ವರಂಬೆರಸು ಲೋಪಮಕ್ಕುಂ; ಆಱೆಂಬುದಱ ಆದಿಗೆ ಹ್ರಸ್ವಂ; ಏೞು ಎಂಬುದರ್ಕೆ ಏೞ್ ಎಂದಾದೇಶಂ; ಎಂಟಱ ಕಡೆಗೆ ಲೋಪಂ.

**ಪ್ರಯೋಗಂ.**—ನಾಲ್ಕರ್ಕೆ—ನಾಲ್ವಡಿ, ನಾಲ್ವತ್ತು, ನಾಲ್ವೆರಲ್.

ಕಂ ॥ ಉರಗಂ ಕೊಂಡಲ್ಲಿಂ ನಾ ।
ಲ್ವೆರಲನಿತಂ ಕಳೆದು ಕಟ್ಟಿ ಮೇಗಂ ಬೇಗಂ ॥
ಸೆರೆವಿಡುಗೆ ಸುಡುಗೆ ಕಡಿಗಿರ ।
ದರಿದಿಕ್ಕುಗೆ ನೀವಿ ಕಳೆಗೆ ನಿರ್ವಿಷಮಕ್ಕುಂ ॥

........................................................................................................................

**ಟೀಕೆ.**— ನಾಲ್ಕೈದರ್ಕ್ಕೆ = ನಾಲ್ಕೈದು ಎಂಬ ಸಂಖ್ಯಾವಾಚಕಂಗಳ್ಗೆ, ಅಂತ್ಯಕ್ಕೆ=ಕಡೆಯಚಕ್ಷರಕ್ಕೆ, ಲೋಪಂ, ಅಕ್ಕುಂ=ಅಪ್ಪುದು; ಆಱಱ=ಆಱೆಂಬ ಸಂಖ್ಯಾವಾಚಕದ, ಆದಿಯೊಳ್ = ಮೊದಲಲ್ಲಿ, ಹ್ರಸ್ವಂ, ತಾನದು, ಅಕ್ಕುಂ = ಅಪ್ಪುದು; ಏೞರ್ಕ್ಕೆ = ಏೞೆಂಬ ಸಂಖ್ಯಾವಾಚಕಕ್ಕೆ, ಏೞ್ ಎಂದು, ಅಕ್ಕುಂ = ಅಪ್ಪುದು;

ಐದರ್ಕೆ—ಐವಡಿ, ಐಯ್ಗಂಡುಗಂ, ಐಸಾಸಿರಂ.

ಕಂ ॥ ಕೀಱು ಪುಗಲೆನೆಯುಮೆಂತುಂ ।
ವಿಾಱಿದನಂ ಪೊಕ್ಕು ಶಾಲೆಯಂ ಶಾರ್ಙ್ಗಮನಂ ॥
ದೇಱಿಸಿದನಹಿಪ ಶಯ್ಯೆಯ ।
ನೇಱಿದನೈಯ್ವಾಯ ಶಂಖಮುಂ ಪೂರಿಸಿದಂ ॥

ಆಱರ್ಕೆ—ಅಱುವಡಿ, ಅಱುವತ್ತು, ಅಱುನೂಱು, ಅಱುದಿಂಗಳ್.

ಕಂ ॥ ಆಱುದಿಂಗಳಾಯುಮುವುಂಟೆನೆ ।
ಮಱುಗುವುದುಂ ನಲ್ಲರಲ್ಲಿ ತಮ್ಮಿಂ ಮುನ್ನಂ ॥
ಪಱುವಟ್ಟು ಬರೆ ಕನಲ್ವುದು ।
ಮಱುಪ[1]ದೆ ನಾಲ್ವರ್ಗೆ ನರಕದುಃಖದ ತೆಱನಂ ॥

ಏೞರ್ಕೆ—ಏೞ್ಪತ್ತು, ಏೞ್ಕಡಲ್, ಏೞ್ಕರಿ, ಏೞ್ಕೋಟಿ, ಏೞ್ಪೊರೆ.

ಕಂ ॥ ಪರಿಮರ್ದಿಸುವುದು ದುತ್ತೂ ।
ರ ರಸಮುನಿಂಬಾಗಿ ಪಿರಿದು ನೆಲದೊಳ್ ಲವಣಂ ॥
ಬೆರಸೊರಸಿಕೊಂಡು ಪೂಸುಗೆ ।
ಕರಗುಗುಮೇೞ್ಪೊರೆಯೆನಿಪ್ಪ ಕುರುವುಂ ಬೇಗಂ ॥

ಎಂಟರ್ಕೆ—ಎಣ್ದೆಸೆ, ಎಣ್ಪತ್ತು, ಎಣ್ಛಾಸಿರಂ. ನಿಜಸೈನ್ಯಭಾರದಿಂದೆಣ್ದೆಸೆ ಯಾನೆಗಳ್ ಕುಸಿದು ಕುರ್ಗಿದುವು.

ಸೂತ್ರಂ ॥ ಪತ್ತು ಪರಮಾಗಲೊಡಮೊಂ ।
ಬತ್ತು ತೊಮೆಂದಕ್ಕುಮಗ್ರದೊಳ್ ನೂಱಿರೆ ಮೇಣ್ ॥
ಮತ್ತಂ ಸಾಸಿರಮಿರೆ ನೆಲ ।
ಸಿತ್ತೊಂಬಯ್ಯೆಂದು ವಿಬುಧರಿಂದಾದೇಶಂ ॥ ೧೯೦ ॥

---

ಎಂಟರ್ಕೆ=ಎಂಟೆಂಬ ಸಂಖ್ಯಾವಾಚಕಕ್ಕೆ, ಚರಮಕ್ಕೆ=ಅಂತ್ಯಾಕ್ಷರಕ್ಕೆ, ಲೋಪಂ, ಅಕ್ಕುಂ=ಅಗುವುದು. ॥ ೧೮೯ ॥

ಟೀಕೆ.—ಪತ್ತು=ಪತ್ತೆಂಬ ಸಂಖ್ಯಾವಾಚಕಂ, ಪರಂ=ಮುಂದಣ ಪದಂ, ಆಗಲೊಡಂ, ಒಂಬತ್ತು=ಒಂಬತ್ತೆಂಬುದು, ತೊಮ್ ಎಂದು, ಅಕ್ಕುಂ=ಆಗುವದು ; ಮೇಣ್=ಅದಲ್ಲದೆ, ಅಗ್ರದೊಳ್=ಮುಂದೆ, ನೂಱು=ನೂಱೆಂಬ ಸಂಖ್ಯಾವಾಚಕಂ, ಇರೆ, ಮತ್ತಂ=ಅದಲ್ಲದೆ, ಸಾಸಿರಂ=ಸಾಸಿರವೆಂಬುದು, ಇರೆ=ಪರದಲ್ಲಿರೆ, ವಿಬುಧರಿಂದೆ= ವಿದ್ವಾಂಸರಿಂದೆ, ಒಂಬಯ್ ಎಂದು, ಆದೇಶಂ, ನೆಲಸಿತ್ತು=ನೆಲೆಗೊಂಡಿತ್ತು. ॥೧೯೦॥

1. ನೆ ಸುಜನರ್ಗ್ಗೆ.

ವೃತ್ತಿ.—ಪತ್ತೆಂಬುದು ಪರಮಾದೊಡೆ ಒಂಬತ್ತರ್ಕೆ ತೊಮ್ ಎಂದಾದೇಶಮಕ್ಕುಂ; ಪರದೊಳ್ ನೂಱುರ್ದೊಡಂ ಮೇಣ್ ಸಾಸಿರಮಿರ್ದೊಡಂ ಒಂಬತ್ತರ್ಕೆ ಒಂಬಯ್ ಎಂದಾದೇಶಮಕ್ಕುಂ.

ಪ್ರಯೋಗಂ.—ತೊಂಬತ್ತು, ಒಂಬಯ್ನೂಱು, ಒಂಬಯ್ಸಾಸಿರಂ.

ಕಂ ॥ ಸಾಸಿರ ಯೋಜನಮುಚ್ಚು ಸು ।
ರಾಸುರ ಸಂಸೇವ್ಯಮಾಗಿ ತೊಂಬತ್ತೊಂಬ ॥
ಯ್ಸಾಸಿರ ಯೋಜನಮಂ ನೆಗೆ ।
ದೀ ಸುರಗಿರಿ ಪೆಂಪನೇಂ ಪುದುಂಗೊಳಿಸಿದುದೋ ॥

ಸೂತ್ರಂ ॥ ಪತ್ತರ್ಕೆ ಪಯಿಂನೆಂದಾ ।
ದತ್ತಾದೇಶಂ ಸಮಂತು ಸಾಸಿರಮಿದಿರೊಳ್ ॥
ಪತ್ತುಗೆಗೊಳೆ ನೂಱರ್ಕಂ ।
ಮತ್ತಂ ಸಾಸಿರಕಮಂತ್ಯಲೋಪಂ ವಿರಳಂ ॥ ೧೯೧ ॥

ವೃತ್ತಿ.—ಸಾಸಿರಂ ಪರದೊಳಿರೆ ಪತ್ತರ್ಕೆ ಪಯಿನ್ನೆಂದು ಆದೇಶಂ; ನೂಱರ್ಕಂ ಮತ್ತಂ ಸಾಸಿರಕ್ಕಂ ಕೆಱದೆಡೆಯೊಳ್ ಅಂತ್ಯಲೋಪಮಕ್ಕುಂ.

ಪ್ರಯೋಗಂ.—ಪತ್ತರ್ಕೆ—ಪಯಿಂಛಾಸಿರಂ.
ಮ ॥ ಪಡಲಿಟ್ಟಂತಿರೆ ಮಾೞ್ಪಿನೋವದೆ ಪಯಿಂಛಾಸಿರ್ವರಂ ಯುದ್ಧದೊಳ್.

ಅಂತ್ಯಲೋಪಕ್ಕೆ—ನೂರ್ವಡಿ, ನೂರ್ವಾತು, ನೂರ್ಛಾಸಿರಂ; ಸಾಸಿರ್ವಡಿ, ಸಾಸಿರ್ವರ್, ಸಾಸಿರ್ವನಿತೆಯರ್, ಅಯ್ಸಾಸಿರ್ವಪ್ರಿಯ ತನೂಭವರ್.

ಸೂತ್ರಂ ॥ ಪತ್ತರ್ಕೆ ಪನ್ನೆನಿಕ್ಕುಮು ।
ದುತ್ತರಕೊಂದೆರಡು ನೆಲಸೆ ಪದಿಯೆಂದಕ್ಕುಂ ॥
ಮತ್ತೊದವಿ ಮೂಱು ನಾಲ್ಕಿರೆ ।
ಸುತ್ತೇಂ ಸ್ವರಮಿರೆ ನಕಾರವಿಧಿ ಮುಂದೆಲ್ಲಂ ॥ ೧೯೨ ॥

---

ಟೀಕೆ.—ಸಾಸಿರಂ=ಸಾಸಿರವೆಂಬ ಶಬ್ದಂ, ಇದಿರೊಳ್=ಮುಂತೆ, ಪತ್ತುಗೆಗೊಳೆ=ಪೊರ್ದುಗೆಗೊಳೆ, ಪತ್ತರ್ಕೆ=ಪತ್ತೆಂಬುದರ್ಕ್ಕೆ, ಪಯಿನ್ ಎಂದು, ಸಮಂತು=ಹಾಗೆ, ಆದೇಶಂ, ಆದತ್ತು=ಆಯಿತ್ತು; ನೂಱರ್ಕಂ=ನೂಱೆಂಬುದರ್ಕ್ಕಂ, ಮತ್ತಂ=ಬಱಿಕಂ, ಸಾಸಿರಕಂ = ಸಾಸಿರವೆಂಬುದರ್ಕ್ಕಂ, ಸ್ವರ ವ್ಯಂಜನಂಗಳಾವುವು ಪರಮಾದೊಡಂ, ವಿರಳಂ=ನೂಱು ಎಂಬುದಱ ಉಕಾರಂ ಸಾಸಿರವೆಂಬುದಱ ಅಕಾರಂ ವಿರಳವಾಗಿ, ಅಂತ್ಯಲೋಪಂ, ಆಯಿತ್ತು. ॥ ೧೯೧ ॥

**ವೃತ್ತಿ.**—ಒಂದೆಂಬುದುಮೆರಡೆಂಬುದುಂ ಪರಮಾಗೆ ಪತ್ತರ್ಕೆ ಪನ್ ಎಂದಾದೇಶಮಕ್ಕುಂ; ಮತ್ತೆ ಮೂಱು ಮೇಣ್ ನಾಲ್ಕು ಪರಮಾಗೆ ಪತ್ತರ್ಕೆ ಪದಿ ಎಂದು ಆದೇಶಂ; ಸ್ವರಂ ಪರಮಾಗೆ ಮುಂದೆಲ್ಲಂ ನಕಾರಾಗಮಮಕ್ಕುಂ.

**ಪ್ರಯೋಗಂ.**—ಪನ್ ಎಂಬುದರ್ಕೆ—ಪನ್ನೊಂದು, ಪನ್ನೆರಡು.

ಶಾ ॥ ಸಾರಲ್ ಸಲ್ಲದು ಪನ್ನೆರಪ್ಬರಿಸಮುಂ ನಾಡಂ ಕಡಂಗಿರ್ಪುದುಂ ॥

ಪದಿ ಎಂಬುದರ್ಕೆ—ಪದಿಮೂಱು, ಪದಿನಾಲ್ಕು. ಬಾಯಂ ತೆಱೆದೊಡೆ ಪದಿನಾಲ್ಕುಂ ಲೋಕಮಿರ್ದುವು.

ನಕಾರಕ್ಕೆ—ಪದಿನೈದು, ಪದಿನಾಱು, ಪದಿನೇೞು, ಪದಿನೆಂಟು. ಎಲ್ಲ ವೆಂಬುದಱಿಂದೊಂಬತ್ತರ್ಕಿಲ್ಲ.

**ಸೂತ್ರಂ** ॥ ಅತಿಶಯತರಾರ್ಥ ವೀಪ್ಸಾ ।
ನ್ವಿತ ನಾಂತಾವ್ಯಯಪದಕ್ಕಮನುಕೃತಿಪದಕಂ ॥
ಕೃತಮಂತ್ಯಲೋಪಮಿತರಾ ।
ಗತಮತ್ವಂ ನಡುವಿನಂತೆ ಕಡೆಗಂ ಟತ್ವಂ ॥ ೧೯೩ ॥

**ವೃತ್ತಿ.**—ಅತಿಶಯತರಾರ್ಥಮಂ ನುಡಿವ ವೀಪ್ಸೆಯ ನಾಂತಂಗಳಪ್ಪ ಅವ್ಯಯಂಗಳ್ಗಂ ಅನುಕೃತಿಪದಂಗಳ್ಗಂ ಮೊದಲ ಪದದ ಕಡೆಯಕ್ಕರಕ್ಕೆ ಲೋಪಂ;

..................................................................................

**ಟೀಕೆ.**—ಉತ್ತರಕೆ=ಮುಂದಣ್ಗೆ, ಒಂದು=ಒಂದೆಂಬ ಶಬ್ದಂ, ಎರಡು= ಎರಡೆಂಬ ಶಬ್ದಂ, ನೆಲಸೆ=ನೆಲೆಗೊಳೆ, ಪತ್ತರ್ಕೆ=ಪತ್ತೆಂಬುದರ್ಕೆ, ಪನ್=ಪನ್ ಎಂದು, ಅದು, ಎನಿಕ್ಕುಂ=ಎನಿಸುವುದು, ಮತ್ತೆ=ಬೞಿಕಂ, ಮೂಱು=ಮೂಱೆಂಬ ಶಬ್ದಂ, ನಾಲ್ಕು=ನಾಲ್ಕೆಂಬ ಶಬ್ದಂ, ಮುಂದಣ್ಗೆ, ಒದವಿರೆ=ಬರೆ, ಪದಿಯೆಂದು=ಪದಿ ಎಂದು, ಅಕ್ಕುಂ=ಅಪ್ಪುದು; ಸುತ್ತೇಂ=ಭ್ರಮೆಯೇಂ; ಸ್ವರಂ=ಸ್ವರಾದಿಸಂಖ್ಯೆಗಳ್, ಇರೆ= ಮುಂದಿರೆ, ಮುಂದೆ ಎಲ್ಲಂ, ನಕಾರವಿಧಿ=ಪದಿ ಎಂಬುದಱ ಮೇಲೆ ನಕಾರವಿಧಿ, ಅಪ್ಪುದು. ॥ ೧೯೨ ॥

**ಟೀಕೆ.**—ಅತಿಶಯತರ= ಅತ್ಯಂತಾತಿಶಯವಾದ, ಅರ್ಥ= ಅರ್ಥವನುಳ್ಳ, ವೀಪ್ಸಾ=ಇಚ್ಛೆಯೊಡನೆ, ಅನ್ವಿತ=ಕೂಡಿದ, ನಾಂತ= ನಕಾರಾಂತವಾದ, ಅವ್ಯಯ ಪದಕ್ಕಂ=ಅವ್ಯಯಪದಂಗಳ್ಗೆಯುಂ, ಅನುಕೃತಿಪದಕಂ=ಅನುಕರಣಪದಂಗಳ್ಗೆಯುಂ, ಅಂತ್ಯಲೋಪಂ=ಕಡೆಯಣಕ್ಷರದ ಲೋಪಂ, ಕೃತಂ=ಮಾಡಲ್ಪಡುವುದು; ಅತ್ವಂ= ದ್ವಿರುಕ್ತಿಯಾದ ನಡು ಕಡೆ ಎಂಬ ಶಬ್ದಂಗಳ ಮೊದಲ ಪದದ ಕಡೆಗೆ ಅಕಾರಂ, ಇತರ=ಅನ್ಯವಾಗಿ, ಆಗತಂ=ಬರ್ಪುದು; ನಡುವಿನಂತೆ=ನಡುವೆಂಬ ಶಬ್ದದ ಹಾಗೆ, ಕಡೆಗಂ=ಕಡೆಯೆಂಬ ಶಬ್ದದ ಡಕಾರಕ್ಕಂ, ಟತ್ವಂ=ಟಕಾರಂ ಬರ್ಪುದು. ॥ ೧೯೩ ॥

ಅವ್ಯಯಮನುಕರಣಮಲ್ಲದ ಕೆಲವು ಪದಂಗಳೊಳಕಾರಮುಂ ಮುಂತೆ ಪೇೞ್ದ ನಡುವೆಂಬುದಱಂತೆ ಕಡೆಯೆಂಬುದಱ ಡಕಾರಕ್ಕೆ ಟಕಾರಮುಮಕ್ಕುಂ.

**ಪ್ರಯೋಗಂ.**—ಅವ್ಯಯ ಪದಾಂತಲೋಪಕ್ಕೆ—ಕಂಮಕಮ್ಮನೆ, ತಣ್ಣ ತಣ್ಣನೆ, ಮೆಲ್ಲಮೆಲ್ಲನೆ, ಸಪ್ಪಸಪ್ಪನೆ ರಸಂ, ತೊಪ್ಪತೊಪ್ಪನೆ, ತೆಪ್ಪತೆಪ್ಪನೆ ಪುರುಳ್. ನೊಪ್ಪನೊಪ್ಪನೆ ಪೇೞೆಂದು.

ಅನುಕರಣಾಂತಲೋಪಕ್ಕೆ— ತಟತಟನೆ ನೇಸಮರ್ೂಡಿದುದು ಮಿಟ್ಟಿ ಮೂಡುವ ತೆಱದಿಂ. ಗಟಗಟನೆ ಕಣ್ಣೀರ್ ಸುರಿಯೆ ಚಿಂತಿಪ ಪಾರ್ವನ. ಚಳಚಳನೆ ಮಿಂಚಿತ್ತು ಸಿಡಿಲ ಕೈದೀವಿಗೆವೊಲ್.

ಅತ್ವಂ ಬೆರಸು ಟಕಾರಕ್ಕೆ—ನಟ್ಟನಡು, ಕಟ್ಟಕಡೆ. ಕಟ್ಟಕಡೆಯ ಪೆರ್ವಟ್ಟೆ ಕರಂ [1]ಗೆಂಟುಂ.

**ಸೂತ್ರಂ** ॥ ತುದಿ ಮೊದಲೆಂಬ ದಕಾರ ।
ಕ್ಕುದಯಿಸುಗುಂ ದ್ವಿತ್ವವೃತ್ತಿಯಿಂದೆ ತಕಾರಂ ॥
ಮೊದಲೆಂಬ ಲಕಾರಕ್ಕ ।
ಪ್ಪುದದರ್ಶನವಿಧಿ ವಿಶೇಷಮಂ ನುಡಿವೆಡೆಯೊಳ್ ॥ ೧೯೪ ॥

**ವೃತ್ತಿ.**—ವಿಶೇಷಿಸಿ ನುಡಿವೆಡೆಯೊಳ್ ತುದಿ ಮೊದಲೆಂಬಿವಱ ದಕಾರಕ್ಕೆ ದ್ವಿತ್ವಮಪ್ಪ ತಕಾರಾದೇಶಮುಂ ಮೊದಲೆಂಬುದಱ ಲಕಾರಕ್ಕೆ ಲೋಪಮು ಮಕ್ಕುಂ.

**ಪ್ರಯೋಗಂ.**—ತುತ್ತತುದಿ, ಮೊತ್ತಮೊದಲ್.

**ಸೂತ್ರಂ** ॥ ದೂರಾಭೀಕ್ಷ್ಣಣ ವೀಪ್ಸೋ ॥
ದಾರಾನುಕೃತಿ ಕ್ರಿಯಾಸಮಭಿಹಾರ ಸಮಿಾ ॥
ಪೋರುತರ ಚಾಪಳಾದಿಗೆ ।
ಸಾರಂ ಬುಧರಿಂ ಪದಕ್ಕೆ ಯುಗಳೋಚ್ಚಾರಣಂ ॥ ೧೯೫ ॥

---

**ಟೀಕೆ.**—ವಿಶೇಷಮಂ ನುಡಿವೆಡೆಯೊಳ್, ತುದಿ ಮೊದಲ್ ಎಂಬ ದಕಾರಕ್ಕೆ, ದ್ವಿತ್ವವೃತ್ತಿಯಿಂದೆ=ದ್ವಿರ್ಭಾವದ ವರ್ತನೆಯಿಂದೆ, ತಕಾರಂ, ಉದಯಿಸುಗುಂ=ಹುಟ್ಟುವುದು; ಮೊದಲ್ ಎಂಬ ಲಕಾರಕ್ಕೆ, ಅದರ್ಶನವಿಧಿ=ಲೋಪದ ವಿಧಿ, ಅಪ್ಪುದು=ಆಗುವುದು. ॥ ೧೯೪ ॥

1. ಗೊಂಟುಂ.

ವೃತ್ತಿ.—ದೂರದೊಳಂ ಪ್ರತಿಮುಖಾವಲೋಕನದೊಳಂ ವೀಪ್ಸೆಯೊಳಂ ಅನುಕರಣದೊಳಂ ಕ್ರಿಯೆಯನಭಿಮುಖಮಾಗಿ ತೆಗೆದುಕೊಳ್ವೆಡೆಯೊಳಂ ಸಮೀಪ ದೊಳಂ ಚಪಳತೆಯೊಳಂ ಪದಮನೆರಡು ಸೂೞುಚ್ಚರಿಪುದು.

ಪ್ರಯೋಗಂ.—ದೂರಕ್ಕೆ—ಆ ತೋರ್ಪುದಾ ತೋರ್ಪುದೆ ಬಾನೊಳ್ ಧ್ವಜಪಟಂ.

ಅಭೀಕ್ಷಣಕ್ಕೆ—

ಚಂ॥ ಗಿಳಿಯೊಡನೋದಿಯೋದಿ ನುಡಿಗಲ್ತು ಮದಾಲಸ ರಾಜಹಂಸಮುಂ।
ಡಳಿಯೊಡನಾಡಿಯಾಡಿ ನಡೆಗಲ್ತು ಕಳಾಪಿಗಳಾಟಮುಂ ಮನಂ॥
ಗೊಳೆ ನಡೆ ನೋಡಿನೋಡಿ ಕುಣಿಯಲ್ ನೆಱೆ ಕಲ್ತು ಕಳಾಗುಣಂ ಪೊದ।
ೞ್ದಳವಡೆ ಬಾಲಭಾವದೊಳೆ ಭಾವಕಿಯರ್ ಬಳೆವರ್ ನಿರಂತರಂ॥

ವೀಪ್ಸೆಗೆ—ಊರೂರೊಳ್ಕೇರಿಕೇರಿಯೊಳ್ಮನೆಮನೆಯೊಳ್.

ಅನುಕರಣಕ್ಕೆ—ಫುಲ್ಫುಲ್ಲೆನೆ. ಭೋರ್ಭೋರೆನೆ ಪಾಯ್ವುದು ಹಿಮನಗಕ್ಕೆ ಗಂಗಾಸ್ರೋತಂ.

ಕ್ರಿಯಾಸಮಭಿಹಾರಕ್ಕೆ—ನಡೆನಡೆಯೆಂದು; ಇದಿರ್ಚಿದಿರ್ಚಿನೆ ಜಟಾಯು.

ಸಮೀಪಕ್ಕೆ—ಇದೆಇದೆ ಸಾರ್ಕೆಸಾರ್ಕೆ ಗಣಕಾವಳಿ ಪೇೞ್ದ ಮುಹೂರ್ತಂ.

ಚಪಳತೆಗೆ—ಒಪ್ಪಿಸೊಪ್ಪಿಸು, ಅಣ್ಮಣ್ಮು.

ಇವರ್ಕೆಲ್ಲಂ ತ್ರಿಪ್ರಯೋಗಮೊಳವು—

ಕಂ॥ ಬೆಳಗೆಯ್ಗೆ ಗೊಳಿರ್ದ್ದೆತ್ತಂ।
ಕಳರವದಿಂ ಕಯ್ಯನೆತ್ತಿ ಹಯಲತ್ತೆನುತುಂ॥
ಬಳೆಗಳ್ ಘುಲ್ ಘುಲ್ ಘುಲ್ಲೆನೆ।
ಗಿಳಿ ಸೋವಾಕೆಗಳಿನೊಪ್ಪುಗುಂ ಕೆಲವೆಡೆಯೊಳ್॥

---

ಟೀಕೆ.—ದೂರ=ದೂರಕ್ಕೆ, ಅಭೀಕ್ಷ್ಣ=ಅಭಿಮುಖವಾಗಿ ನೋಡುವುದರ್ಕೆ, ವೀಪ್ಸಾ=ಇಚ್ಛೆಗೆ, ಉದಾರ=ಉದಾರವಾದ, ಅನುಕೃತಿ=ಅನುಕರಣಕ್ಕೆ, ಕ್ರಿಯಾಸಮಭಿ ಹಾರ = ಕ್ರಿಯೆಯನಭಿಮುಖವಾಗಿ ಮಾಡಿಕೊಂಬುದರ್ಕೆ, ಸಮೀಪ = ಸಮೀಪಕ್ಕೆ, ಉರುತರಚಾಪಳಾದಿಗೆ=ದೊಡ್ಡಿತ್ತಾದ ಚಪಲತ್ವಂ ಮೊದಲಾದುದರ್ಕೆ, ಬುಧರಿಂ= ವಿದ್ವಾಂಸರಿಂದೆ, ಪದಕ್ಕೆ=ಪದಂಗಳ್ಗೆ, ಯುಗಳೋಚ್ಚರಣಂ=ಎರಡು ವೇಳೆಯುಚ್ಚರಿ ಸುವುದು, ಸಾರಂ=ಶ್ರೇಷ್ಠವಪ್ಪುದು. ॥ ೧೪೫ ॥

ಒಡ್ಡೊಡ್ಡೊಡ್ಡೆನುತೊಡ್ಡಿ ಮೇಳದವಳ್ ಕುಂಕುಮವಾರಿ ಕುಪ್ಪಳಿಸೆ ಪೊಯ್ದಳ್.

ಸೂತ್ರಂ ॥ ಕವಿಮಾರ್ಗ ಗತ ಸಮಾಸಮ ।
ನವನೆನ್ನಱಿವನಿತನೆಯ್ದೆ ಪೇೞ್ದೆಂ ಲೋಕ ॥
ವ್ಯವಹಾರದಿಂದಮಿನ್ನುೞಿ ।
ದುವನಱಿವುದು ಶಬ್ದಪಾರಮಾರ್ಗಮಶಕ್ಯಂ ॥ ೧೯೬ ॥

ಇದು ಸಮಸ್ತ ಶಾಬ್ದಿಕಜನ ಮನೋಜನಿತ ಶಬ್ದ ಸಂದೇಹಶಲ್ಯ
ಚಾರುಚುಂಬಕಾಯಮಾನಾನೂನ ಕರ್ಣಾಟಕ ಲಕ್ಷಣ
ಶಿಕ್ಷಾಚಾರ್ಯ ಸುಕವಿ ಕೇಶಿರಾಜ ವಿರಚಿತ
ಮಪ್ಪ ಶಬ್ದಮಣಿದರ್ಪಣದೊಳ್
ಸಮಾಸಭೇದವಿವರಣಮೆಂಬ
ತೃತೀಯ ಸಂಧಿ
ಸಂಪೂರ್ಣಂ.

---

ಟೀಕೆ.—ಕವಿ=ಕವಿಗಳ, ಮಾರ್ಗ=ಮಾರ್ಗದಲ್ಲಿ, ಗತ=ಎಯ್ದಲ್ಪಟ್ಟ, ಸಮಾಸಮುಂ=ಸಮಾಸಪದವಂ, ಅವಂ, ಎನ್ನಱಿವನಿತಂ= ಎನಗೆ ತಿಳಿವಷ್ಟಂ, ಎಯ್ದೆ=ಚೆನ್ನಾಗಿ, ಪೇೞ್ದೆಂ; ಲೊಕವ್ಯವಹಾರದಿಂದಂ=ವೈಯಾಕರಣ ಲೋಕವ್ಯವಹಾರದಿಂದೆ, ಇನ್ನುೞಿದುವಂ=ಇನ್ನುೞಿದ ಸಮಾಸಂಗಳಂ, ಅಱಿವುದು=ತಿಳಿವುದು ; ಶಬ್ದ=ಶಬ್ದಂಗಳ ; ಪಾರಂ=ಕಡೆಯನೆಯ್ದುವುದು, ಅರ್ಗಂ, ಅಶಕ್ಯಂ=ಶಕ್ಯಮಲ್ತು. ॥ ೧೯೬ ॥

## ನಾಲ್ಕನೆಯ ಸಂಧಿ

---

### ತದ್ಧಿತ ಪ್ರಕರಣಂ

**ಸೂತ್ರಂ** ॥ ಪರಿನಿರ್ವಿಷಪ ಮಾಱಾಡುವ ।
ದೊರೆವಡೆದ ನಿಯೋಗದನೃತದಱಿತದ ಖಣದಾ ॥
ಚರಣದ ಶಿಲ್ಪದ ಮೂಲದ ।
ನರನಂ ಪೇೞ್ವಲ್ಲಿ ಮಾೞ್ಕಿಗ ಪ್ರತ್ಯಯಮಂ ॥ ೧೯೭ ॥

**ವೃತ್ತಿ.**—ಮಾಡುವನೊಳಂ, ಮಾಱುವನೊಳಂ, ನಿಯೋಗಿಯೊಳಂ, ಅನೃತದಲ್ಲಿಯುಂ, ಅಱಿತದಲ್ಲಿಯುಂ, ಖಣಿಯೊಳಂ, ವರ್ತಕನೊಳಂ, ಶಿಲ್ಪಕನಲ್ಲಿಯುಂ, ಮೂಲದಲ್ಲಿಯುಂ—ಇಗ ಪ್ರತ್ಯಯಮಕ್ಕುಂ.

**ಪ್ರಯೋಗಂ.**—ಮಾಡುವಂಗೆ—ಕಬ್ಬಿಗಂ, ಸರವಂದಿಗಂ, ಸಿಂಗರಿಗಂ, ತೋಂಟಿಗಂ. ಕಬ್ಬಿಗಗಳ್ಳರೆಂದು ಕೂಸಾಡಿಸಬಾರದಕ್ಕರದ ರಾಜ್ಯದೊಳೀ ಕವಿಚಕ್ರವರ್ತಿಯಾ.

ಮಾಱುವಂಗೆ—ಗಂದಿಗಂ, ದೂಸಿಗಂ, ತಂಬುಲಿಗಂ.

ಕಂ ॥ ಗಂದಿಗನೆರವಣಿಗಂ ಸರ ।
ವಂದಿಗನಾ ಪಟ್ಟಸಾಲಿಗಂ ಬಾಣಸಿಗಂ ॥
ಮಾಂದರಿಗಂ ಜೋಯಿಸಿಗಂ ।
ಸಂದಱಿಕೆಯ ಕಬ್ಬಿಗಂ ಸಮಂಜಸನೊಳನೇ ॥

ನಿಯೋಗಕ್ಕೆ—ಅಡಪಿಗಂ, ಚಾಮರಿಗಂ, ಕರಹಟಿಗಂ.

ಅನೃತಕ್ಕೆ—ಅಟಮಟಿಗಂ, ಮಾಳಿಗಂ, ಪುಸಿಗಂ.

ಅಱಿತಕ್ಕೆ—ಜೋಯಿಸಿಗಂ, ಲೆಕ್ಕಿಗಂ, ಪೊಲಂಬಿಗಂ.

.................................................................

**ಟೀಕೆ.**—ಪರಿನಿರ್ವಿಷಪ=ಆವುದನಾದೊಡಂ ಮಾಡುವ, ಮಾಱಾಡುವ=ಆವುದನಾದೊಡಂ ಮಾಱಿಯಾಡುವ, ದೊರೆವಡೆದ=ಪ್ರಸಿದ್ಧಿವಡೆದ, ನಿಯೋಗದ, ಅನೃತದ=ಸಟೆಯ, ಅಱಿತದ=ತಿಳಿವಳಿಕೆಯ, ಖಣದ=ಸಾಲದ, ಆಚರಣದ=ಆಚರಣೆಯ, ಶಿಲ್ಪದ, ಮೂಲದ, ನರನಂ=ಮನುಷ್ಯನಂ, ಪೇೞ್ವಲ್ಲಿ=ಪೇೞ್ವಿಡೆಯಲ್ಲಿ, ಇಗ ಎಂಬ, ಪ್ರತ್ಯಯಮಂ; ಮಾೞ್ಕೆ=ಮಾಡುಗೆ. ॥ ೧೯೭ ॥

ಋಣಕ್ಕೆ—ಸಾಲಿಗಂ, ಹಂಗಿಗಂ.

ಆಚರಣಕ್ಕೆ—ದೇಗುಲಿಗಂ, ಅಕ್ಕರಿಗಂ, ಚಂದಸಿಗಂ.

ಶಿಲ್ಪಕ್ಕೆ—ಚಿಪ್ಪಿಗಂ.

ಮೂಲಕ್ಕೆ—ಮೂಲಿಗಂ.

ಸೂತ್ರಂ ॥ ನಡೆಯಿಸುವನೀತನಿದನೆಂ ।
ಬೆಡೆಯೊಳ್ ವಳವಳ್ಳಮಕ್ಕುಮಾಯ್ತ್ತಮುಮಕ್ಕುಂ ॥
ವಡಿಗ ಪ್ರತ್ಯಯಮಕ್ಕುಂ ।
ಬಿಡದಿಕ್ಕುವನೀತನಿದನೆನಿಪ್ಪೊಂದೆಡೆಯೊಳ್ ॥ ೧೯೮ ॥

ವೃತ್ತಿ.— ಈ ನಿಯೋಗಮನೀತಂ ನಡೆಯಿಸುವನೆಂಬಲ್ಲಿ ವಳ ವಳ್ಳ ಆಯ್ತ್ತ ಪ್ರತ್ಯಯಂಗಳಕ್ಕುಂ; ಇದನಿವನಿಕ್ಕುವನೆಂಬೆಡೆಯೊಳ್ ವಡಿಗ ಪ್ರತ್ಯಯ ಮಕ್ಕುಂ.

ಪ್ರಯೋಗಂ.—ವಳಕ್ಕೆ—ಅಡಪವಳಂ, ಮಾಸವಳಂ, ಮಡಿವಳಂ, ಪಡೆವಳಂ, ಸೆಜ್ಜೆವಳಂ, ಅಡುವಳಂ.

ವಳ್ಳಕ್ಕೆ—ಅಡಪವಳ್ಳಂ, ಮಾಸವಳ್ಳಂ, ಮಡಿವಳ್ಳಂ, ಪಡೆವಳ್ಳಂ, ಸೆಜ್ಜೆವಳ್ಳಂ, ಅಡುವಳ್ಳಂ.

ಆಯ್ತ್ತಕ್ಕೆ—ಝುಳಂಬಾಯ್ತ್ತರ್, ಸೂೞಾಯ್ತ್ತರ್, ಕಲ್ಲಾಯ್ತ್ತರ್, ಕಡಂಗಾಯ್ತ್ತರ್, ಅಚ್ಚುಳಾಯ್ತ್ತರ್.

ಕಂ ॥ ಮಡಿವಳ್ಳಮಡಪವಳ್ಳಂ ।
ಪಡೆವಳ್ಳಂ ಸೆಜ್ಜೆವಳ್ಳನಜ್ಜಂ ಬೆಜ್ಜಂ ॥
ಅಡುವಳನೆಂದಿಂತಿವರಂ ।
ಕಡಂಗಿ ಬಿಡೆ ಜಡಿಯದಿರ್ಕೆ ನಯುವಜುವರಸಂ ॥

ಆಯ್ತ್ತಬ್ಧಿಯೆ ಘೂರ್ಣಿಸುವಂ ।
ತಾಯ್ತ್ತರಮನೆಯೊಳಗೆ ಪುಗುವ ಪೊಜಮಡುವ ಝುಳಂ ॥
ಬಾಯ್ತ್ತರ ಸೂೞಾಯ್ತ್ತರ ಕ ।
ಲ್ಲಾಯ್ತ್ತರ ಕಡಂಗಾಯ್ತ್ತರಚ್ಚುಳಾಯ್ತ್ತರ ರಭಸಂ ॥

---

ಟೀಕೆ.—ಈತಂ, ಇದಂ=ಈ ನಿಯೋಗಮಂ, ನಡೆಯಿಸುವಂ=ನಡೆಯಿಸುವಾತಂ, ಎಂಬೆಡೆಯೊಳ್, ವಳವಳ್ಳಂ=ವಳಪ್ರತ್ಯಯ ವಳ್ಳಪ್ರತ್ಯಯಂಗಳ್, ಅಕ್ಕುಂ=

ವಡಿಗಕ್ಕೆ—ಕುಂಚವಡಿಗಂ, ಪುಲ್ಲವಡಿಗಂ, [1]ಕಳ್ಪಡಿಗಂ.

ಸೂತ್ರಂ ॥ ಇವಱೊಳ್ ವ್ಯವಹರಿಪಂ ಮಾ ।
ಡುವನಿವನೆಂಬಲ್ಲಿ ಕಾಱ ಗಾಱಂಗಳ್ ಸಂ ॥
ಭವಿಕುಂ ಗಾಱಾದಿಗೆ ಲೋ ।
ಪವಾದಿಯೊಳ್ ಕಂಮ ಕುಂಬ ಜುಗಮೊದವಲೊಡಂ ॥ ೯೯ ॥

ವೃತ್ತಿ.—ಇವಱೊಳಿವಂ ವ್ಯವಹರಿಪನೆಂಬಲ್ಲಿ ಕಾಱಪ್ರತ್ಯಯಮಕ್ಕುಂ; ಇದನೀತಂ ಮಾಡುವನೆಂಬಲ್ಲಿ ಗಾಱಪ್ರತ್ಯಯಮಕ್ಕುಂ; ಕಂಮ ಕುಂಬ ಶಬ್ದಂಗಳ್ಪೆಱಗಿರೆ ಗಾಱಪ್ರತ್ಯಯದ ಗಕಾರಕ್ಕೆ ಲೋಪಮಕ್ಕುಂ.

ಪ್ರಯೋಗಂ.—ಕಾಱಕ್ಕೆ—ನಡೆವಳಿಕಾಱಂ, ನುಡಿವಳಿಕಾಱಂ, ಇಚ್ಚೆಕಾಱಂ, ಕೈದುಕಾಱಂ, ಬಂದಿಕಾಱಂ, ಗಟ್ಟಿಕಾಱಂ, ಬೇಹುಕಾಱಂ, ನಗೆವಡಿಕಾಱಂ, ನೀಱಂಬಗೆಕಾಱಂ, ಪಾಟಿಕಾಱಂ, ಒಳ್ನುಡಿಕಾಱಂ, ಪಗೆಕಾಱಂ, ಬಗೆಕಾಱಂ.

ಗಾಱಕ್ಕೆ—ಮಾಲೆಗಾಱಂ, ಕಂಚಗಾಱಂ, ಬಳೆಗಾಱಂ, ಗೆಜ್ಜೆಗಾಱಂ, ಮಣಿಗಾಱಂ, ಒಱೆಗಾಱಂ.

ಕಂ ॥ ಅಣಿಯರಮೆಸೆದೊಪ್ಪಿರ್ಪುವು ।
ಮಣಿಗಾಱರ ಕಂಚಗಾಱರೊಱೆಗಾಱರ ತಿಂ ॥
ತಿಣಿಯೆನಿಪ ಮಾಲೆಗಾಱರ ।
ಗಣನಾತೀತಂಗಳಾಪಣಂಗಳೆ ಪೊಟಲೊಳ್ ॥

ಗಕಾರಲೋಪಕ್ಕೆ—ಕಂಮಱಂ, ಕುಂಬಱಂ.

---

ಅಪ್ಪುವು; ಆಯತ್ತಮುಂ=ಆಯತ್ತಪ್ರತ್ಯಯಮುಂ, ಅಕ್ಕುಂ=ಅಪ್ಪುದು; ಈತಂ, ಇದಂ ಬಿಡದೆ ಇಕ್ಕುವಂ, ಎನಿಪ್ಪ=ಎನಿಸುವ, ಒಂದೆಡೆಯೊಳ್=ಒಂದು ತಾವಿನಲ್ಲಿ, ವಡಿಗ ಎಂಬ ಪ್ರತ್ಯಯುಂ, ಅಕ್ಕುಂ=ಅಪ್ಪುದು. ॥ ೯೮ ॥

ಟೀಕೆ.—ಇವಱೊಳ್ ವ್ಯವಹರಿಪಂ, ಇವಂ=ಈ ಕೆಲಸಂಗಳಂ, ಮಾಡುವಂ, ಎಂಬಲ್ಲಿ, ಕಾಱ ಗಾಱಂಗಳ್=ಕಾಱಪ್ರತ್ಯಯ ಗಾಱಪ್ರತ್ಯಯಂಗಳ್, ಸಂಭವಿಕುಂ=ಹುಟ್ಟುವುವು; ಆದಿಯೊಳ್=ಮೊದಲಲ್ಲಿ, ಕಂಮ ಕುಂಬ ಜುಗಂ=ಕಂಮ ಕುಂಬವೆಂಬೆರಡು ಶಬ್ದಂಗಳ್, ಒದವಲೊಡಂ=ಬರಲೊಡನೆ, ಗಾಱಾದಿಗೆ=ಗಾಱ ಎಂಬ ಪ್ರತ್ಯಯದ ಮೊದಲಕ್ಷರಕ್ಕೆ, ಲೋಪಂ, ಬರ್ಪುದು. ॥ ೯೯ ॥

1. ಕಳಸವಡಿಗಂ. ಕ. ಖ.

ಸೂತ್ರಂ ॥ ಪರದೊಳ್ ಗಾಱಪ್ರತ್ಯಯ ।
ವಿರೆ ಸಲ್ಗುಂ ಬಿಂದು ಮೇಣಕಾರಮುದಂತ ॥
ಕ್ಕೊರೆವರಿಚ ಪ್ರತ್ಯಯಮುಂ ।
ಪಿರಿದುಂ ತದ್ಭವನೊಳುಪಧೆಗಕ್ಕುಂ ಹ್ರಸ್ವಂ ॥ ೨೦೦ ॥

ವೃತ್ತಿ.— ಗಾಱಪ್ರತ್ಯಯಂ ಪರದೊಳಿರೆ ಪೂರ್ವದುದಂತಕ್ಕೆ ಬಿಂದುವುಂ ಅಕಾರಮುಮಕ್ಕುಂ. ಅದಱೊಳವಂ ಪುಟ್ಟಿದನೆಂಬಲ್ಲಿ ಇಚಪ್ರತ್ಯಯಮಕ್ಕುಂ; ಕೆಲಂಬೆಡೆಯೊಳುಪಧೆಗೆ ಹ್ರಸ್ವಮಕ್ಕುಂ.

ಪ್ರಯೋಗಂ.— ಬಿಂದುವಿಂಗೆ — ಪಾಡುಂಗಾಱಂ, ಅಲಸುಂಗಾಱಂ, ಓದುಂಗಾಱಂ, ಜೂದುಂಗಾಱಂ.

ಅತ್ವಕ್ಕೆ—ಕಂಚಗಾಱಂ.

ಇಚಪ್ರತ್ಯಯಕ್ಕೆ—ಆಲರಿಚಂ, ಪೊಟಲಿಚಂ.

ಕೆಲವಱೊಳುಪಧೆಗೆ ಹ್ರಸ್ವಂ—(ಕಾಲೂರು+ಇಚಂ) ಕಾಲುರಿಚಂ.

ಸೂತ್ರಂ ॥ ಘನಮಾಗಿ ವರ್ತಿಸುವನೀ ।
ತನಿವಱೊಳೆಂಬಲ್ಲಿ ಕುಟಿಗ ಗ ಪ್ರತ್ಯಯಮುಂ ॥
ಟೆನಿಸುಗುಮುಳಿಗ ಪ್ರತ್ಯಯ ।
ಮನುಕೂಲಂ ಬಾಳ್ವನಿದಱೊಳಿವನೆಂಬೆಡೆಯೊಳ್ ॥ ೨೦೧ ॥

ವೃತ್ತಿ.— ಇವನಿದಱೊಳ್ ಪಿರಿದು ವರ್ತಿಸುವನೆಂಬಲ್ಲಿ ಕುಟಿಗ ಗ ಪ್ರತ್ಯಯಮಕ್ಕುಂ; ಇದಱೊಳಿವಂ ಬಾಳ್ವನೆಂಬಲ್ಲಿ ಉಳಿಗ ಪ್ರತ್ಯಯಮಕ್ಕುಂ.

---

ಟೀಕೆ.—ಪರದೊಳ್=ಮುಂದೆ, ಗಾಱಪ್ರತ್ಯಯಂ, ಇರೆ, ಉದಂತಕ್ಕೆ=ಉಕಾರಾಂತಕ್ಕೆ, ಬಿಂದು=ಸೊನ್ನೆ, ಸಲ್ಗುಂ=ಸಲ್ವುದು; ಮೇಣ್=ಅದಲ್ಲದೆ, ಅಕಾರಂ=ಅತ್ವಂ, ಸಲ್ವುದು; ತದ್ಭವನೊಳ್=ಅದಱೊಳ್ಪುಟ್ಟಿದವನಲ್ಲಿ, ಇಚ (ಎಂಬ) ಪ್ರತ್ಯಯಮುಂ, ಒರೆವರ್=ಪೇಳ್ವರ್; ಪಿರಿದುಂ=ವಿಶೇಷವಾಗಿ, ಉಪಧೆಗೆ=ಅಂತ್ಯದ ಮೊದಲ್ಗೆ, ಹ್ರಸ್ವಂ, ಅಕ್ಕುಂ=ಅಪ್ಪುದು. ॥ ೨೦೦ ॥

ಟೀಕೆ.—ಈತಂ, ಇವಱೊಳ್, ಘನಮಾಗಿ=ವೆಗ್ಗಳವಾಗಿ, ವರ್ತಿಸುವಂ, ಎಂಬಲ್ಲಿ=ಎಂಬರ್ಥದಲ್ಲಿ, ಕುಟಿಗ ಗ ಪ್ರತ್ಯಯಮುಂ=ಕುಟಿಗ ಪ್ರತ್ಯಯ ಗ ಪ್ರತ್ಯಯಂಗಳ್, ಉಂಟೆನಿಸುಗುಂ= ಉಂಟಾಗುವುವು; ಇವಂ, ಇದಱೊಳ್, ಅನುಕೂಲಂ=ಅನುಕೂಲವಾಗಿ, ಬಾಳ್ವಂ, ಎಂಬೆಡೆಯೊಳ್, ಉಳಿಗ (ಎಂಬ) ಪ್ರತ್ಯಯಂ, ಉಂಟೆನಿಸುವುದು. ॥ ೨೦೧ ॥

**ಪ್ರಯೋಗಂ.**—ಕುಟಿಗ ಪ್ರತ್ಯಯಕ್ಕೆ—ಕಲ್ಕುಟಿಗಂ, ನೀರ್ಕುಟಿಗಂ, ಮರ ಕುಟಿಗಂ, ಕಱುಕುಟಿಗಂ, ಕಟ್ಟಿಕುಟಿಗಂ.

ಗ ಪ್ರತ್ಯಯಕ್ಕೆ—ಮಾತುಗಂ, ಬೂತುಗಂ, ಕಂತೆಗಂ, ಕತೆಗಂ, ಬೊಂತೆಗಂ, ಬಿದಿಗಂ, ಸಟೆಗಂ, ನವಸಿಗಂ, ಎಡಗಂ.

ಉಳಿಗ ಪ್ರತ್ಯಯಕ್ಕೆ—ದೇವುಳಿಗಂ, ಮಣ್ಣುಳಿಗಂ. ಮಣ್ಣೊಳ್ ಜೀವಿಸುವ ಪಾವು ಮಣ್ಣುಳಿಗಂ.

**ಸೂತ್ರಂ ||** ಒದವುವುದು ಗುಳಿ ಪ್ರತ್ಯಯ ।
ಮದು ಪೂರ್ವದ ಬಿಂದುವೆರಸು ಶೀಲಗ್ರಹಣಾ ॥
ರ್ಥದೊಳೆತ್ತಮುಣಿ ಪ್ರತ್ಯಯ ।
ಮೊದವುಗುಮನ್ವಿತದಿನುಣ್ಬಸಿದನೆಂಬೆಡೆಯೊಳ್ ॥ ೨೦೨ ॥

**ವೃತ್ತಿ.**— ಶೀಲಗ್ರಹಣಾರ್ಥಂಗಳೊಳ್ ಬಿಂದುವೆರಸು ಗುಳಿ ಪ್ರತ್ಯಯ ಮಕ್ಕುಂ; ಈ ವಸ್ತುವನೀತನುಣ್ಬನೆಂಬಲ್ಲಿ ಉಣಿ ಪ್ರತ್ಯಯಮಕ್ಕುಂ.

**ಪ್ರಯೋಗಂ.**—ಗುಳಿ ಪ್ರತ್ಯಯಕ್ಕೆ—ಆಟಂಗುಳಿ, ಸಾಲಂಗುಳಿ, ಲಂಚಂ ಗುಳಿ, ಕುತ್ತಂಗುಳಿ.

ಉಣಿ ಪ್ರತ್ಯಯಕ್ಕೆ—ಅಮರ್ದುಣಿ, ಕಳ್ಳುಣಿ, ತುಡುಗುಣಿ.

**ಸೂತ್ರಂ ||** ಉಕ ಕುಳಿ ಯಾಳಿ ಪ್ರತ್ಯಯ ।
ಮಿಕಮುಂ ಶೀಲಾದಿ ವಿಶ್ರುತಾರ್ಥದೊಳಡಿಗ ॥
ಪ್ರಕಟ ಪ್ರತ್ಯಯಮಕ್ಕುಂ ।
ಸುಕವಿಗಳಿಂ ತದನುಕೂಲ ವರ್ತನ ವಿಧಿಯೊಳ್ ॥ ೨೦೩ ॥

---

**ಟೀಕೆ.**—ಶೀಲಗ್ರಹಣಾರ್ಥದೊಳ್ = ಆವುದಾನೊಂದು ಸ್ವಭಾವಾರ್ಥದಲ್ಲಿ, ಪೂರ್ವದ=ಆದಿಯ, ಬಿಂದುವೆರಸು=ಬಿಂದುಗೂಡಿದ, ಗುಳಿ ಪ್ರತ್ಯಯಂ=ಗುಳಿ ಎಂಬ ಪ್ರತ್ಯಯಂ, ಒದವುವುದು=ಬರುವುದು; ಇದಂ, ಅನ್ವಿತದಿಂ=ಹಿತದಿಂದೆ, ಉಣ್ಬಂ= ಊಟವಂ ಮಾಡುವಂ, ಎಂಬೆಡೆಯೊಳ್, ಎತ್ತಂ=ಆವ ದೆಸೆಯಲ್ಲಿಯುಂ, ಉಣಿ (ಎಂಬ) ಪ್ರತ್ಯಯಂ, ಒದವುಗುಂ=ಬರ್ಪುದು. ॥ ೨೦೨ ॥

**ಟೀಕೆ.**—ಶೀಲಾದಿ=ಶೀಲ ಮೊದಲಾದ, ವಿಶ್ರುತಾರ್ಥದೊಳ್=ಪ್ರಸಿದ್ಧವಾದರ್ಥ ದಲ್ಲಿ, ಉಕ ಕುಳಿ ಯಾಳಿ ಪ್ರತ್ಯಯಂ=ಉಕಪ್ರತ್ಯಯ ಕುಳಿಪ್ರತ್ಯಯ ಆಳಿಪ್ರತ್ಯಯಂಗಳ್, ಇಕಮುಂ=ಇಕ ಎಂಬ ಪ್ರತ್ಯಯಮುಂ (ಅಪ್ಪುದು); ಸುಕವಿಗಳಿಂ=ಕವೀಶ್ವರ ರಿಂದೆ, ತದನುಕೂಲ=ಆ ಶೀಲಾದಿ ವಿಶ್ರುತಾರ್ಥದೊಳನುಕೂಲವಾದ, ವರ್ತನವಿಧಿ

**ವೃತ್ತಿ.**—ಶೀಲಾದಿ ನಿಖಿಲಾರ್ಥಂಗಳೊಳ್ ಉಕ ಪ್ರತ್ಯಯಮುಂ ಕುಳಿ ಪ್ರತ್ಯಯಮುಂ ಆಳಿ ಪ್ರತ್ಯಯಮುಂ ಇಕ ಪ್ರತ್ಯಯಮುಂ ಆಕ್ಕುಂ; ತದನುಕೂಲ ವರ್ತನದೊಳ್ ಅಡಿಗ ಪ್ರತ್ಯಯಮಕ್ಕುಂ.

**ಪ್ರಯೋಗಂ.**—ಉಕ ಪ್ರತ್ಯಯಕ್ಕೆ—ಕಟ್ಟುಕಂ, ತಟ್ಟುಕಂ, ಅಂಟುಕಂ, ಕಾರುಕಂ, ಸಂಣುಕಂ, ಬೊಂದುಕಂ, ದಿಂಡುಕಂ.

ಕುಳಿ ಪ್ರತ್ಯಯಕ್ಕೆ— ಪೋರ್ಕುಳಿ, ಓಡುಕುಳಿ, ಹುಡುಕುಳಿ, ಪಾಡುಕುಳಿ, ಮಱುಕುಳಿ, ಪೇಂಕುಳಿ, ಇಱುಕುಳಿ, ಆಯ್ಕುಳಿ.

ಆಳಿ ಪ್ರತ್ಯಯಕ್ಕೆ— ಓದಾಳಿ, ಜೂದಾಳಿ, ಮಾಱಾಳಿ, ಏಱಾಳಿ, ಪಡ ಪಾಳಿ, ಮಾತಾಳಿ, ಕೇಡಾಳಿ, ಸಿಗ್ಗಾಳಿ.

ಕಂ ॥ ಮಾಱಾಳಿಯುಮೋದಾಳಿಯು ।
ಮೇಱಾಳಿಯುಮುಪ್ಪನಾಗಿ ಪಡಪಾಳಿಯೆ ಕೇಳ್ ॥
ನೀಱಂ ಜೂದಾಳಿ ಕರಂ ।
ನೀಱಿಗೆ ಮಾತಾಳಿ ಕಳಿಯೆ ಸಿಗ್ಗಾಳಿಯಿವಂ ॥

ಇಕ ಪ್ರತ್ಯಯಕ್ಕೆ—ಕರಿಕಂ, ಅಸಿಕಂ, ದಸಿಕಂ, ಬಾರಿಕಂ.

ಅಡಿಗ ಪ್ರತ್ಯಯಕ್ಕೆ—ದೇವಡಿಗಂ, ಸಾವಡಿಗಂ, ಪೂವಡಿಗಂ.

**ಸೂತ್ರಂ** ॥ ವ್ಯವಹರಣ ತದಾಚರಣ ।
ಪ್ರವಣನೊಳಕ್ಕುಂ ಸಮಂತುಗಪ್ರತ್ಯಯಮೊಂ ॥
ದುವುದಟಗ ಪ್ರತ್ಯಯಮಾ ।
ಡುವ ದೀವಿಗೆವಿಡಿವ ಹರದುಗೆಯ್ವನಿಬರೊಳಂ ॥ ೨೦೪ ॥

---

ಯೊಳ್=ವರ್ತನದ ವಿಧಿಯಲ್ಲಿ; ಅಡಿಗ= ಅಡಿಗ ಎಂಬ, ಪ್ರಕಟ= ಪ್ರಸಿದ್ಧವಾದ, ಪ್ರತ್ಯಯಂ, ಆಕ್ಕುಂ=ಆಗುವುದು. ॥ ೨೦೩ ॥

**ಟೀಕೆ.**—ವ್ಯವಹರಣ=ವ್ಯವಹಾರದಲ್ಲಿ, ತದಾಚರಣ = ಅದಱಾಚರಣೆಯಲ್ಲಿ, ಪ್ರವಣನೊಳ್=ಪ್ರಸಿದ್ಧವಾದವನಲ್ಲಿ, ಸಮಂತು=ಹಾಗೆ, ಉಗ (ಎಂಬ) ಪ್ರತ್ಯಯಂ, ಆಕ್ಕುಂ = ಆಗುವುದು ; ಆಡುವ=ಗಟಿವಿಡಿದಾಡುವ, ದೀವಿಗೆವಿಡಿವ = ದೀವಿಗೆಯಂ ಪಿಡಿವ, ಹರದುಗೆಯ್ವ=ಬೇಹಾರವಂ ಮಾಡುವ, ಆನಿಬರೊಳಂ = ಆನಿಬರಲ್ಲಿಯುಂ, ಆಟಗ ಪ್ರತ್ಯಯಂ= ಅಟಗ ಎಂಬ ಪ್ರತ್ಯಯಂ, ಒಂದುವುದು= ಪೊರ್ದುಗೆಯಾಗು ವುದು. ॥ ೨೦೪ ॥

**ವೃತ್ತಿ.**—ವ್ಯವಹರಿಸುವನೊಳಂ ಅಲ್ಲಿ ವರ್ತಿಸುವನೊಳಂ ಉಗ ಪ್ರತ್ಯಯ ಮಕ್ಕುಂ; ಗಱಿವಿಡಿದಾಡುವ ದೀವಿಗೆವಿಡಿವ ಎಲೆವಿಡಿದಾಡುವನೊಳಂ ಅಟಿಗ ಪ್ರತ್ಯಯಮಕ್ಕುಂ.

**ಪ್ರಯೋಗಂ.**—ಉಗ ಪ್ರತ್ಯಯಕ್ಕೆ—ನಾರುಗಂ, ಬೇರುಗಂ, ಊರುಗಂ, ಕಾಟುಗಂ, ನೇಣುಗಂ, ಹೆಣ್ಣುಗಂ, ಮಣ್ಣುಗಂ.

ಅಟಿಗ ಪ್ರತ್ಯಯಕ್ಕೆ—ಕೊಲ್ಲಟಿಗಂ, ದೀವಟಿಗಂ, ಮಾವಟಿಗಂ.

**ಸೂತ್ರಂ** ‖ ಏನಾನುಮೊಂದು ಭಾವಮು ।
ನಾನಲ್ ಸಲ್ವವನೊಳಱಿಗೆ ಕ ಪ್ರತ್ಯಯಮಂ ‖
ಪೀನಂ ತದ್ವರ್ತನಗತ ।
ಮಾನವನೊಳ್ ತಿಳಿಗೆ ಮತ್ತಿಲ ಪ್ರತ್ಯಯಮಂ ‖ ೨೦೫ ‖

**ವೃತ್ತಿ.**— ಆವುದಾನುಮೊಂದು ಭಾವಮಂ ತಳೆದಿರ್ಪವನೊಳ್ ಕ ಪ್ರತ್ಯಯಮಕ್ಕುಂ; ಅದಱೊಳೀತಂ ವರ್ತಿಪನೆಂಬಲ್ಲಿ ಇಲ ಪ್ರತ್ಯಯಮಕ್ಕುಂ.

**ಪ್ರಯೋಗಂ.**— ಕ ಪ್ರತ್ಯಯಕ್ಕೆ— ಬಡಕಂ, ನಿಡುಕಂ, ಒಣಕಂ, ಕಿಡುಕಂ, ಬಣುಕಂ, ಅಟಿಕಂ, ಬೆಳುಕಂ, ತೊಳಕಂ, ಕೊಟಿಕಂ.

ಇಲ ಪ್ರತ್ಯಯಕ್ಕೆ—ಪಚ್ಚೆಯಿಲಂ, ಪಡೆಯಿಲಂ, ಗಾವಿಲಂ.

**ಸೂತ್ರಂ** ‖ ಇದಱೊಳಿದುಂಟೆಂಬರ್ಥದೊ ।
ಳುದಯಿಪುದುಳ್ಳೊಡೆಯ ವಂತ ಶಬ್ದಂ ಕೈಕೊ ‖
ಳ್ವುದು ವಣಿಗ ಪ್ರತ್ಯಯಮು ।
ಣ್ಬುದು ಜೀವಿತಮಾಗಿ ಬಱಿದೆ ತಿನುತಿರ್ಪವನೊಳ್ ‖ ೨೦೬ ‖

---

**ಟೀಕೆ.**—ಏನಾನುಮೊಂದು=ಆವುದಾನೊಂದು, ಭಾವಮಂ, ಆನಲ್ = ಧರಿಸಲ್, ಸಲ್ವವನೊಳ್=ಸಲ್ವವನಲ್ಲಿ, ಕ (ಎಂಬ) ಪ್ರತ್ಯಯಮಂ, ಅಱಿಗೆ = ತಿಳಿಗೆ; ಪೀನಂ=ವಿಶೇಷವಾಗಿ, ತದ್ವರ್ತನ=ಆ ವರ್ತನೆಯಲ್ಲಿ, ಗತ=ಎಯ್ದಲ್ಪಟ್ಟ, ಮಾನವನೊಳ್=ಮನುಷ್ಯನಲ್ಲಿ, ಮತ್ತೆ = ಬಱಿಕಂ, ಇಲ (ಎಂಬ) ಪ್ರತ್ಯಯಮಂ; ತಿಳಿಗೆ= ಅಱಿಗೆ. ‖ ೨೦೫ ‖

**ಟೀಕೆ.**—ಇದಱೊಳ್, ಇದು, ಉಂಟೆಂಬ ಅರ್ಥದೊಳ್, ಉಳ್ಳೊಡೆಯ ವಂತ ಶಬ್ದಂ=ಉಳ್ಳ ಒಡೆಯ ವಂತ—ಎಂಬ ಶಬ್ದಂ, ಉದಯಿಪುದು = ಹುಟ್ಟುವುದು; ಉಣ್ಬುದು=ತಿಂಬುದು, ಜೀವಿತಮಾಗಿ=ಬಾಟ್ಟಿಯಾಗಿ, ಬಱಿದೆ = ಸುಮ್ಮನೆ, ತಿನುತಿರ್ಪವನೊಳ್=ತಿನುತಿರ್ಪವನಲ್ಲಿ, ವಣಿಗ (ಎಂಬ) ಪ್ರತ್ಯಯಂ; ಕೈಕೊಳ್ವುದು= ಸ್ವೀಕಾರವಪ್ಪುದು. ‖ ೨೦೬ ‖

**ವೃತ್ತಿ.**—ಇಲ್ಲಿ ಈ ವಸ್ತುವುಂಟೆಂಬರ್ಥದೊಳ್ ಉಳ್ಳ ಒಡೆಯ ವಂತ ಪ್ರತ್ಯಯಮಕ್ಕುಂ: ಊಟಮೇ ಜೀವಿತಮಾಗಿ ಬಾಳ್ವಿನೊಳ್ ವಣಿಗ ಪ್ರತ್ಯಯಮಕ್ಕುಂ.

**ಪ್ರಯೋಗಂ.**—ಉಳ್ಳ ಪ್ರತ್ಯಯಕ್ಕೆ — ಧನಮುಳ್ಳಂ, ಧಾನ್ಯಮುಳ್ಳಂ, ಗುಣಮುಳ್ಳಂ, ಓದುಳ್ಳಂ, ತೇಜಮುಳ್ಳಂ.

ಒಡೆಯ ಪ್ರತ್ಯಯಕ್ಕೆ—ಪೆರ್ಮೆಯೊಡೆಯಂ, ಜಗದೊಡೆಯಂ, ನೆಲನೊಡೆಯಂ, ಕೊಡೆಯೊಡೆಯಂ, ಜಾಣೊಡೆಯಂ.

ವಂತ ಪ್ರತ್ಯಯಕ್ಕೆ—ಸಿರಿವಂತಂ, ಜಯವಂತಂ, ಜಸವಂತಂ, ಹೂನ್ಯವಂತಂ.

ವಣಿಗ ಪ್ರತ್ಯಯಕ್ಕೆ—ಕೂಳ್ವಣಿಗಂ.

ಮತ್ತೆ ಕೆಲವಱೊಳುಂಟು—ಲಂಚವಣಿಗಂ, ಸಾಲವಣಿಗಂ.

**ಸೂತ್ರಂ** ॥ ಅನೆಯ ಪ್ರತ್ಯಯಮನಿತಿನಿ ।
ತೆನಿತೆಂಬ ಲಸತ್ಪ್ರಮಾಣಪೂರಣದೊಳ್ ನೆ ॥
ಟ್ಟನೆ ಸಂಖ್ಯಾಪೂರಣದೊಳ್ ।
ಜನಿಯಿಪುದು ಮೆ ಯೆಂಬುದಕ್ಕುಮೆಣಿಸುವ ಸೂಟಿೞೊಳ್ ॥ ೨೦೭ ॥

**ವೃತ್ತಿ.**—ಅನಿತಿನಿತೆನಿತೆಂಬ ಪ್ರಮಾಣಪೂರಣದೊಳಂ ಸಂಖ್ಯಾಪೂರಣದೊಳಂ ಅನೆಯ ಪ್ರತ್ಯಯಮಕ್ಕುಂ; ಎಣಿಸುವ ಸೂಟಿೞೊಳ್ ಮೆ ಯೆಂಬುದಕ್ಕುಂ.

**ಪ್ರಯೋಗಂ.**—ಅನೆಯ ಪ್ರತ್ಯಯಕ್ಕೆ—ಅನಿತನೆಯಂ, ಇನಿತನೆಯಂ, ಎನಿತನೆಯಂ, ಒಂದನೆಯಂ, ಎರಡನೆಯಂ, ಮೂಱನೆಯಂ, ಪದಿನಾಱನೆಯಂ, ನೂಱನೆಯಂ, ಐನೂಱನೆಯಂ.

ಮೆ ಪ್ರತ್ಯಯಕ್ಕೆ—ಒರ್ಮೆ, ಇರ್ಮೆ, ಮೂರ್ಮೆ, ಸಾಸಿರ್ಮೆ, ಪಲರ್ಮೆ.

---

**ಟೀಕೆ.**—ಅನಿತು, ಇನಿತು, ಎನಿತು—ಎಂಬ, ಲಸತ್=ಒಪ್ಪುವ, ಪ್ರಮಾಣಪೂರಣದೊಳ್, ನೆಟ್ಟನೆ=ವ್ಯಕ್ತವಾಗಿ, ಸಂಖ್ಯಾ=ಲೆಕ್ಕದ, ಪೂರಣದೊಳ್, ಅನೆಯ (ಎಂಬ) ಪ್ರತ್ಯಯಂ, ಜನಿಯಿಪುದು=ಹುಟ್ಟಿಪುವುದು; ಎಣಿಸುವ ಸೂಟಿೞೊಳ್, ಮೆ ಎಂಬುದು=ಮೆ ಎಂಬ ಪ್ರತ್ಯಯಂ, ಅಕ್ಕುಂ=ಆಗುವುದು. ॥ ೨೦೭ ॥

**ಸೂತ್ರಂ** ॥ ಕಾಂತಾ ವಿಷಯದೊಳಾದನು ।
ದಂತಕ್ಕಿತಿಯುಂ ತದಾದಿ ಲೋಪಮುಮಕ್ಕುಂ ॥
ಭ್ರಾಂತೇನಳಂತಮುಂ ನೆಗ ।
ೞ್ಗುಂ ತೋಱದದರ್ಕದಂತದಲ್ಲಿ ವಿಕಲ್ಪಂ ॥ ೨೦೮ ॥

**ವೃತ್ತಿ.**—ಸ್ತ್ರೀವಿಷಯದೊಳದಂತಕ್ಕೆ ಇತಿ ಪ್ರತ್ಯಯಮುಂ, ಆದಿಯಿತ್ವಕ್ಕೆ ಲೋಪಮುಂ, ಆದಮೆಂಬುದಱಿಂ ಕಿಱಿದೆಡೆಯೊಳಂ ಅದಂತಮಲ್ಲದಲ್ಲಿಯುಂ ಅದಂತಕ್ಕೆ ವಿಕಲ್ಪಮಿಲ್ಲದಳ್ ಪ್ರತ್ಯಯಮುಂ, ಆದಮೆಂಬುದಱಿಂದಂತಕ್ಕಿತ್ವಮುಮಕ್ಕುಂ.

**ಪ್ರಯೋಗಂ.**—ಇತಿಗೆ—ಚಾಮರಿಗಿತಿ, ಮದ್ದಳಿಗಿತಿ, ಆವುಜಿಗಿತಿ, ಕನ್ನಡಿಗಿತಿ, ಲೇಪಾಳಿಗಿತಿ, ಪಂಚಮಿಗಿತಿ, ವೇರಡಿಗಿತಿ, ಕುಱುಂಬಿತಿ, ತೆಲುಂಗಿತಿ, ತೆಲ್ಲಿಗಿತಿ, ಚಿಪ್ಪಿಗಿತಿ, ಒಕ್ಕಲಿಗಿತಿ; ಒಕ್ಕಲಿತಿಯೆಂದುಮುಂಟು.

ಕಂ ॥ ಒಕ್ಕಲಿತಿ ಜೋಡೆಯಾದಂ ।
ತಕ್ಕುಮವಳ್ ಸಿತಗೆ ಪತಿಗೆ ಮಿಗೆ ಕಾಯ್ವಳ್ ನೋ ॥
ಟಕ್ಕೆ ಕಡುಸೊಂದಿ ನಾಣಿಲಿ ।
ಬಕ್ಕಂಬಯಲೊಳಮುದಾರುಮುಂ [1] ಬಂಚಿಸುವಳ್ ॥

ಅದಂತಮಲ್ಲದಲ್ಲಿಯುಂ—ಅಕ್ಕಸಾಲಿತಿ, ಒಕ್ಕಲಿತಿ.

ಇತ್ವಲೋಪಕ್ಕೆ—ಮಣಿಗಾರ್ತಿ, ಕಂಚಗಾರ್ತಿ, ಗಾಡಿಕಾರ್ತಿ, ಬೇಟಕಾರ್ತಿ, ಘಟ್ಟಿವಳ್ತಿ, ಸೆಜ್ಜೆವಳ್ತಿ. ಪೊಲತಿ, ನರತಿ, ಎಡತಿ—ಎಂಬ ಮೂಱು ಶಬ್ದದೆತ್ವಕ್ಕೆ ಸಮಾಸದಂತಿರತ್ವಂ.

ವಿಕಲ್ಪಮಿಲ್ಲದ ಅಳ್ ಪ್ರತ್ಯಯಕ್ಕೆ—ಅವಳ್, ಇವಳ್, ಉವಳ್, ಆವಳ್, ಪೆಱಳ್, ಕಿಱಿಯಳ್, ಪಿರಿಯಳ್, ಅಸಿಯಳ್, ಇನಿಯಳ್, ಇಂಮಿದಳ್, ಕಂಮಿದಳ್.

---

**ಟೀಕೆ.**—ಕಾಂತಾವಿಷಯದೊಳ್=ಸ್ತ್ರೀವಿಷಯಲ್ಲಿ, ಆದಂ=ಆದಂ ಎಂಬ ಪೀನಗ್ರಹಣದಿಂದೆ, ಅದಂತಕ್ಕೆ=ಅಕಾರಾಂತಕ್ಕೆ, ಇತಿಯುಂ=ಇತಿಯೆಂಬ ಪ್ರತ್ಯಯಮುಂ, ತದಾದಿಲೋಪಮುಂ=ಆ ಇತಿ ಪ್ರತ್ಯಯದಾದಿಗೆ ಲೋಪಮುಂ, ಅಕ್ಕುಂ=ಅಪ್ಪುದು; ಭ್ರಾಂತೇಂ=ಭ್ರಮೆಯೇಂ, ಅಳಂತಮುಂ=ಅಳ್ ಎಂಬ ಪ್ರತ್ಯಯಾಂತಮುಂ, ನೆಗೞ್ಗುಂ=ಪ್ರಸಿದ್ಧಿವಡೆವುದು; ಅದರ್ಕೆ = ಆ ಅಳ್ ಎಂಬ ಪ್ರತ್ಯಯಕ್ಕೆ, ಅದಂತದಲ್ಲಿ=ಅಕಾರಾಂತದಲ್ಲಿ; ವಿಕಲ್ಪಂ, ತೋರದು=ಬಾರದು. ॥ ೨೦೮ ॥

1. ಭಂಜಿಸುವಳ್.

ಕೃತ್ತಿನೊಳಮಪ್ಪುದರ್ಕೆ—ಓಸರಿಸಿದಳ್, ರಾಗಿಸಿದಳ್, ಭೋಗಿಸಿದಳ್, ಪಾಡಿಸಿದಳ್, ನೋಡಿದಳ್, ಒಸೆದಳ್, ಬೆಸೆದಳ್.

ಎತ್ವಕ್ಕೆ—ಜೋಡೆ, ಸಿತಗೆ, ಚದುರೆ, ಪಾಣ್ಬೆ.

**ಸೂತ್ರಂ** ॥ ಚರಮಸ್ವರಕ್ಕೆ ಚರಮಾ ।
ಕ್ಷರಕಕ್ಕುಂ ಲೋಪಮಗ್ರದೊಳ್ ತದ್ಧಿತಮೊಂ ॥
ದಿರೆ ತನ್ನೊಳಾ ಸಮಾಸಾಂ ।
ತರದಾಖ್ಯಾತಕದ ಲಕ್ಷಣಂ ವ್ಯವಹರಿಕುಂ ॥ ೨೦೯ ॥

**ವೃತ್ತಿ.**—ತದ್ಧಿತಪ್ರತ್ಯಯಂ ಪರದೊಳಿರೆ ಅಂತ್ಯಸ್ವರಕ್ಕಮಂತ್ಯಾಕ್ಷರಕ್ಕಂ ಲೋಪಂ; ಸಮಾಸಾಂತರಾಳ ಲಕ್ಷಣಮುಂ ಆಖ್ಯಾತ ಲಕ್ಷಣಮುಂ ತದ್ಧಿತದೊಳೆ ವ್ಯವಹರಿಸುಗುಂ.

**ಪ್ರಯೋಗಂ.**—ಸ್ವರಲೋಪಕ್ಕೆ—ಘಟ್ಟವಳ್ತಿ, ಸೆಜ್ಜೆವಳ್ತಿ, ತೆಲುಂಗಿತಿ, ಜೋಸರಿಗಿತಿ, ದೇಸಿಗಿತಿ, ಕಂಮಱತಿ, ನಾವಿದಿತಿ, ಹಾದರಿಗಿತಿ.

ಱು, ದು—ಎಂಬ ಅಕ್ಷರಂಗಳ ಲೋಪಕ್ಕೆ—ಏಱುತಕ್ಕೆ ಏತಂ; ಓದಿಂಗೆ ಓತಂ.

ಸಮಾಸ ಲಕ್ಷಣಕ್ಕೆ— ಮಾಲೆಗಾಱನೆಂಬುದಱ ಱಕಾರಕ್ಕೆ ರೇಫಮಾದುದಾಗಿ ಮಾಲೆಗಾರ್ತಿ; ಕಂಚಗಾರ್ತಿ, ಪಂಚಗಾರ್ತಿ, ಒಲಗಾರ್ತಿ, ಜಾಲಗಾರ್ತಿ, ಬಳೆಗಾರ್ತಿ.

ಆಖ್ಯಾತ ಲಕ್ಷಣಕ್ಕೆ—ಆಟಂ, ಪಾಟಂ, ನೋಟಂ, ಕೂಟಂ.

**ಸೂತ್ರಂ** ॥ ಇತ್ವದೊಳುತ್ವದೊಳಾ ಹ್ರ ।
ಸ್ವೈತ್ವದೊಳೊಂದಿದ ವಕಾರಮಕ್ಕುಂ ಭಾವ ॥
ಕ್ಕತ್ವಂ ಪಿರಿದುಂ ಪೆಱಗುಂ ।
ಟತ್ವಂ ಹ್ರಸ್ವೈತ್ವ ತತ್ವಮದು ಕೆಲವೆಡೆಯೊಳ್ ॥ ೨೧೦ ॥

---

**ಟೀಕೆ.**—ಅಗ್ರದೊಳ್=ಮುಂದೆ, ತದ್ಧಿತಂ = ತದ್ಧಿತಪ್ರತ್ಯಯಂ, ಒಂದಿರೆ= ಕೂಡಿರೆ, ಚರಮಸ್ವರಕ್ಕೆ = ಅಂತ್ಯದ ಸ್ವರಕ್ಕೆ, ಚರಮಾಕ್ಷರಕ್ಕೆ = ಅಂತ್ಯದಕ್ಷರಕ್ಕೆ, ಲೋಪಂ, ಅಕ್ಕುಂ=ಅಪ್ಪುದು ; ತನ್ನೊಳ್=(ತದ್ಧಿತಮೊಂದಿದ ಪದಂ) ತನ್ನಲ್ಲಿ, ಆ ಸಮಾಸಾಂತರದ=ಆ ಸಮಾಸ ಪ್ರಕರಣ ಮಧ್ಯದ, ಆಖ್ಯಾತಕದ=ಆಖ್ಯಾತ ಪ್ರಕರಣದ, ಲಕ್ಷಣಂ=ಲಕ್ಷಣಮಾದ ಸೂತ್ರಂ, ವ್ಯವಹರಿಕುಂ=ವ್ಯವಹರಿಸುವುದು. ॥ ೨೦೯ ॥

ವೃತ್ತಿ.—ಇಕಾರದೊಳಂ, ಉಕಾರದೊಳಂ, ಎಕಾರದೊಳಂ, ಕೂಡಿದ ಭಾವಾರ್ಥದ ವಕಾರವಿರ್ದೊಡೆ ಅದಱ ಪಿಂದೆ ಅಕಾರಮಕ್ಕುಂ; ಅತ್ವಮೆತ್ವ ಮುಂ ತಳೆದ ತಕಾರಂ ಕೆಲವೆಡೆಯೊಳಕ್ಕುಂ.

ಪ್ರಯೋಗಂ.—ವಕಾರಕ್ಕೆ—ತೊಱವಿ, ಅಳವಿ, ಬಳವಿ; ಉಱವು, ಪೆಳವು (ಪೆಱವು), ಕೆಳವು, ತೆರವು, ಎರವು; ಮಱವೆ, ತೆಱವೆ, ಪಳವೆ, ಎಳವೆ.

ವ್ಯಂಜನದ ಮೇಲಣತ್ವಕ್ಕೆ—ಸಿಲವು, ಒಲವು, ಬಲವು, ಕಳವು, ಸಲವು, ಗೆಲವು, ಇರವು, ಬರವು.

ಪಿರಿದೆಂಬುದಱಿಂದತ್ವವಿಲ್ಲದಲ್ಲಿಯುಂ ಇವಾದುವು—ಉಱುವು, ಕಳೆವು, ತಿಳಿವು, ಅಱುವು, ಪಱುವು.

ತಕಾರಕ್ಕೆ—ಅಱುತಂ, ಕಡಿತಂ, ಉಱುತಂ, ಏತಂ, ಓತಂ, ಏರ್ತಂ, ಪೋರ್ತಂ.

ತೆಕಾರಕ್ಕೆ—ಅಗಱ್ತೆ, ಪೊಗಱ್ತೆ, ನೆಗಱ್ತೆ, ಪುಗುತೆ.

ಸೂತ್ರಂ ॥ ಪ್ರಕಟಂ ಚೇತನಭಾವದೊ ।
ಳಿಕೆ ತನಮುಮೆಯಕ್ಕುಮುಱುದ ಭಾವದೊಳಮೆಯುಂ ॥
ಗೆ ಕೆ ಮೆಗಳುಮುತ್ವದಿತ್ವದ ।
ಪಕಾರಮುಂ ಮತ್ತುಕಾರಮುಂ ಸಮನಿಸುಗುಂ ॥ ೨೧೧ ॥

---

ಟೀಕೆ.—ಭಾವಕ್ಕೆ=ಭಾವಾರ್ಥಕ್ಕೆ, ಇತ್ವದೊಳ್, ಉತ್ವದೊಳ್, ಆ ಹ್ರಸ್ವೈತ್ವ ದೊಳ್=ಆ ಹ್ರಸ್ವವಾದೆಕಾರದಲ್ಲಿ, ಒಂದಿದ=ಕೂಡಿದ, ವಕಾರಂ, ಅಕ್ಕುಂ=ಆಗುವುದು; ಅತ್ವಂ=ಅಕಾರಂ, ಪಿರಿದುಂ=ವಿಶೇಷವಾಗಿ, ಪೆಱಗೆ=ಪಿಂದೆ, ಉಂಟು=ಉಂಟಾಗುವು ದು; ಕೆಲವೆಡೆಯೊಳ್=ಕೆಲವು ತಾವಿನಲ್ಲಿ, ಆತ್ವಂ ಹ್ರಸ್ವೈತ್ವ ತತ್ವಂ=ಅಕಾರಮುಂ ಹ್ರಸ್ವದೆಕಾರಮುಂ ಕೂಡಿದ ತಕಾರಂ, ಅದು, ಆಗುವುದು. ॥ ೨೧೦ ॥

ಟೀಕೆ.—ಚೇತನಭಾವದೊಳ್ = ಚೈತನ್ಯ ಭಾವದಲ್ಲಿ, ಇಕೆ ತನಂ ಉಮೆ (ಎಂಬ), ಪ್ರತ್ಯಯಂ, ಪ್ರಕಟಂ = ಪ್ರಸಿದ್ಧಂ, ಅಕ್ಕುಂ = ಆಗುವುದು; ಉಱುದ ಭಾವದೊಳ್ = ಚೇತನಭಾವವಲ್ಲದುಱುದ ಭಾವದಲ್ಲಿ, ಅಮೆಯುಂ = ಅಮೆ ಎಂಬ ಪ್ರತ್ಯಯಮುಂ; ಗೆ ಕೆ ಮೆಗಳುಂ=ಗೆ ಪ್ರತ್ಯಯ, ಕೆ ಪ್ರತ್ಯಯ, ಮೆ ಪ್ರತ್ಯಯಂಗಳ್, ಉತ್ವದ=ಉಕಾರದ, ಇತ್ವದ=ಇಕಾರದ, ಪಕಾರಮುಂ=ಪತ್ವಮುಂ, ಮತ್ತೆ=ಬಱಿಕಂ, ಉಕಾರಮುಂ=ಉ ಪ್ರತ್ಯಯಮುಂ, ಸಮನಿಸುಗುಂ=ಬರ್ಪುವು. ॥ ೨೧೧ ॥

ವೃತ್ತಿ.—ಚೇತನಭಾವದೊಳಿಕೆ ಯೆಂಬುದುಂ ತನವೆಂಬುದುಂ ಉಮೆ ಯೆಂಬುದುಂ ಅಕ್ಕುಂ; ಉೞಿದ ಭಾವದೊಳ್ ಅಮೆ ಎಂದುಂ, ಗೆ ಎಂದುಂ, ಕೆ ಎಂದುಂ, ಮೆ ಎಂದುಂ, ಪು ಎಂದುಂ, ಪಿ ಎಂದುಂ, ಉ ಎಂದುಂ ಅಕ್ಕುಂ.

ಪ್ರಯೋಗಂ.—ಇಕೆಗೆ—ಉನ್ನತಿಕೆ, ಉದ್ಧತಿಕೆ, ಆಯತಿಕೆ, ಪನ್ನತಿಕೆ, ಬಲ್ಗಂಡಿಕೆ, ಮಾನಸಿಕೆ.

ಇಕೆಗೆ ದ್ವಿತ್ವಮುಂಟು—ಉನ್ನತಿಕ್ಕೆ, ಉದ್ಧತಿಕ್ಕೆ.

ವ್ಯಂಜನಾಂತದ ಮೇಲೆ ಇಕೆಯಂ ಪತ್ತಿಸಲಾಗದು—ಕಾಣಿಕೆ, ಪೂಣಿಕೆ, ಜಾಣಿಕೆ, ತೆರಳಿಕೆ—ಎಂದೊಡೆ ದೋಷಂ.

ತನಕ್ಕೆ—ಕಲಿತನಂ, ಚದುರತನಂ, ಆಳ್ತನಂ, ಜಾಣತನಂ, ಎಗ್ಗತನಂ, ಮರುಳ್ತನಂ, ಪೆಣ್ತನಂ. ಸಂಸ್ಕೃತದೊಳಿದು ಸಲ್ಲದು; ಆರೋಹಕತನಮೆಂಬುದಬದ್ಧಂ.

ಉಮೆಗೆ—ತಕ್ಕುಮೆ.

ಅಮೆಗೆ—ತೀರಮೆ, ಅೞ್ಕಮೆ.

ಗೆಕಾರಕ್ಕೆ—ಉಡುಗೆ, ಪಸುಗೆ, ಪೊಲ್ಗೆ, ಬಿಸುಗೆ, ಪಣ್ಣುಗೆ, ಪತ್ತುಗೆ.

ಕೆಕಾರಕ್ಕೆ—ಮಡಿಕೆ, ಹಡಿಕೆ, ಕಾಣ್ಕೆ, ಪೂಣ್ಕೆ, ತೆರಳ್ಕೆ, ನಿಮಿರ್ಕೆ, ತೋರ್ಕೆ.

ಮೆಕಾರಕ್ಕೆ-ಒಲ್ಮೆ, ಬಲ್ಮೆ, ಜಾಣ್ಮೆ, ಕಡುಮೆ, ವ್ಯೆಮೆ, ಕೂರ್ಮೆ, ಪೆರ್ಮೆ.

ಪುಕಾರಕ್ಕೆ—ಪಡೆಪು, ಪರೆಪು, ಕಡುಪು, ಬಲ್ಪು, ಮೆಲ್ಪು, ತಣ್ಪು, ನುಣ್ಪು, ಕರ್ಪು, ಪಸುರ್ಪು, ಕೆಂಪು, ಪೆಂಪು, ಬಿಸುಪು.

ಪಿಕಾರಕ್ಕೆ—ಕಲ್ಪಿ, ನೋಂಪಿ.

ಉಕಾರಕ್ಕೆ—ಉಗ್ಗು, ಸಿಗ್ಗು, ಎಗ್ಗು, ಕಿವುಡು, ಕೆಂಚು, ಗುಜ್ಜು, ಬೆಜ್ಜು.

**ಸೂತ್ರಂ** ॥ ಪಿರಿದೆಂಬೀ ರೇಫಕ್ಕಾ ।
ಚರಿಪರ್ ಭಾವಾರ್ಥಮಪ್ಪುದೊಂದು ಪುಕಾರಂ ॥
ಪರಮಾಗೆ ಬಿಂದುವಂ ವಾ ।
ಕ್ಪರಿಣತರಿಂ ಸಿದ್ಧಮಾಯ್ತು ಪೆಂಪೆಂಬ ಪದಂ ॥ ೫೩ ॥

**ವೃತ್ತಿ.**—ಭಾವಾರ್ಥದ ಪುಕಾರಂ ಪರವಾಗೆ, ಪಿರಿದೆಂಬ ರೇಫಕ್ಕೆ ಬಿಂದುವುಂ ಪೆಜಿಗಣಿತ್ವಕ್ಕೆತ್ವಮುಮಕ್ಕುಂ.

**ಪ್ರಯೋಗಂ.**—ಪೆಂಪು.

ಭಾವದೊಳ್ ಕ ಪ್ರತ್ಯಯಮುಂಟು—ಉಡುಕಂ, ನಡುಕಂ—ಎಂಬಂತೆ.

**ಸೂತ್ರಂ ॥** ಮೊದಲಿತ್ವಕ್ಕೇತ್ವಮುಮು ।
ತ್ವದೊಳೋತ್ವಮುಮೆಸೆವ ದೀರ್ಘಮುಂ ಚರಮಕ್ಕ ॥
ತ್ವದ ವಿಧಿಯುಂ ಧಾತುಗೆ ಭಾ ।
ವದೊಳಕ್ಕುಂ ಧಾತು ನಿಜದೆ ಭಾವಮುದಕ್ಕುಂ ॥ ೨೧೩ ॥

**ವೃತ್ತಿ.**—ಭಾವದೊಳ್ ಧಾತುವಿನ ಮೊದಲಿಕಾರಕ್ಕೇಕಾರಮುಂ ಉತ್ವದೊಳೋತ್ವಮುಂ ಹ್ರಸ್ವಕ್ಕೆ ದೀರ್ಘಮುಮಕ್ಕುಂ; ಧಾತುವಿನ ಕಡೆಯೊಳತ್ವಮಕ್ಕುಂ; ಸಹಜಧಾತುವುಂ ಭಾವಮಕ್ಕುಂ.

**ಪ್ರಯೋಗಂ.**—ಏತ್ವಕ್ಕೆ—ಕಿಡು, ಇಸು ಧಾತುಗಳ್ಗೆ ಕೇಡು, ಏಸು.

ಓತ್ವಕ್ಕೆ—ತೋಡು, ಕೋಡು. ತೋಡೆಂಬುದು ಜೆಟ್ಟಿಯೊಳಮೆಣೆಯೊಳಮುಂಟು.

ದೀರ್ಘಕ್ಕೆ—ಈಡು, ಬೀಡು, ಸೂಡು.

ಕಡೆಯಣತ್ವಕ್ಕೆ—ಆಟಂ, ಪಾಟಂ, ತೀಟಂ, ನೋಟಂ.

ನಿಜಧಾತುಗೆ—ತಡೆ, ನಡೆ, ಬಿಸು, ಪೆರ್ಚು, ಮರ್ಚು, ಉರ್ಕು, ಸೊರ್ಕು, ದಾಂಟು, ಕೂಂಟು.

---

ಟೀಕೆ.—ಭಾವಾರ್ಥಂ, ಅಪ್ಪುದು=ಆಗುವುದಾದ, ಬಿಂದು ಪುಕಾರಂ=ಬಿಂದು ಪು ಪ್ರತ್ಯಯಂ, ಪರವಾಗೆ, ಪಿರಿದೆಂಬ ರೇಫಕ್ಕೆ=ಪಿರಿದು ಎಂಬ ಶಬ್ದದ ರೇಫೆಗೆ, ಬಿಂದುವುಂ=ಸೊನ್ನೆಯುಂ, ಅಱಿಪರ್=ಬಲ್ಲವರ್; ವಾಕ್ಪರಿಣತರಿಂ=ವಾಕ್ಪ್ರೌಢರಿಂದ, ಪೆಂಪೆಂಬ ಪದಂ=ಪೆಂಪು ಎಂಬ ಪದಂ, ಸಿದ್ಧಂ=ಪ್ರಸಿದ್ಧಂ, ಅಯ್ತು=ಆಯಿತು. ॥ ೨೧೨ ॥

ಟೀಕೆ.—ಧಾತುಗೆ=ಧಾತುಗಳ್ಗೆ, ಭಾವದೊಳ್ = ಭಾವಾರ್ಥದಲ್ಲಿ, ಮೊದಲ=ಆದಿಯ, ಇತ್ವಕ್ಕೆ=ಇಕಾರಕ್ಕೆ, ಏತ್ವಮುಂ=ಏಕಾರವುಂ, ಉತ್ವದೊಳ್=ಉಕಾರದಲ್ಲಿ, ಓತ್ವಮುಂ = ಓಕಾರವುಂ, ಎಸೆವ = ಒಪ್ಪುವ, ದೀರ್ಘಮುಂ, ಚರಮಕ್ಕೆ = ಅಂತ್ಯಕ್ಕೆ, ಅತ್ವದ ವಿಧಿಯುಂ=ಅಕಾರದ ವಿಧಿಯುಂ, ಅಕ್ಕುಂ=ಅಪ್ಪುದು; ಧಾತು, ನಿಜದೆ=ನಿಜದಿಂದ, ಭಾವಂ=ಭಾವಾರ್ಥಂ, ಅಕ್ಕುಂ=ಆಗುವುದು. ॥ ೨೧೩ ॥

ಸೂತ್ರಂ ॥ ವೋಲೆಂಬಂತೆಂಬೆರಡುಂ ।
ಪೋಲಿಸುವೆಡೆಗಾದುವಂತೆವೋಲೆನಲಕ್ಕುಂ ॥
ವೋಲೊಳ್ ಹ್ರಸ್ವಮುಮಕ್ಕುಂ ।
ಮೇಲತ್ವಕ್ಕುಂಟು ಬಿಂದು ವತ್ವಂ ಬತ್ವಂ ॥ ೨೧೪ ॥

ವೃತ್ತಿ.—ವೋಲೆಂಬುದುಂ ಅಂತೆ ಎಂಬುದುಂ ಉಪಮೆಯೊಳ್ ಪ್ರತ್ಯೇಕಂ ಪತ್ತುಗುಂ; ಅಂತೆ ವೋಲೆಂಬೆರಡುಮನೊಂದುಮಾಡಿ ಪೇೞ್ದೊಡಂ ಪುನರುಕ್ತ ದೋಷಮಿಲ್ಲ; ವೋಲೆಂಬುದು ವಿಕಲ್ಪದಿಂ ಹ್ರಸ್ವಮುಮಕ್ಕುಂ; ಅದಂತಕೆ ಮುಂದೆ ವಕಾರಂ ಬಿಂದುವೆರಸು ಬಕಾರಮಕ್ಕುಂ.

ಪ್ರಯೋಗಂ.—

ಕಂ ॥ ಜಲಧಿಯ ವೋಲ್ ಗಂಭೀರಂ ।
ಬಲವೈರಿಯ ವೋಲ್ ಸಮಗ್ರ ವಿಭವಸನಾಥಂ ॥
ಕುಲಗಿರಿವೋಲ್ ನಿಷ್ಕಂಪಂ ।
ಬಲಿಯಂತೆವೊಲಧಿಕದಾನಿ ದಾನವಿನೋದಂ ॥

ಗಿರಿಯಂತೆ ಬಿಣ್ಣಿದಂ ಸುರ ।
ಕರಿಯಂತೆ ಬಲಾಢ್ಯನಬ್ಧಿಯಂತೆ ಗಭೀರಂ ॥

ಚಂ॥ ರವಿಸುತನಂತೆವೋಲಧಿಕದಾನಿ ಪರಾಕ್ರಮಿ ಸಿಂಗದಂತೆವೋಲ್ ॥

ಆ ಮುನೀಶ್ವರಂ ಶಾಂತರಸದ ಕಡಲವೊಲಿರ್ದಂ.

ನಿಜತೇಜಂ ನೀಳ್ದ ಕರ್ನೆಯ್ದಿಲವೊಲಿರೆ ತನುಚ್ಛಾಯೆಯಿಂ ।

ಬಲಿಯಂತೆವೊಲಧಿಕದಾನಿ ದಾನವಿನೋದಂ.

ಕಂ ॥ ಇಂದ್ರಂಬೋಲ್ ವಿಭವಯುತಂ ।
ಚಂದ್ರಂಬೋಲ್ ಕಾಂತಿವಂತನಾದಿತ್ಯಂಬೋಲ್ ॥
ಸಾಂದ್ರಪರಿಪೂರ್ಣ ತೇಜನು ।
ಪೇಂದ್ರಂಬೋಲ್ ನೀತಿನಿಪುಣನಾ ನರನಾಥಂ ॥

---

ಟೀಕೆ.—ಪೋಲಿಸುವೆಡೆಗೆ=ಪೋಲಿಸುವ ತಾವಿಂಗೆ, ವೋಲೆಂಬಂತೆಂಬೆರಡುಂ= ವೋಲ್ ಎಂಬ ಅಂತೆ ಎಂಬ ಎರಡುಂ, ಆದುವು = ಸಲುವಳಿಯಾದುವು; ಅಂತೆ ವೋಲೆನಲ್=ಅಂತೆವೋಲ್ ಎಂದು ಪೇೞಲ್, ಅಕ್ಕುಂ=ಆಗುವುದು; ವೋಲೊಳ್= ವೋಲ್ ಎಂಬುದಱಲ್ಲಿ, ಹ್ರಸ್ವಮುಂ, ಅಕ್ಕುಂ = ಆಗುವುದು; ಮೇಲೆ = ಆ ಮೇಲೆ,

ಸೂತ್ರಂ ॥ ಒದವಿರ್ಕುಂ ಸಂಸ್ಕೃತವೆ।
ನ್ನದೆ ಕನ್ನಡವೆನ್ನದಾಯಿಲ ಪ್ರತ್ಯಯಮುಂ ॥
ತದು ತಾನಿವು ಮೊದಲಾಗಱಿ।
ವುದನ್ವಿತರ್ ಮಿಕ್ಕ ತದ್ಧಿತ ಪ್ರತ್ಯಯಮುಂ ॥ ೨೧೫ ॥

ವೃತ್ತಿ.—ಸಂಸ್ಕೃತವೆಂಬ ಕರ್ಣಾಟಕವೆಂಬ ವಿವರಣೆಯಿಲ್ಲದೆ ಆಯಿಲ ಪ್ರತ್ಯಯಮೆಲ್ಲಿಯುಂ ಪತ್ತುಗುಂ.

ಪ್ರಯೋಗಂ.—ಸಂಸ್ಕೃತಕ್ಕೆ, ಆಯಿಲಪ್ರತ್ಯಯಕ್ಕೆ — ಗಾಥಾಯಿಲಂ, ರೇಖಾಯಿಲಂ.

ಕನ್ನಡಕ್ಕೆ—ಓಜಾಯಿಲಂ, ಅಡ್ಡಾಯಿಲಂ, ಗೋಟಾಯಿಲಂ, ಪುಗ್ಗಾಯಿಲಂ.

ಈ ಪೇೞ್ದುವು ಮೊದಲಾಗಿ, ನಡೆವಳಿ, ನುಡಿವಳಿ, ಸಲ್ವಳಿ—ಎಂಬಂತೆ, ವಳಿ ಪ್ರತ್ಯಯಂ ಮುಂತಾದುೞಿದ ಪ್ರತ್ಯಯಂಗಳಂ ಶಾಬ್ದಿಕರಿನನ್ವಿತರಱಿವುದು.

ಇದು ಸಮಸ್ತ ಶಾಬ್ದಿಕಜನ ಮನೋಜನಿತ ಶಬ್ದ ಸಂದೇಹಶಲ್ಯ
ಚಾರುಚುಂಬಕಾಯಮಾನಾನೂನ ಕರ್ಣಾಟಕ ಲಕ್ಷಣ
ಶಿಕ್ಷಾಚಾರ್ಯ ಸುಕವಿ ಕೇಶಿರಾಜ ವಿರಚಿತ
ಮಪ್ಪ ಶಬ್ದಮಣಿದರ್ಪಣದೊಳ್
ತದ್ಧಿತಪ್ರತ್ಯಯನಿರೂಪಣಮೆಂಬ
ಚತುರ್ಥಸಂಧಿ
ಸಂಪೂರ್ಣಂ.

---

ಅತ್ವಕ್ಕೆ=ಅಕಾರಾಂತಶಬ್ದಕ್ಕೆ, ಬಿಂದು=ಸೊನ್ನೆ, ಉಂಟು=ಉಂಟಾಗುವುದು; ವತ್ವಂ=ವಕಾರಂ, ಬತ್ವಂ=ಬಕಾರಂ, ಆಗುವುದು. ॥ ೨೧೪ ॥

ಟೀಕೆ.—ಸಂಸ್ಕೃತವೆನ್ನದೆ=ಸಂಸ್ಕೃತ ಶಬ್ದವೆನ್ನದೆ, ಕನ್ನಡವೆನ್ನದೆ=ಕರ್ಣಾಟಕ ಶಬ್ದವೆನ್ನದೆ, ಆಯಿಲ (ಎಂಬ) ಪ್ರತ್ಯಯಂ, ಅಂತು, ಅದು ತಾಂ, ಒದವಿರ್ಕುಂ=ಬರ್ಪುದು; ಇವು ಮೊದಲಾಗಿ, ಅನ್ವಿತರ್=ವಿದ್ವಾಂಸರ್, ಮಿಕ್ಕ, ತದ್ಧಿತಪ್ರತ್ಯಯಮುಂ=ತದ್ಧಿತಪ್ರತ್ಯಯಂಗಳಂ, ಅಱಿವುದು=ತಿಳಿವುದು. ॥ ೨೧೫ ॥

## ಐದನೆಯ ಸಂಧಿ

### ಆಖ್ಯಾತಪ್ರಕರಣಂ

ಸೂತ್ರಂ ॥ ಕ್ರಿಯೆಯರ್ಥದ ಮೂಲಂ ಪ್ರ।
ತ್ಯಯ ರಹಿತಂ ಧಾತುವದನಭಾವ ಕ್ರಿಯೆಯೊಳ್ ॥
ನಿಯತಂ ನಿಶ್ಚಯಿಪುದು ಬುಧ।
ಚಯಮಾ ಧಾತುಗೆ ವಿಭಕ್ತಿಯಾಱುಾಗಿರ್ಕುಂ ॥ ೨೧೬ ॥

ವೃತ್ತಿ.—ಕ್ರಿಯಾರ್ಥದ ಮೂಲಂ ವಿಭಕ್ತಿರಹಿತಂ ಧಾತುವೆಂಬುದು; ಆ ಧಾತುವಂ ಪ್ರತಿಷೇಧದ ಕ್ರಿಯೆಯ ವಿಭಕ್ತಿಯಂ ಕಳೆಯೆ ಕಾಣಲಕ್ಕುಂ; ಧಾತುಗಳ್ಗೆ ವಿಭಕ್ತಿಗಳಾಱುಾಗಿರ್ಪುವು.

ಪ್ರಯೋಗಂ.—ಧಾತು ನಿರ್ಧಾರಣೆಗೆ—ಮಾಡಿದಂ ಎಂಬ ಕ್ರಿಯೆಗೆ ಪ್ರತಿಷೇಧಮಾಗೆ, ಮಾಡಂ ಎಂದಿರ್ಪುದು; ಅಲ್ಲಿ ಅಮ್ ಎಂಬ ವಿಭಕ್ತಿಯಂ ಕಳೆಯೆ ಮಾಡು ಎಂದೆ ನಿಲ್ವುದು. ಈ ತೆಱದಿಂ—ಕೂಡು, ನೋಡು, ತೀಡು, ಕಾಡು, ಸೂಡು—ಎಂಬಿವಾದಿಯಾಗಱುವುದು.

ಸೂತ್ರಂ ॥ ಅಮರಯಿರೆನೆವುಗಳಕ್ಕುಂ।
ಕ್ರಮದೇಕಾನೇಕ ವಚನದೊಳ್ ಪ್ರತ್ಯೇಕಂ ॥
ಸಮನಿಸೆ ಯುಗಳತೆಯಾಖ್ಯಾ।
ತ ಮಾರ್ಗದೊಳ್ ನೆಲಸಿ ನಿಂದ ಪುರುಷತ್ರಯಕಂ ॥ ೨೧೭ ॥

---

ಟೀಕೆ.—ಕ್ರಿಯೆಯ, ಅರ್ಥದ=ಅರ್ಥಕ್ಕೆ, ಮೂಲಂ=ಆದಿಯಾದ, ಪ್ರತ್ಯಯ=ವಿಭಕ್ತಿಯಿಂದೆ, ರಹಿತಂ=ವಿರಹಿತಮಾದುದು, ಧಾತು=ಧಾತುವೆನಿಸುವುದು; ಅದಂ=ಆ ಧಾತುವಂ, ಅಭಾವಕ್ರಿಯೆಯೊಳ್=ಪ್ರತಿಷೇಧದ ಕ್ರಿಯೆಯಲ್ಲಿ, ನಿಯತಂ=ಕಟ್ಟಾಗಿ, ಬುಧಚಯಂ= ವಿದ್ವತ್ಸಮೂಹಂ, ನಿಶ್ಚಯಿಪುದು, ಆ ಧಾತುಗೆ= ಆ ಧಾತುಗಳ್ಗೆ, ವಿಭಕ್ತಿ=ಪ್ರತ್ಯಯಂ, ಆಱುಾಗಿ=ಆಱು ತೆಱನಾಗಿ, ಇರ್ಕುಂ=ಇರ್ಪುದು. ॥ ೨೧೬ ॥

ಟೀಕೆ.—ಆಖ್ಯಾತಮಾರ್ಗದೊಳ್=ಕ್ರಿಯಾಪದಸಿದ್ಧಿಯಂ ಮಾಡುವಾಖ್ಯಾತಮಾರ್ಗದಲ್ಲಿ, ನೆಲಸಿ = ನೆಲೆಗೊಂಡು, ನಿಂದ, ಪುರುಷತ್ರಯಕಂ = ಪ್ರಥಮಪುರುಷ ಮಧ್ಯಮಪುರುಷ ಉತ್ತಮಪುರುಷಂಗಳೆಂಬ ಪುರುಷತ್ರಯಕ್ಕೆಯುಂ, ಕ್ರಮದೆ, ಏಕಾನೇಕ ವಚನದೊಳ್=ಏಕವಚನ ಬಹುವಚನಂಗಳಲ್ಲಿ, ಪ್ರತ್ಯೇಕಂ=ಬೇಱೆ ಬೇಱೆ, ಯುಗಳತೆ=ಎರಡೆರಡು, ಸಮನಿಸೆ=ಬರೆ, ಅಮರಯಿರೆನೆವುಗಳ್=ಅವರ್ ಅರ್, ಅಯರ್ ಇರ್, ಎನ್ ಎವು—ಎಂಬಾಱು ವಿಭಕ್ತಿಗಳ್, ಅಕ್ಕುಂ=ಅಪ್ಪುವು. ॥ ೨೧೭ ॥

ವೃತ್ತಿ.—ಆಖ್ಯಾತದೊಳ್ ವರ್ತಿಪ ಪ್ರಥಮಮಧ್ಯಮೋತ್ತಮ ಪುರುಷಂಗಳ್ಗೆ ಅನ್ ಅರ್, ಅಯ್ ಇರ್, ಎನ್ ಎವು—ಎಂಬಾಱು ವಿಭಕ್ತಿಗಳ್ ಪರಿವಿಡಿಯಿಂದೇಕವಚನ ಬಹುವಚನಂಗಳೊಳ್ ಪ್ರತ್ಯೇಕಮೆರಡೆರಡೊಂದಾಗಿ ಪತ್ತುವವು.

ಪ್ರಯೋಗಂ.—ಅಂಗೆ—ಎಸೆದಂ, ಬೆಸೆದಂ. ಒಸೆದಂ ಚಕ್ರಾಯುಧಂ. ಎತ್ತಿ ನಡೆದಂ ವೈರೀಭ ಕಂಠೀರವಂ. ನುಡಿದಂ, ಒಗೆದಂ, ಬಗೆದಂ.

ಅರ್ಗೆ—ಪಾಡಿದರ್ ಕವಿಗಳ್ ಕೃತಿಬಂಧದೊಳಲ್ತೆ. ಆಡಿದರ್; ಕಟ್ಟಿದರ್, ಮುಟ್ಟಿದರ್, ಮೆಟ್ಟಿದರ್.

ಅಯ್ಗೆ—ತೆಗೆದಯ್ ಮೋಕ್ಷದ ಬಟ್ಟೆಯುಂ. ಬಗೆದಯ್; ಭೀಮ! ಭೀಮಗದೆಯಿಂ ಪಂಚತ್ವಮಂ ಪೊರ್ದಿದಯ್. ನೋಡಿದಯ್, ಪಾಡಿದಯ್, ಆಡಿದಯ್.

ಇರ್ಗೆ—ಪೊರ್ದುವಿರ್, ತಿರ್ದುವಿರ್. ವಿಹಂಗಮಿದೆಂದೆ ಕರ್ಬಿನಿನೇಱಿಪಿರ್.

ಎನ್ಗೆ—ಅಮರ್ಚಿದೆನ್, ನಿಮಿರ್ಚಿದೆನ್. ಜನೋದಯಂಗಿದಂ ಪೇಱಲೊಡರ್ಚಿದೆನ್. ಬಣ್ಣಿಪೆನ್ ಆನ್ ಜಯದಂಕಕಾಱನಂ.

ಎವುಗೆ—ಕೇಳ್ದೆವು, ಕಂಡೆವು, ಉಸಿರ್ದೆವು. ಆಂಪೆವು ಕೃಪನಂ ಸಂಗ್ರಾಮದೊಳ್. ಆಂಪೆವು ಅರಾತಿಯಂ—ಎಂಬಂತೆ.

ಸೂತ್ರಂ ॥ ಬೆಳೆಯೆಂಬ ಧಾತು ಸಸ್ಯಾ ।
ವಳಿಯೊಳ್ ಬಳೆಯೆಂಬ ಧಾತು ಮಿಕ್ಕೆಡೆಯೊಳ್ ಸಂ ॥
ಗಳಿಕುಂ ತಿಳಿಯಲ್ಬರ್ಪುದು ।
ಬೆಳೆ ಬಳವಿಗಳೆಂಬ ಭಾವವಚನದ್ವಯದೊಳ್ ॥ ೨೧೮ ॥

---

ಟೀಕೆ.—ಸಸ್ಯಾವಳಿಯೊಳ್=ಸಸಿಗಳ ಸಮೂಹದಲ್ಲಿ, ಬೆಳೆ ಎಂಬ ಧಾತು, ಸಂಗಳಿಕುಂ=ಬರ್ಪುದು; ಮಿಕ್ಕೆಡೆಯೊಳ್=ಸಸ್ಯಾವಳಿಯಲ್ಲದುೞಿದ ತಾವಿನಲ್ಲಿ, ಬಳೆ ಎಂಬ ಧಾತು, ಬರ್ಪುದು; ಬೆಳೆ ಬಳವಿಗಳ್, ಎಂಬ, ಭಾವವಚನದ್ವಯದೊಳ್=ಭಾವವಚನಂಗಳೆರಡಱಲ್ಲಿ, ತಿಳಿಯಲ್ಬರ್ಪುದು=ಅಱಿಯಲ್ ಬರ್ಪುದು. ॥ ೨೧೮ ॥

ವೃತ್ತಿ.—ಸಸ್ಯಾದಿ ತರು ಲತಾವಳಿಯ ಪೆರ್ಚುಗೆಯಂ ಪೇೞ್ವ ಧಾತುವಿನೊಳ್ ಬೆಳೆಯೆನಲ್ವೇೞ್ಕುಂ, ಉೞಿದ ವಸ್ತುವಿನ ಪೆರ್ಚುಗೆಯಂ ಪೇೞ್ವ ಧಾತುವಿನೊಳ್ ಬಳೆಯೆಂದಕ್ಕುಂ. ಬೆಳೆಯೆಂಬ ಧಾತುವಿನ ಭಾವವಚನಂ ಬೆಳೆಯೆಂದುಂ ಬೆಳಸೆಂದುಮಿರ್ಪುದು; ಬಳೆಯೆಂಬ ಧಾತುವಿನ ಭಾವವಚನಂ ಬಳವಿಯೆಂದಿರ್ಪುದು.

ಪ್ರಯೋಗಂ.—

ಬೆಳೆಯೆಂಬುದರ್ಕೆ—

ಕಂ॥ ನೆಲ್ಲುಂ ಕೌಂಗುಂ ಮಾವುಂ।
ಮಲ್ಲಿಗೆಯುಂ ಬೆಳೆವುವಲ್ಲಿ ಕಬ್ಬಿನ ರಸದಿಂ॥

ಕಂ॥ ಬೆಳೆಗಳ್ಕಳನಂ ಪೊಕ್ಕುವು।
ಬೆಳಸುಂ ಕುಂದದು ಪೊದೞ್ದ ಪಾಳಿನೊಳೆಂದುಂ॥

ಬಳೆಯೆಂಬುದರ್ಕೆ—

........................ಮೃದುಮುಗ್ಧಾ।
ಲಾಪಂ ಬಳೆದಂ ಸರಸ್ವತೀ ಮಣಿಹಾರಂ॥

ತನುಜನ ಬಳವಿಯನೆ ನೋಡಿ ಜನಕಂ ನಲಿದಂ॥

ಸೂತ್ರಂ॥ ವಿನುತಗುಣವಚನದೊಳ್ ಸ।
ರ್ವನಾಮದೊಳ್ ಸಂಖ್ಯೆಯೊಳ್ ಪ್ರವರ್ತಿಪುವಾಖ್ಯಾ॥
ತ ನಿಯುಕ್ತ ವಿಭಕ್ತಿಗಳವು।
ಘನತರ ಸಂಸ್ಕೃತ ಗುಣೋಕ್ತಿಯೊಳಮುಮರ್ದಿರ್ಕುಂ॥ ೨೧೯॥

ವೃತ್ತಿ.— ಗುಣವಚನದೊಳಂ ಸರ್ವನಾಮದೊಳಂ ಸಂಖ್ಯೆಯೊಳಂ ಸಂಸ್ಕೃತಗುಣೋಕ್ತಿಯೊಳಂ ಆಖ್ಯಾತವಿಭಕ್ತಿಗಳ್ ವರ್ತಿಸುಗುಂ.

ಪ್ರಯೋಗಂ.—ಕನ್ನಡ ಗುಣವಚನಕ್ಕೆ—ಒಳ್ಳಿದಂ, ಒಳ್ಳಿದರ್; ಒಳ್ಳಿದಯ್, ಒಳ್ಳಿದಿರ್, ಒಳ್ಳಿದರಿರ್; ಒಳ್ಳಿದೆನ್, ಒಳ್ಳಿದೆವು, ಒಳ್ಳಿದರೆವು.

..........................................................................................

ಟೀಕೆ.— ವಿನುತ = ಕೊಂಡಾಡಲ್ಪಟ್ಟ, ಗುಣವಚನದೊಳ್ = ಗುಣವಚನಂಗಳಲ್ಲಿ, ಸರ್ವನಾಮದೊಳ್ = ಸರ್ವನಾಮಂಗಳಲ್ಲಿ, ಸಂಖ್ಯೆಯೊಳ್ = ಸಂಖ್ಯಾವಾಚಿಗಳಲ್ಲಿ, ಆಖ್ಯಾತ=ಆಖ್ಯಾತದಲ್ಲಿ, ನಿಯುಕ್ತ=ಕೂಡಲ್ಪಟ್ಟ, ವಿಭಕ್ತಿಗಳ್=ಪ್ರತ್ಯಯಂಗಳ್, ಅವು, ಪ್ರವರ್ತಿಪುವು=ಪ್ರವರ್ತಿಸುವುವು; ಘನತರ=ದೊಡ್ಡಿತ್ತಾದ, ಸಂಸ್ಕೃತ=ಸಂಸ್ಕೃತದ, ಗುಣೋಕ್ತಿಯೊಳಂ=ಗುಣವಚನಂಗಳಲ್ಲಿಯುಂ, ಅಮರ್ದು=ಪೊರ್ದುಗೆಯಾಗಿ, ಇರ್ಕುಂ=ಇರ್ಪುವು. ॥ ೨೧೯ ॥

ಸರ್ವನಾಮಕ್ಕೆ—ಪೆಱಂ, ಪೆಱರ್; ಪೆಱಯ್, ಪೆಱಿರ್, ಪೆಱರಿರ್; ಪೆಱೆನ್, ಪೆಱನೆನ್; ಪೆಱೆವು, ಪೆಱರೆವು.

ಸಂಖ್ಯೆಗೆ—ಒರ್ವಂ, ಒರ್ವರ್; ಒರ್ವಯ್, ಒರ್ವಿರ್, ಒರ್ವರಿರ್; ಒರ್ವೆನ್, ಒರ್ವನೆನ್; ಒರ್ವೆವು, ಒರ್ವರೆವು.

ಸಂಸ್ಕೃತ ಗುಣವಚನಕ್ಕೆ—ಉದ್ಧತಂ, ಉದ್ಧತರ್; ಉದ್ಧತಯ್, ಉದ್ಧತ ರಿರ್; ಉದ್ಧತನೆನ್, ಉದ್ಧತರೆವು.

ಸಮುಚ್ಚಯದಿಂ ಗುಣವಚನಮಲ್ಲದಲ್ಲಿಯುಮುಂಟು — ಕವಿಕೇಶವನೆಂ; ಮಲ್ಲಿಕಾರ್ಜುನಸುತನೆಂ; ದೌಹಿತ್ರನೆಂ; ಪೆಂಡಿತಿಯೆಂ.

ಸೂತ್ರಂ ॥ ಆದೇಶಮಾಗಿ ಮುಂಗ ।
ಳ್ಗಾದರುವದು ನಿಲ್ಕುಮಿರ್ಗಮೆವುಗಂ ಪೂರ್ವ ॥
ಕ್ಕಾದಿಗೆ ನತ್ವಮದೆನ್ಪರ ।
ಮಾದೊಡೆ ಕೆಲರಿಂದೆ ಬಿಂದುವೆವುವಿನ ವತ್ವಂ ॥ ೨೨೦ ॥

ವೃತ್ತಿ.—ಪುರುಷ ಸ್ತ್ರೀ ವಿಷಯದೊಳ್ ಬಹುವಚನದ ಗಳ್ಗಾದೇಶಮಾಗಿ ಬಂದ ಅರ್ ಎಂಬುದು ಮಧ್ಯಮಪುರುಷದ ಇರ್ ಎಂಬುದಱಾದಿಯೊಳಂ ಉತ್ತಮಪುರುಷದೆವುವಿನಾದಿಯೊಳಂ ಕನ್ನಡದೊಳ್ ವಿಕಲ್ಪದಿಂ ಸತ್ತುಗುಂ; ಸಂಸ್ಕೃತ ಗುಣವಚನದೊಳ್ ನಿತ್ಯಂ; ಉತ್ತಮಪುರುಷದೆನ್ ಎಂಬುದಱಾದಿಗೆ ನತ್ವಮಕ್ಕುಂ; ಎವುವಿನ ಉಕಾರಂ ಕೆಲರಿಂ ಬಿಂದುವಕ್ಕುಂ.

ಪ್ರಯೋಗಂ.—ಕನ್ನಡದೊಳ್ ವಿಕಲ್ಪದ ಅರ್ಗೆ—ಕೂರಿದರಿರ್ ಕಾಳೆಗ ದೊಳ್. ಕೂರಿದಿರ್; ನೇರಿದರಿರ್ ಕೂಡಿದವರೊಳೇನ್! ನೇರಿದಿರ್. ಪಿರಿಯರೆವು, ಪಿರಿಯೆವು. ಪಿರಿಯರೆವೆಂದು ಧಿಕ್ಕರಿಸಿ ಬಯ್ವುದು ತಕ್ಕುದೆ.

ಸಂಸ್ಕೃತದೊಳ್ ನಿತ್ಯದ ಅರ್ಗೆ—ಕುಲವೃದ್ಧರಿರ್, ಆಪ್ತರಿರ್, ಅತಿಬಲ ರಿರ್; ನಯವಿದರೆವು. ಸಹೋದರರೆವೆಂದೊಸೆದಾಳ್ವುದು ಭೃತ್ಯವಿತಾನಮಂ.

---

ಟೀಕೆ.—ಮುಂಗಳ್ಗೆ=ಮುನ್ನಿನ ಗಳಾಗಮಕ್ಕೆ, ಆದೇಶಮಾಗಿ, ಆದರು=ಆದ ಅರು (ಅರ್) ಆಗಮಂ, ಅದು, ಇರ್ಗಂ=ಇರೆಂಬಾಖ್ಯಾತವಿಭಕ್ತಿಗಂ, ಎವುಗಂ= ಎವು ಎಂಬಾಖ್ಯಾತವಿಭಕ್ತಿಗಂ, ಪೂರ್ವಕ್ಕೆ= ಮೊದಲ್ಗೆ, ನಿಲ್ಕುಂ= ಆಗಮವಾಗಿ ನಿಲ್ವುದು; ಎನ್=ಎನ್ ಎಂಬುದು, ಅದು, ಪರಮಾದೊಡೆ, ಆದಿಗೆ= ಮೊದಲ್ಗೆ, ನತ್ವಂ=ನಕಾರವಪ್ಪುದು; ಕೆಲರಿಂದೆ=ಕೆಲಂಬರಿಂದೆ, ಎವುವಿನ=ಎವು ಎಂಬ ವಿಭಕ್ತಿ ಯ, ವತ್ವಂ=ವಕಾರಂ, ಬಿಂದು=ಸೊನ್ನೆಯಾಗುವುದು. ॥ ೨೨೦ ॥

ನಕಾರಕ್ಕೆ— ಪಿರಿಯನೆನ್. ಅಸಿಯಂತೆವೊಲಸಿಯನೆನಾಂ ವಿಶಸನದೆಡೆಯೊಳ್. ಪೆಱನೆನೆಂದು ಬಗೆಯಲಿವಿಾಗಳ್. ಆನೊರ್ವನೆನೊರ್ವನೆಂ ಸಮರಕೇಳಿಯೊಳ್. ಅತಿಚತುರನೆನ್; ಕಳಾಪಂಡಿತನೆನ್; ಕೃತಿಲಕ್ಷಣಾವಧಾನನೆನ್.

ಎವುವಿನೊಳ್ ಬಿಂದುವಿನ ವಿಕಲ್ಪಕ್ಕೆ — ನೋಡುವೆವು, ನೋಡುವೆಂ; ಪಾಡುವೆವು, ಪಾಡುವೆಂ. ಅವರಾರುಮೆಂಮಾಳ್ದನೆಡಱನಾಮೆ ತಿರ್ದುವೆಂ. ಏಕವಚನದ ಏಂಗಾದ ಬಿಂದುವುಂ, ಆ ಬಹುವಚನದೆವುಗಾದ ಬಿಂದುವುಂ, ತಮ್ಮೊಳೇಕರೂಪಮಾಗಿರ್ಪುವು ; ಅವಂ ಕ್ರಮದಿನಱಿವುದು—ಕೋಂಟೆಯುಂ ಪತ್ತುವೆಂ; ವ್ಯಾಕರಣಮನೆಲ್ಲರುಂ ಕೇಳ್ವೆಂ ತಿಳಿವಿನಂ—ಎಂಬಂತೆ.

**ಸೂತ್ರಂ** ॥ ದ ದಪ ವಕಾರಂಗಳ್ ತ ॥
ಪ್ಪದೆ ಕಾಲತ್ರಯ ವಿಭಕ್ತಿಮೂಲದೊಳಕ್ಕುಂ ॥
ದ ದಪಾದಿಗಿದಾಗಮಮು ।
ಪ್ಪುದು ವತ್ವಕ್ಕಿಲ್ಲದುಂ ತ್ರಿವಚನಾನುಗತಂ ॥ ೨೨೧ ॥

**ವೃತ್ತಿ.**—ದ ದಪ ವ ಎಂಬಾಗಮಂಗಳ್ ಪೋದ, ವರ್ತಿಪ, ಬರ್ಪ ಕಾಲತ್ರಯಂಗಳ್ಗೆ ಸೂಚಕಂಗಳಾಗೆ, ಪುರುಷತ್ರಯಂಗಳ ವಿಭಕ್ತಿಗಳ ಮೊದಲೊಳಪ್ಪುವು; ದ ದಪಂಗಳ ಪೆಱಗೆ ವಚನತ್ರಯದ ಮೇರೆಯಿಲ್ಲದೆ ಉಕಾರಾಂತಕ್ಕೆ ಇದಾಗಮಮಕ್ಕುಂ; ಭವಿಷ್ಯಂತಿಯ ವಕಾರಕ್ಕೆಯುಂ ಏಕಾರಾಂತ ಇಕಾರಾಂತ ವ್ಯಂಜನಾಂತಂಗಳ್ಗೆ ಪರಮಾದ ದ ದಪಂಗಳ್ಗೆಯುಂ ಇದಾಗಮಮಿಲ್ಲ.

**ಪ್ರಯೋಗಂ.**—ದಕಾರಕ್ಕೆ–ಪಡೆದಂ ರಜೋಧಿಕಂ ಬಿದಿ ಪೆಡೆವಣೆಯುಂ ಫಣಿಯ. ಒರ್ಬನೆ ಗೆಲ್ದಂ. ಕಡಿದಂ, ಇಡಿದಂ, ಕೇಳ್ದಂ.

ದಪಕ್ಕೆ—ಎತ್ತಿದಪಂ, ಒತ್ತಿದಪಂ. ವಸಂತರಾಜನೆಟ್ಟಿಂದಪನಿಂದು ನಾಳೆ ಬರ್ದುಕಿಲ್ಲ ವಿಯೋಗಿಗೆ. ಮಾಡಿದಪಂ ಖಳಸಮಿತಿಗೆ ಕೇಡಂ.

---

**ಟೀಕೆ.**—ಕಾಲತ್ರಯ ವಿಭಕ್ತಿಮೂಲದೊಳ್=ಭೂತಕಾಲ ವರ್ತಮಾನಕಾಲ ಭವಿಷ್ಯತ್ಕಾಲಂಗಳೆಂಬ ಕಾಲತ್ರಯದ ವಿಭಕ್ತಿಗಳ ಮೊದಲಲ್ಲಿ, ತಪ್ಪದೆ, ದ ದಪ ವಕಾರಂಗಳ್ = ದಕಾರ ದಪಕಾರ ವಕಾರಂಗಳ್, ಅಕ್ಕುಂ=ಅಪ್ಪುವು; ದ ದಪಾದಿಗೆ= ದಕಾರ ದಪಕಾರಂಗಳ ಮೊದಲ್ಗೆ, ಇದಾಗಮಂ=ಇತ್ ಎಂಬಾಗಮಂ, ಅಪ್ಪುದು= (ಉಕಾರಾಂತಧಾತುವಿಂಗೆ) ಆಗುವುದು ; ವತ್ವಕ್ಕೆ = ಭವಿಷ್ಯಂತಿಯ ವಕಾರಕ್ಕೆ, ಇಲ್ಲ = ಇದಾಗಮಂ ಬಾರದು; ಅದುಂ = ಆ ಇದಾಗಮುವುಂ, ತ್ರಿವಚನ = ಏಕವಚನ ದ್ವಿವಚನ ಬಹುವಚನಂಗಳೆಂಬ ತ್ರಿವಚನಂಗಳಲ್ಲಿ, ಅನುಗತಂ=ಎಯ್ದಲ್ಪಡುವುದು. ॥ ೨೨೧ ॥

ವಕಾರಕ್ಕೆ—ಕುಡುವಂ, ಉಡುವಂ, ನಡುವಂ. ಬಿಡುವಂತೆ ಕೈದುವಿಡಿವಂ. ವಿಷ್ಣು ಪಡೆವಂ ಮತ್ಸ್ಯಾವತಾರಕ್ಕೆ.

ಉಕಾರಾಂತಕ್ಕೆ ಇದಾಗಮಮುಪ್ಪುದರ್ಕೆ—ನೋಡಿದಂ, ಬೇಡಿದಂ, ತೂಗಿದಂ, ಬಾಗಿದಂ. ಒರ್ಬನೆ ಮತ್ಸ್ಯನಂತಳುರೆ ತಾಗಿದನಾಜಿಯೊಳ್. ಆ ನೃಪತಿ ಕಿಡಿಸಿದನಾ ನಾಡಂ. ಸಾರಿಸಿದಂ; ಅಂಜಿಸಿದಪಂ ಮೂಲೋಕಮಂ ತಾರಕಂ. ಮಾಡಿದಪಂ, ಎತ್ತಿದಪಂ. ಸಾಧಿಸಿದಪನಿಂತು ಕಂತು ವಿರಹಿವ್ರಜಮಂ.

ಭವಿಷ್ಯಂತಿಯ ವಕಾರಕ್ಕೆಯುಂ ಎಕಾರಾಂತ ಇಕಾರಾಂತ ವ್ಯಂಜನಾಂತಂಗಳ್ಗೆ ಇದಾಗಮಮಿಲ್ಲದುದರ್ಕೆ—ಬಿಗಿವಂ, ಬಿರಿವಂ, ಮುಚ್ಚುವಂ. ಇನಂ ತುಹಿನಾದ್ರೀಂದ್ರಮನೊತ್ತುಗೊಂಡು ನಡೆವಂ. ಮರುತ್ತರಂಗಿಣಿಯನಂದಾಲಿಂಗನಂ ಮಾಡುವಂ. ಪಡೆದಂ, ಪಡೆದಪಂ; ಸಿಡಿದಂ, ಸಿಡಿದಪಂ; ಕಟಲ್ದಂ, ಕಟಲ್ದಪಂ.

**ಸೂತ್ರಂ ॥** ಪರಿಭಾವಿಸೆ ಕಾಲತ್ರಯ ।
ಪರಿಣಾಮಿಗಳೆನಿಸಿ ನೆಗಟ್ದ ಮೂಱುಂ ಕ್ರಿಯೆಯೊಳ್ ॥
ನಿರುತಂ ಪ್ರತಿಷೇಧಕ್ರಿಯೆ ॥
ಬರೆ ಭೂತಾರ್ಥದೊಳೆ ಸಲ್ವುದೆಂಬರ್ ಪಿರಿಯರ್ ॥ ೨೨೨ ॥

**ವೃತ್ತಿ.**—ಕಾಲತ್ರಯಂಗಳಂ ಪೇಟ್ವ ಮೂಱು ಕ್ರಿಯಾಪದಂಗಳಲ್ಲಿ ಪ್ರತಿಷೇಧಕ್ರಿಯೆ ಬರೆ, ಭೂತವತಿಯಾಗಿಯೇ ಸಲ್ವುದು.

**ಪ್ರಯೋಗಂ.**—ಮಾಡಿದನೆಂಬುದರ್ಕೆ ಮಾಡಂ; ಮಾಡಿದಪನೆಂಬುದರ್ಕಂ ಮಾಡಂ; ಮಾಡುವನೆಂಬುದರ್ಕಂ ಮಾಡಂ.

**ಸೂತ್ರಂ ॥** ಪುರುಷತ್ರಯಮುಂ ಸ್ವಾರ್ಥೋ ।
ಚ್ಚರಿತಂಗಳ್ ಯುಗಪದುಕ್ತಿಗುತ್ತಮಪುರುಷಂ ॥
ಪರಮುದನುಱಿದಿರೆ ಮಧ್ಯಮ ।
ಪುರುಷಂ ಕ್ರಮಗಣನಮಿರೆಯುಮೊಲ್ದಂತಿರೆಯುಂ ॥ ೨೨೩ ॥

---

**ಟೀಕೆ.**—ಪರಿಭಾವಿಸೆ= ವಿಚಾರಿಸೆ, ಕಾಲತ್ರಯದ=ಕಾಲತ್ರಯದಲ್ಲಿ, ಪರಿಣಾಮಿಗಳ್=ಪರಿಣಾಮವುಳ್ಳವು, ಎನಿಸಿ, ನೆಗಟ್ದ ಮೂಱುಂ ಕ್ರಿಯೆಯೊಳ್=ಪ್ರಸಿದ್ಧಿವಡೆದ ಮೂಱುಂ ಕ್ರಿಯೆಗಳಲ್ಲಿ, ನಿರುತಂ=ನಿಶ್ಚಯವಾಗಿ, ಪತ್ರಿಸೇಧಕ್ರಿಯೆ, ಬರೆ=ಬಂದೊಡೆ, ಪಿರಿಯರ್=ವಿದ್ವಾಂಸರ್, ಭೂತಾರ್ಥದೊಳೆ=ಭೂತಕಾಲವರ್ಥದಲ್ಲಿಯೆ, ಸಲ್ವುದು=ಸಲ್ವುದೆಂದು, ಎಂಬರ್=ಪೇಟ್ವರ್. ॥ ೨೨೨ ॥

**ವೃತ್ತಿ.**— ಪುರುಷತ್ರಯಂಗಳ್ ತಮ್ಮರ್ಥಂಗಳೊಳ್ ಸ್ವತಂತ್ರಂಗಳ್; ಪುರುಷತ್ರಯಂ ಕ್ರಮದಿನಿರ್ದೊಡಂ ವ್ಯತ್ಯಯಮಾಗಿರ್ದೊಡಂ ಕೂಡಿ ನುಡಿವೆಡೆಯೊಳ್ ಉತ್ತಮಪುರುಷಕ್ಕೆ ಮುಖ್ಯತ್ವಂ; ಉತ್ತಮಪುರುಷಂ ಕಳಿದುೞಿದ ಪ್ರಥಮ ಮಧ್ಯಮ ಪುರುಷಂಗಳನುಕ್ರಮದಿನಿರ್ದೊಡಂ ವ್ಯತ್ಯಯದಿನಿರ್ದೊಡಂ ಮಧ್ಯಮಪುರುಷಕ್ಕೆ ಮುಖ್ಯತ್ವಂ; ಯುಗಪದುಕ್ತಿಯೊಳ್ ಪ್ರಥಮಪುರುಷಕ್ಕೆ ಮುಖ್ಯತ್ವಮಿಲ್ಲ.

**ಪ್ರಯೋಗಂ.**—ಸ್ವತಂತ್ರಾರ್ಥಕ್ಕೆ—ತಾನಿರ್ದಂ, ತಾಮಿರ್ದರ್; ನೀನ್ ಕಂಡಯ್, ನೀಂ ಕಂಡಿರ್; ಆನ್ ಕೇಳ್ದೆಂ, ಆಂ ಕೇಳ್ದೆವು.

ಉತ್ತಮಪುರುಷ ಮುಖ್ಯತ್ವಕ್ಕೆ—ಆತನುಂ ನೀನುಂ ಆನುಂ ಪೊೞಗಾಗಿರ್ದ ಪೆರ್ವುರ್ವಿಪತಿಗೆ ಪಿಸುಣರಿಂ.

ವ್ಯತ್ಯಯಕ್ಕೆ— ನೀನುಮಾತನುಮಾನುಂ ಮಣಿಕೂಟನಗರಕ್ಕೆ ಪೋಪೆವು. ಆತನುಮಾನುಂ ನೀನುಂ ಕಜ್ಜದ ತೆಱವನಱಿದು ಪೇೞ್ದೆವು. ಆನುಂ ನೀನುಮಾತನುಂ ಬೆಸಕೆಯ್ವೆವು.

ಮಧ್ಯಮಪುರುಷ ಮುಖ್ಯತ್ವಕ್ಕೆ — ಆತನುಂ ನೀನುಂ ಕೂಡಿದಿರಪ್ಪೊಡೆ ಆಹವಕ್ಕೆ ಕಿಚ್ಚುಂ ಗಾಳಿಯುಂ ಕೂಡಿದಂತೆ.

ವ್ಯತ್ಯಯಕ್ಕೆ—ನಾಳಿನ ದಿನದೊಳ್ ನೀನುಮಾತನುಂ ಕೂಡಿದಪಿರ್.

**ಸೂತ್ರಂ** ॥ ತಿಳಿ ತಾಂ ನೀನಾನೆಂಬ ।
ರ್ಥಳಂಬಿಗಳ್ ಪ್ರಥಮ ಮಧ್ಯಮೋತ್ತಮ ಪುರುಷಂ ॥
ಗಳವೇಕವಚನಮೊರ್ವನ ।
ಬಟಿಕೆಗೆ ಬಹುವಚನಮೆಲ್ಲರಂ ಪೇೞ್ವೆಡೆಯೊಳ್ ॥ ೨೨೪ ॥

---

**ಟೀಕೆ.**— ಪುರುಷತ್ರಯಮುಂ=ಪ್ರಥಮ ಮಧ್ಯಮೋತ್ತಮಂಗಳೆಂಬ ಪುರುಷತ್ರಯಮುಂ, ಸ್ವಾರ್ಥೋಚ್ಚರಿತಂಗಳ್=ಸ್ವತಂತ್ರಂಗಳಾಗಿ ತಮ್ಮರ್ಥದಲ್ಲಿ ಉಚ್ಚರಿಸಲ್ಪಟ್ಟುವು; ಕ್ರಮಗಣನಂ=ಕ್ರಮದಿಂ ಗಣನೆಯಾಗಿ, ಇರೆಯುಂ=ಇರ್ದೊಡೆಯುಂ, ಒಲ್ದಂತೆ=ಪಲ್ಲಟವಾಗಿ, ಇಚ್ಛೆ ಬಂದಂತೆ, ಇರೆಯುಂ=ಇರ್ದೊಡೆಯುಂ, ಯುಗಪದುಕ್ತಿಗೆ=ಒಂದಾಗಿ ನುಡಿಯುವುದರ್ಕ್ಕೆ, ಉತ್ತಮಪುರುಷಂ, ಪರಂ=ಮುಖ್ಯಂ; ಅದಂ=ಆ ಉತ್ತಮಪುರುಷಮಂ, ಉೞಿದಿರೆ = ಬಿಟ್ಟರೆ, ಮಧ್ಯಮಪುರುಷಂ = ಮಧ್ಯಮಪುರುಷಂ, ಮುಖ್ಯವಾಗುವುದು. ॥ ೨೨೩ ॥

**ಟೀಕೆ.**—ತಾಂ, ನೀಂ, ಆಂ, ಎಂಬ, ಅರ್ಥ = ಅರ್ಥದಲ್ಲಿ, ಳಂಬಿಗಳ್ = ಆಲಂಬಮುಳ್ಳ ಶಬ್ದಂಗಳ್, ಪ್ರಥಮ ಮಧ್ಯಮೋತ್ತಮ ಪುರುಷಂಗಳ್ = ಪ್ರಥಮ

ವೃತ್ತಿ.—ತಾನ್ ನೀನ್ ಆನ್ ಎಂಬರ್ಥಮನಾಶ್ರಯಿಸಿ ಪುರುಷತ್ರಯಂ ಗಳಿರ್ಪುವು; ಅಲ್ಲಿಯೊರ್ವನಂ ಪೇೞ್ವೆಡೆಯೊಳೇಕವಚನಮಕ್ಕುಂ, ಪಲಂಬರಂ ಪೇೞ್ವೆಡೆಯೊಳ್ ಬಹುವಚನಮಕ್ಕುಂ.

ಪ್ರಯೋಗಂ.— ತಾಂ ಎಂಬುದರ್ಕೆ—ತಾನೆಚ್ಚಂ ಪೊಚ್ಚಮಲ್ಲದರಿ ವಾಹಿನಿಯಂ. ತಾಂ ಸವ್ಯಸಾಚಿಯೊಳಿ ತೊಡರ್ದಿಱಿಯರ್.

ನೀಂ ಎಂಬುದರ್ಕೆ–ರಣಕ್ಕೆನ್ನಿಂದೆ ನೀಂ ಮುಂಚಿದಯ್. ನೀಂ ಪೇೞ್ವಿರ್; ನೀಂ ಬಂದಿರ್. ಮೊನೆಯೊಳ್ ಸೂೞ್ತಡವಾಯ್ತು ನೀಮಿರೆ ಮತ್ತವಾರಣ ಮುಂ ತಾರಕಚಕ್ರವರ್ತಿಗೆ. ದೇವಾಸುರಮುಂ ಕೇಳಿರೆ ನೀಂ ದೇವಾ.

ಆಂ ಎಂಬುದರ್ಕೆ—

ಕಂ॥ ಆನಱುವೆಂ ಪೃಥೆಯಱುವಳ್ ।
ದಾನವರಿಪುವಱುವನರ್ಕನಱುವಂ ದಿವ್ಯ ।
ಜ್ಞಾನಿ ಸಹದೇವನಱುವಂ ।
ನೀನಾರ್ಗೆಂದಾರುಮಱುಯುರಂಗಾಧಿಪತೀ ॥

ಆಮಱುವೊಡಮುಸಿರಲಮ್ಮೆವಾಳ್ದನ ಗತಿಯಂ.

ಸೂತ್ರಂ ॥ ಉದುವುವುವೆಂಬಾದೇಶಂ ।
ಪುದಿದಿರ್ಕುಂ ಪ್ರಥಮಪುರುಷದೇಕ ಬಹುತ್ವ ॥
ಕ್ಕೊದವಿರ್ದ ನಪುಂಸಕ ಲಿಂ।
ಗದೊಳುದು ಭಾವಾರ್ಥದಲ್ಲಿಯುಂ ಸಂಗಳಿಕುಂ ॥ ೨೨೫ ॥

ವೃತ್ತಿ.—ಪ್ರಥಮಪುರುಷದೇಕವಚನ ಬಹುವಚನಕ್ಕಾದೇಶಮಾಗಿ ನಪುಂ ಸಕಲಿಂಗದೊಳುದುವೆಂಬುದುಂ ಉವುವೆಂಬುದುಮಪ್ಪುವು. ಭಾವಾರ್ಥದೊಳುದು ವುಂಟು.

---

ಪುರುಷ ಮಧ್ಯಮಪುರುಷ ಉತ್ತಮಪುರುಷಂಗಳೆಂದು, ತಿಳಿ; ಅವು=ಆ ಪುರುಷ ತ್ರಯಂಗಳ್, ಒರ್ವನ, ಬೞಿಕೆಗೆ=ಹೇೞುವುದರ್ಕೆ, ಏಕವಚನಂ, ಬರ್ಪುದು; ಎಲ್ಲರಂ =ಸರ್ವರಂ, ಪೇೞ್ವೆಡೆಯೊಳ್=ಹೇೞ್ವ ತಾವಿನಲ್ಲಿ, ಬಹುವಚನಂ, ಬರ್ಪುದು. ॥೨೨೪॥

ಟೀಕೆ.—ಒದವಿರ್ದ=ಬಂದು ಇರ್ದ, ನಪುಂಸಕಲಿಂಗದೊಳ್, ಪ್ರಥಮಪುರು ಷದ, ಏಕಬಹುತ್ವಕ್ಕೆ=ಏಕವಚನ ಬಹುವಚನಂಗಳ್ಗೆ, ಉದು ಉವು, ಎಂಬಾದೇಶಂ, ಪುದಿದು = ಪ್ರವೇಶವಾಗಿ, ಇರ್ಕುಂ= ಇರ್ಪುವು; ಭಾವಾರ್ಥದಲ್ಲಿಯುಂ, ಉದು (ಎಂಬುದು), ಸಂಗಳಿಕುಂ=ಸಂಬಂಧವಾಗುವುದು. ಉಂ ಎಂಬ ಸಮುಚ್ಚಯದಿಂ ವಿಧ್ಯರ್ಥದಲ್ಲಿಯುಂ ಬರ್ಪುದೆಂಬರ್ಥಂ. ॥ ೨೨೫ ॥

ಪ್ರಯೋಗಂ.—ಏಕವಚನಕ್ಕೆ—ಬರೆದುದು, ನೆರೆದುದು, ಕರೆದುದು. ಓಲಗಂ [1]ಪರೆದುದು. ಮುತ್ತುದು ನೇಸಱ ತೇಜಂ ಸತ್ತುದು ದಾವಾಗ್ನಿ.

ಚಂ॥ ಕರೆದುದು ಕಣ್ಣಬೆಳ್ಪನಧರಂ ಕುರುಳೋಳಿಗೆ ಸುರ್ಕಿನೋಲಗಂ।
 ಪರೆದುದು ........................................................ ॥

ಬಹುವಚನಕ್ಕೆ—

ಕಂ॥ ನಿಮಿರ್ದುವು ಪೊಳೆದುವವಳುಂಕಿದು ।
 ಮಮರ್ದುವು ಚುಂಬಿಸಿದುವಪ್ಪಿದುವು ಸಂಭ್ರಮದಿಂ ॥
 ಸಮದೃಷ್ಟಿಯಾಗಿ ಸಿಲ್ಕಿದು ।
 ವೆಮೆಯಿಕ್ಕಲ್ಮಱೆದುವವಳ ಧವಳಕಟಾಕ್ಷಂ ॥

ಭಾವಕ್ಕೆ—ಈವುದು ಕರ್ಣಂಗೆ ಸಹಜಮಾರೋಪಿತಮೋ? ಕೂರ್ಪುದು, ಇರ್ಪುದು, ಮಾಟ್ಪುದು.

ಸಮುಚ್ಚಯವಶದಿಂ ವಿಧ್ಯರ್ಥದೊಳುದುವುಂಟು—ರಕ್ಷಿಪುದೆನ್ನಂ. ಅವಧರಿಪುದು ಬಿನ್ನಪಮಂ—ಎಂಬಂತೆ.

ಸೂತ್ರಂ ॥ ನೆಗಟ್ದಾ ನಪುಂಸಕೈಕೋ ।
 ಕ್ತಿಗೆ ಕೆಲರಿತುವಿತ್ತುವತ್ತುವೆಂದುಸಿರ್ವರ್ ನೆ ॥
 ಟ್ಟಗೆ ಪುಗಿಸುವರಂತೇಕೋ ।
 ಕ್ತಿಗೆ ತಾಂ ಸ್ತ್ರೀವಿಷಯಮಾಗಳಂತಸ್ಥಿತಿಯಂ ॥ ೨೨೬ ॥

---

ಟೀಕೆ.—ನೆಗಟ್ದ=ಪ್ರಸಿದ್ಧಿವಡೆದ, ಆ ನಪುಂಸಕೈಕೋಕ್ತಿಗೆ=ಆ ಉದುವೆಂಬ ನಪುಂಸಕಲಿಂಗದ ಏಕವಚನಕ್ಕೆ, ಕೆಲರ್, ಇತು, ಇತ್ತು, ಅತ್ತು, ಎಂದು, ಉಸಿರ್ವರ್=ಬಹುಳದಿಂ ಪೇೞ್ವರ್; ಸ್ತ್ರೀವಿಷಯಂ=ಸ್ತ್ರೀಲಿಂಗದ ವಿಷಯಂ, ಆಗೆ, ಅಂತು, ಏಕೋಕ್ತಿಗೆ=ಏಕವಚನಕ್ಕೆ, ಅಳಂತಸ್ಥಿತಿಯಂ=ಅಳ್ ಎಂಬ ಪ್ರತ್ಯಯಾಗೆ, ಯಾಂತದ ಸ್ಥಿತಿಯಂ, ತಾಂ=ವಿದ್ವಾಂಸರ್ ತಾಂ, ನೆಟ್ಟಗೆ=ವ್ಯಕ್ತವಾಗಿ, ಪುಗಿಸುವರ್. ॥ ೨೨೬ ॥

ವಿಚಾರಂ—ನಪುಂಸಕಲಿಂಗದ ಭೂತಕಾಲದ ಪ್ರಥಮಪುರುಷದೇಕವಚನಕ್ಕೆ ಇತು ಇತ್ತು ಅತ್ತು, ಎಂಬಿವರ್ಕೆ ಆ ಭೂತಕಾಲದ ದಕಾರಂ ಬಹುಳವಾಗಿ ಬರ್ಪುದು; ಅದೆಂತೆಂದೊಡೆ—ಈ, ಓ, ಕಾ, ಕೀ, ಕೇ, ಪೂ, ಬೇ, ಬಾ, ಮೇ ಎಂಬೇಕಾಕ್ಷರಧಾತುಗಳ್ಗೆ ಪರದಲ್ಲಿ ದಕಾರಂ ನಿತ್ಯಂ; ಎಕಾರಾಂತಂಗಳಲ್ಲಿ ಇತು ಇತ್ತು, ಎಂಬೆರಡರ್ಕೆ ದತ್ವಮಿಲ್ಲ; ವರ್ಗತೃತೀಯಾಂತದ ವರ್ಗಪ್ರಥಮಂಗಳಾಗುವಲ್ಲಿ ನಿತ್ಯಂ; ಇಕಾರಾಂತಂಗಳಲ್ಲಿ ವಿಕಲ್ಪಂ; ವ್ಯಂಜನಾಂತಂಗಳಲ್ಲಿ ಬಹುಳಂ; ಸರ್ವಧಾತುಗಳಲ್ಲಿಯುಂ ಅತ್ತು, ಎಂಬುದರ್ಕೆ ದತ್ವಂ ನಿತ್ಯವಾಗಿ ಬರ್ಪುದು. ಇವನುದಾಹರಣೆಯ ಮುಖದಿಂ ದಱಿವುದು.

1. ಪಱಿದುದು. ಕ. ಖ.

ವೃತ್ತಿ.—ನಪುಂಸಕಲಿಂಗದೇಕವಚನಕ್ಕೆ ಇತುವೆಂದುಂ ಇತ್ತುವೆಂದುಂ ಅತ್ತುವೆಂದುಂ ಅಕ್ಕುಂ; ಪ್ರಥಮಪುರುಷದೇಕವಚನಕ್ಕೆ ಸ್ತ್ರೀವಿವಕ್ಷೆಯಾಗೆ ಅಳ್ ಎಂದಕ್ಕುಂ.

**ಪ್ರಯೋಗಂ.**—ಇತುಗೆ—ಮುಟ್ಟಿತು, ಮೆಟ್ಟಿತು.

ಕಂ ॥ ಮುಟ್ಟಿತು ಮುಟ್ಟಿದು ದಿವಮುಂ ।
ಮೆಟ್ಟಿತು ಮೆಟ್ಟಿದು ರಸಾತಳಾಗ್ರಮುನೆಂಬೊ ॥
ಳ್ಪಿಟ್ಟಳಮಾಗಿರೆ ದಿವಿಜರ ।
ದಿಟ್ಟಗೆ ಸೊಗಯಿಪುದು ಮುಂದೆ ಮಂದರಶೈಲಂ ॥

ಇತ್ತುಗೆ—ಅಲ್ಲಾಡಿತ್ತು, ಓಡಿತ್ತು.

ಹರಿಣಿ ॥ ಉರಗರಗಿದರ್ ದೈತ್ಯರ್ ಬೆಳ್ಕುತ್ತರಳ್ಕಿದನಿಂದ್ರನೀ ।
ಶ್ವರನಮುನಮುಳ್ಕಾಡಿತ್ತೋಡಿತ್ತು ಕಿನ್ನರಸೈನ್ಯಮಾ ॥
ಸರಲ ಬರಮುಂ ಕಂಡಿಂ ಕೆಟ್ಟಿತ್ತು ಭಾರತಮೆಂದು ತಾ ।
ವರೆಯೆಲೆಯ ನೀರಂತಾಯ್ತಿತ್ತಂ ಸುರಾಸುರ ಮಂಗಳಂ ॥

ಅತ್ತುಗೆ—ಇರ್ದತ್ತು, ಪಸರಿಸಿದತ್ತು. ಶಿರಃಕರೋಟಿ ನಗುವಂತಿರ್ದತ್ತು ರಾಗಾಧರಂ.

ಚಂ॥ ಪಸರಿಸಿದತ್ತು ಮೂಡದೆಸೆಯೊಳ್ ಬೆಳಗೆಂಪುದಯಂ ಸಮೀಪಮಾ ।

ಅಳ್ಗೆ—ಕಡೆದಳ್; ತಡೆದಳ್; ಸಡೆದಳ್.

ಕಂ ॥ ಅಜಿದಳ್ ಪಾಂಡುತನೂಜರ ।
ತೇಜನೆಲ್ಲಮನೀಕೆ......... ॥

**ಸೂತ್ರಂ** ॥ ಸವನಾಗಿ ಭೂತದೊಳ್ ಲಿಂ ।
ಗ ವಚನದೊಳ್ ತಳ್ತು ವರ್ತಮಾನ ಭವಿಷ್ಯ ॥
ದ್ವ್ಯವಹೃತಿಗಳ ಗುಂ ಕುಂ ಸ ।
ಲ್ವುವು ತಾವನ್ಯೈಕ ವಚನದೊಳ್ ನೆಲಸಿರ್ದುಂ ॥ ೨೨ ॥

.....................................................................................................

ಟೀಕೆ.—ವರ್ತಮಾನ = ವರ್ತಮಾನಕಾಲದ, ಭವಿಷ್ಯತ್ = ಭವಿಷ್ಯತ್ಕಾಲದ, ವ್ಯವಹೃತಿಗಳ=ವ್ಯವಹಾರಂಗಳ, ಗುಂ=ಗುಂಕಾರಂ, ಕುಂ=ಕುಂಕಾರಂ, ತಾಂ, ಅನ್ಯ =ಪ್ರಥಮಪುರುಷದ, ಏಕವಚನದೊಳ್, ನೆಲಸಿರ್ದುಂ, ಭೂತದೊಳ್=ಭೂತಕಾಲ ದಲ್ಲಿ, ಲಿಂಗವಚನದೊಳ್=ಲಿಂಗತ್ರಯ ವಚನತ್ರಯಂಗಳಲ್ಲಿ, ಸವನಾಗಿ=ಸಮಾನ ವಾಗಿ, ತಳ್ತು=ಪೊರ್ದುಗೆಯಾಗಿ, ಸಲ್ವುವು=ಸಲುವಳಿಯಪ್ಪುವು. ॥ ೨೨ ॥

**ವೃತ್ತಿ.**—ಭೂತಕಾಲವೆನ್ನದೆ ಲಿಂಗತ್ರಯ ವಚನತ್ರಯವೆನ್ನದೆ ವರ್ತಮಾನ ಭವಿಷ್ಯತ್ಕಾಲಂಗಳೊಳ್ ವರ್ತಿಸುವ ಗುಂ ಕುಂ ಎಂಬಿವು ಪ್ರಥಮ ಪುರುಷದೇಕವಚನಕ್ಕಮಾದೇಶಮಪ್ಪುವು.

**ಪ್ರಯೋಗಂ.**—ಗುಮೆಂಬುದಱ ಭೂತಕಾಲಕ್ಕೆ—ಅಂದು ಮಾಡುಗುಂ, ಅಂದು ಮಾಟ್ಟಿಗುಂ.

ಲಿಂಗತ್ರಯಕ್ಕೆ— ಭೂವಳಯಾಧಿಪಂ ನುಡಿಗುಮಾ ದೂತಂಗೆ ಸ್ವಚಿತ್ತಗತಾರ್ಥಮಂ. ಕೋಗಿಲೆಯುಲಿಗುಂ ನಯದಿಂದೆ. ಬೀಸುಗುಂ ಗಂಧವಾಹಂ.

ಕಂ॥ ಅಸಪಸದಿಂ ಪಳಗೆಯ್ಯಂ ।
ಕಸಮಂ ಸೋದಿಸದೆ ಬಿತ್ತಿದೊಕ್ಕಲಿಗನ ಪೋಲ್ ॥
ಸಸಿಯಂ ಸೋಡಿ ತಳೋದರಿ ।
ಬಿಸುಸುಯ್ಯುಗಂ ಬಯ್ಯುಗಮಿಂತು ಮಾಡಿದ ಬಿದಿಯಂ ॥

ವಚನತ್ರಯಕ್ಕೆ— ಒರ್ವನೆ ಗೆಲ್ಗುಂ ಕಿರೀಟಿ ಕೌರವಬಲಮಂ. ಬಲನಾರಾಯಣರಿರ್ವರುಂ ನುಡಿಗುಂ ಆ ದೂತಂಗೆ. ಮೂದೇವರುಮಂ ಮೂಱು ಕೋಣೆವುಗಿಸುಗುಮಸುರರ್. ಎಮಗೀಗಳೆ ಸೂಚಿಸುಗುಮವರ್ ನಾಳೆ ಕಾಣ್ಗುಂ.

ಕುಮಿಂಗೆ—ಕೇಳ್ವಾತನ ಕಿವಿಯುಮಂ ನಟ್ಟು ಕರಿಮುರಿವೋಕುಂ.

ಕಂ॥ ಅರ್ಕೇಂದುಗಳಂ ತವೆ ನುಂ ।
ಗಿರ್ಕುಂ ಕಟ್ಟಿಲೆ ಸಿಡಿಲ್ಗಳೆಱಗುಗುಮೆಂತುಂ ॥
ಬರ್ಕುಂ ನಿನ್ನೋಪಳ್ ಭಯ ।
ಮಿರ್ಕುಮೆ ನೀನಿರ಼್ ಮನದೊಳುಗ್ರ ತುಳಾರ್ಕಾ ॥

ಇದುವುಮದಱಂತೆ ಸಲ್ವುದು. ಶ್ರಾವ್ಯಮಾದೆಡೆಯೊಳ್ ಎರಡುಂ ಸತ್ತುಗುಂ—ಸೂಚಿಸುಗುಂ, ಸೂಚಿಕುಂ; ಮಾಡುಗುಂ, ಮಾಟ್ಟಿಗುಂ.

**ಸೂತ್ರಂ**॥ ಇಸುವಿನ ಸುಕಾರಮಂ ಲೋ ।
ಪಿಸುವರ್ ಕುಂ ಪರದೊಳಾಗೆ ಕುಂಮಿಂಗೆ ಕೆಲರ್ ॥
ಪೊಸಯಿಸುವರ್ ದ್ವಿಭಾರ್ವಮ ।
ನೆಸಗಲದಂ ಬೇಡ ಕಿವಿಗೆ ಸೊಗಯಿಸದೆಡೆಯೊಳ್ ॥ ೨೨೮ ॥

.........................................................................................

**ಟೀಕೆ.**—ಕುಂ=ಕುಂಕಾರಂ, ಪರದಲ್ಲಿ=ಧಾತುಗಳ ಪರದಲ್ಲಿ, ಆಗೆ=ಪೊರ್ದುಗೆಯಾಗೆ, ಇಸುವಿನ=ಇಸುಪ್ರತ್ಯಯದ, ಸುಕಾರಮಂ, ಲೋಪಿಸುವರ್=ಲೋಪಮಂ

**ವೃತ್ತಿ.**— ಹೇತುವಿನೊಳಾದ ಇಸುವಿನ ಸುಕಾರಕ್ಕೆ ಕುಂ ಪರಮಾಗೆ ಆ ಸುತ್ವಕ್ಕೆ ಲೋಪಮಕ್ಕುಂ; ಕೆಲರಾ ಕುಂಮಿಂಗೆ ದ್ವಿತ್ವಮಂ ಪೇೞ್ವರ್; ಅದಂ ಶ್ರವಣಕ್ಕೆ ಶೋಭನವಾಗದ ತಾಣದೊಳ್ ಪೇೞಲಾಗದು.

**ಪ್ರಯೋಗಂ.**—ಸುಕಾರಲೋಪಕ್ಕೆ—ಈ ಯೋಗದೊಳಾವ ರೋಗಮಂ ಪರಿಹರಿಕುಂ. ಸಮನಿಕುಮಾಕಾರಂ ಮೇಣಿವಣ್ಣಂ. ಇಂದಿನ ದಿನದೊಳ್ ರಂಭೆ ಕೇಳಿಕುಂ ಪೆಕ್ಕಣಮಂ. ಭಾವಿಕುಂ, ಮಾಣಿಕುಂ.

ದ್ವಿತ್ವಕ್ಕೆ—ಪುರುಡಿಕ್ಕುಂ, ಪೊಗೞಿಕ್ಕುಂ, ರಂಜಿಕ್ಕುಂ. ಪಾಲಿಕ್ಕುಂ ಜಗವೆಲ್ಲಮಂ ಕಮಲಭವಂ.

ಶ್ರಾವ್ಯಮಲ್ಲದುದರ್ಕೆ— ಬಿಡಿಕ್ಕುಂ, ಕೆಡಿಕ್ಕುಂ, ಸೊಪ್ಪಿಕ್ಕುಮೆನವೇಡ. ಸಂಸ್ಕೃತದೊಳಿಂತಿದು ಮನೋಹರಂ.

**ಸೂತ್ರಂ ॥** ಸೊಗಯಿಪುವು ಗೆ ಕೆಗಳನ್ಯೋ ।
ಕ್ತಿಗೆ ವಿಧ್ಯರ್ಥಕ್ಕೆ ಮಧ್ಯಮೋತ್ತಮ ಪುರುಷ ॥
ಪ್ರಗತ ಬಹೂಕ್ತಿಯೊಳಿಮಮೆಂ ।
ದೊಗೆತರ್ಕುಂ ಯುಗಪದುಕ್ತಿಯೊಳ್ ಕ್ರಮದಿಂದಂ ॥ ೨೩೯ ॥

**ವೃತ್ತಿ.**— ಪ್ರಥಮಪುರುಷದೇಕವಚನಕ್ಕಂ ಬಹುವಚನಕ್ಕಂ ವಿಧ್ಯರ್ಥದೊಳ್ ಗೆ ಎಂದುಂ ಕೆ ಎಂದುಮಕ್ಕುಂ; ಕೆಕಾರಕ್ಕೆ ಕುಂಮಿನಂತೆ ದ್ವಿತ್ವವಿಕಲ್ಪಂ. ಮಧ್ಯಮೋತ್ತಮ ಪುರುಷಂಗಳ ಬಹುವಚನಕ್ಕೆ ಯುಗಪದುಕ್ತಿಯೊಳ್ ಪರಿವಿಡಿಯಿಂ ಇಮ್ ಅಮ್ ಎಂಬಿವಕ್ಕುಂ.

---

ಮಾಡುವರ್; ಕೆಲರ್, ಕುಂಮಿಂಗೆ = ಕುಂಕಾರಕ್ಕೆ, ದ್ವಿರ್ಭಾವಮಂ= ದ್ವಿತ್ವಮಂ, ಪೊಸಯಿಸುವರ್=ಪೊರ್ದುಗೆಯಂ ಮಾಡುವರ್; ಕಿವಿಗೆ, ಸೊಗಯಿಸದೆಡೆಯೊಳ್= ಹಿತವಾಗದ ತಾವಿನಲ್ಲಿ, ಅದಂ = ಆ ಕುಂಕಾರದ ದ್ವಿತ್ವಮಂ, ಎಸಗಲ್ ಬೇಡ= ಮಾಡ ಬೇಡ. ॥ ೨೩೮ ॥

**ಟೀಕೆ.**—ವಿಧ್ಯರ್ಥಕ್ಕೆ=ವಿಧಿಯರ್ಥಕ್ಕೆ, ಅನ್ಯ=ಪ್ರಥಮಪುರುಷದ, ಉಕ್ತಿಗೆ=ಅವರ್ ಅರ್ ಎಂಬೇಕವಚನ ಬಹುವಚನಕ್ಕೆ, ಗೆಕೆಗಳ್=ಗೆಕಾರ ಕೆಕಾರಂಗಳ್, ಸೊಗಯಿಪುವು= ಹಿತವಾಗುವುವು; ಯುಗಪದುಕ್ತಿಯೊಳ್=ಒಂದಾಗಿ ನುಡಿವುದಾದ, ಮಧ್ಯಮ=ಮಧ್ಯಮ ಪುರುಷದಲ್ಲಿ, ಉತ್ತಮ = ಉತ್ತಮಪುರುಷದಲ್ಲಿ, ಪ್ರಗತ = ವಿಶೇಷವಾಗಿ ಎಯ್ದಲ್ಪಟ್ಟ, ಬಹೂಕ್ತಿಯೊಳ್ = ಇರ್ ಎವು ಎಂಬ ಬಹುವಚನದಲ್ಲಿ, ಕ್ರಮದಿಂದಂ = ತಱುವಾಯಿಂದೆ, ಇಂ ಅಂ ಎಂದು, ಒಗೆತರ್ಕುಂ=ಬರ್ಪುವು. ॥ ೨೩೯ ॥

**ಪ್ರಯೋಗಂ.**—ಗೆಕಾರಕ್ಕೆ—ಅವಂ ಕುಡುಗೆ; ಅವಂ ಪಡೆಗೆ; ಅವಂ ತರ್ಕೆ; ಅವಂ ಬರ್ಕೆ. ಪಾಳಿಸುತ್ತಿರ್ಕೆ ವಿಷ್ಣು. ಪರಿಪಾಳಿಕೆ ಜಿಷ್ಣುವಲಂ ಕರಿಷ್ಣು.

ಬಹುವಚನಕ್ಕೆ—ಅವರ್ ಮಾಟ್ಕೆ; ಅವರ್ ತೋರ್ಕೆ.

ಕೆಕಾರಕ್ಕೆ ದ್ವಿತ್ವವಿಕಲ್ಪಂ—ರಕ್ಷಿಕೆ, ರಕ್ಷಿಕ್ಕೆ; ಪೂಜಿಕೆ, ಪೂಜಿಕ್ಕೆ; ಪೆರ್ಚಿಕೆ, ಪೆರ್ಚಿಕ್ಕೆ. ನರನಾಥನಾ ತೆಱದಿಂ ಪೆರ್ಚಿಕ್ಕೆ ದೇಶಂಗಳಂ.

ಇಂಗೆ–ಸಮಕಟ್ಟಿಂ, ಇರಿಸಿಂ, ತರಿಸಿಂ. ವ್ಯಾಳ ದನ್ತಿ ಕುಲಮುಂ ಸಮಕಟ್ಟಿಂ.

ಅಂಗೆ—ಏಗೆಯ್ವಂ ಪೇೞಿಮೆಂದೊಡೆಂದರ್ಭೀಷ್ಮರ್.

ಕಂ ॥ ನೆನೆಯದೆ ಕಜ್ಜದ ಬಿಣ್ಪಂ।
ಮುನಿವಯ್ ನೀನೆೊರ್ಬನೆಂಬ ಹರಿಗಮುಸಾಧ್ಯಂ॥
ಮನುಜ ಪ್ರಾಕಾರಾಂಕನೊ।
ಳಿನಿಬರುಮೊಂದಾಗಿ ತಾಗುವಂ ಫಲ್ಗುಣನೊಳ್ ॥

ಸೂತ್ರಂ ॥ ಪರಿಣಮಿಸಿರ್ಕುಂ ಪ್ರಕೃತಿ।
ಸ್ವರೂಪದಿಂ ಮಧ್ಯಮೈಕವಚನಂ ವಿಧಿಯೊಳ್ ॥
ದೊರೆಕೊಳ್ಗುಮುತ್ವಮಿರ್ಗಂ।
ಕುರಿಪುದು ವಿಧಿಯಾ ಕ್ರಿಯಾಸಮಭಿಹಾರದೊಳಂ ॥ ೨೩೦ ॥

**ವೃತ್ತಿ.**—ಧಾತು ಸ್ವರೂಪದಿಂ ಮಧ್ಯಮಪುರುಷದೇಕವಚನಂ ವಿಧ್ಯರ್ಥವಾಗಿ ಪರಿಣಮಿಸುಗುಂ; ಇರ್ ಎಂಬ ಧಾತುವೊಂದರ್ಕಮುತ್ವಮಕ್ಕುಂ; ವಿಧ್ಯರ್ಥಂ ಕ್ರಿಯಾಸಮಭಿಹಾರದೊಳಮಕ್ಕುಂ. *

..........................................................................................

**ಟೀಕೆ.**—ವಿಧಿಯೊಳ್=ವಿಧ್ಯರ್ಥದಲ್ಲಿ, ಮಧ್ಯಮೈಕವಚನಂ=ಆಯ್ ಎಂಬ ಮಧ್ಯಮಪುರುಷದೇಕವಚನಂ, ಪ್ರಕೃತಿಸ್ವರೂಪದಿಂ=ಧಾತುಸ್ವರೂಪದಿಂದೆ, ಪರಿಣಮಿಸಿರ್ಕುಂ; ಇರ್ಗೆ=ಇರ್ ಎಂಬ ಧಾತುವಿಂಗೆ, ಉತ್ವಂ=ಉಕಾರಂ, ದೊರೆಕೊಳ್ಗಂ= ಬರ್ಪುದು; ಆ ಕ್ರಿಯಾಸಮಭಿಹಾರದೊಳಂ = ಆ ಕ್ರಿಯೆಯನಭಿಮುಖವಾಗಿ ಮಾಡಿಕೊಂಬಲ್ಲಿಯುಂ, ವಿಧಿ=ವಿಧ್ಯರ್ಥಂ, ಅಂಕುರಿಪುದು=ಅಂಕುರವಾಗುವುದು, (ಬರ್ಪುದೆಂಬುದರ್ಥಂ). ॥ ೨೩೦ ॥

* ವಿಚಾರಂ—ಇಲ್ಲಿ, ಮಾಡು (ಕರಣೇ) ಎಂದು ಧಾತುವಿರೆ, ಪ್ರಥಮಪುರುಷದೇಕವಚನ ಬಹುವಚನಂಗಳ್ಗೆ— ಅವಂ ಮಾಡುಗೆ, ಅವರ್ ಮಾಡುಗೆ, ಅವಂ ಮಾಟ್ಕೆ, ಅವರ್‌ಮಾಟ್ಕೆ— ಎಂದಾಯ್ತು. ಮಧ್ಯಮಪುರುಷದೇಕ ಬಹುವಚನಕ್ಕೆ—ನೀಂ ಮಾಡು, ನೀವೆಲ್ಲರ್ ಮಾಡಿಂ— ಎಂದಾಯ್ತು.

ಉತ್ತಮಪುರುಷದೇಕವಚನಕ್ಕೆ ಪೇೞಲಿಲ್ಲಾಗಿ, ಬಹುವಚನಕ್ಕೆ ಭವಿಷ್ಯಂತಿಗೆ ಬರ್ಪ ವಕಾರದ ಮೇಲೆ ಅಂ ಎಂಬುದು ಪತ್ತಿ—ಆವೆಲ್ಲರ್ ಮಾಡುವಂ—ಎಂದು ಆಯ್ತು. ಏಕವಚನಕ್ಕೆ ಹೇಗೆಂದೊಡೆ—ಭವಿಷ್ಯಂತಿಯ ವಕಾರದ ಮೇಲೆ ಎನ್ ಎಂಬುದು ಪತ್ತಿದಂತೆ ಆನ್ ಮಾಡುವೆಂ ಎಂದಪ್ಪುದಾಗಿ ಪೇೞಲಿಲ್ಲೆಂದಱಿವುದು

ಶಬ್ದಾನುಶಾಸನದಲ್ಲಿ— ಆಶೀರ್ವಿಧಿ ನಿಮಂತ್ರಣಾಮಂತ್ರಣಾಧ್ಯೇಷಣ ಸಂಪ್ರಶ್ನ ಪ್ರೇಷಣ ವಿಜ್ಞಾಪನಾಜ್ಞಾಪನ ಪ್ರಾರ್ಥನೇ ಗೆತ್ ॥ ೪೬೫ ॥ ಆಶೀರಾದಿ ವಿವಕ್ಷಾಯಾಂ ಧಾತೋಃ ಪರಯೋಃ ಅಮ್ ಅರ್ ಇತ್ಯೇತಯೋಃ ಗೆತ್ ಇತ್ಯಾದೇಶೋ ಭವತಿ—ಎಂದುದಾಗಿ ಆಶೀರಾದಿವಿವಕ್ಷೆಯಲ್ಲಿ ಧಾತುವಿನತ್ತಣಿಂ ಪರಂಗಳಾದ ಅಮ್ ಅರ್ ಎಂಬಿವರ್ಕೆ ಗೆತ್ (ಗೆ) ಎಂಬಾದೇಶಂ ಬರ್ಪುದು. ತಕಾರಂ ಇತ್ತು, ಗೆ ಎಂದು ಉೞಿವುದು—ಅವಂ ಮಾಡುಗೆ, ಅವರ್ ಮಾಡುಗೆ.

॥ ಇರಶ್ಚೋದುಃ ॥ ೪೬೬ ॥ ಎಂದುದಾಗಿ ಧಾತುವಿನತ್ತಣಿಂ ಪರಂಗಳಾದ ಆಮ್ ಅರ್ ಎಂಬಿವರ್ಕಂ ಅಯ್ ಇರ್ ಎಂಬಿವರ್ಕಂ ಉದು ಎಂಬಾದೇಶಂ ಆಶೀರಾದಿ ವಿಷಯದಲ್ಲಿ ಬರ್ಪುದು—ಅವಂ ಮಾೞ್ಪುದು, ಅವರ್ಮಾೞ್ಪುದು: ನೀಂ ಮಾೞ್ಪುದು, ನೀವೆಲ್ಲರ್ ಮಾೞ್ಪುದು. ಮಾಡುವುದು ಎಂದುಂ ವಿಕಲ್ಪಂ.

॥ ಇಮ್ ॥ ೪೬೭ ॥ ಧಾತೋಃ ಪರಸ್ಯ ಇರಃ ಇಮ್ ಇತ್ಯಾದೇಶೋ ಭವತ್ಯಾಶೀರಾದಿ ವಿಷಯೇ— ಎಂದುದಾಗಿ ಧಾತುವಿನತ್ತಣಿಂ ಪರದ ಇರ್ ಎಂಬುದರ್ಕೆ ಇಮ್ ಎಂಬಾದೇಶಂ ಆಶೀರಾದಿ ವಿಷಯದಲ್ಲಿ ಅಕ್ಕುಂ—ನೀವೆಲ್ಲರ್ ಮಾಡಿಂ. ಗುರುಗಳಿರಾ, ಮುದದಿನೆಮಗೆ ಬೆಸಸಿಮಾಕಥೆಯಂ. ಶಿವ ಸುಖಮಂ ಮಾಡಿನೆಮಗೆ.

॥ ಅಯೋಲ್ಲೋಪಃ ॥ ೪೬೮ ॥ ಧಾತೋಃ ಪರಸ್ಯ ಅಯಃ ಅಕಾರೋ ಲೋಪಶ್ಚಾದೇಶೌ ಭವತಃ ಆಶೀರಾದಿವಿಷಯೇ—ಎಂದುದಾಗಿ ಧಾತುವಿನತ್ತಣಿಂ ಪರದ ಅಯ್ ಎಂಬುದರ್ಕೆ ಅಕಾರಾದೇಶಮುಂ ಲೋಪಮುಮಕ್ಕುಂ—ನೀಂ ಮಾಡ, ನೀಂ ಮಾಡು.

ಏವೋರ್ವಮ್ ॥ ೪೭೦ ॥ ಧಾತೋಃ ಪರಸ್ಯ ಎವು ಪ್ರತ್ಯಯಸ್ಯ ವಮ್ ಇತ್ಯಾದೇಶೋ ಭವತಿ ಆಶೀರಾದಿವಿಷಯೇ—ಎಂದುದಾಗಿ ಧಾತುವಿನತ್ತಣಿಂ ಪರದ ಎವು ಎಂಬುದರ್ಕೆ ವಮ್ ಎಂಬ ಆದೇಶಂ ಆಶೀರಾದಿವಿಷಯದಲ್ಲಿ ಬರ್ಪುದು—ಆವೆಲ್ಲರೀಗಳಶ್ವಮೇಧವಂ ಮಾಡುವಂ.

॥ ಎನೋ ವೆನ್ ॥ ೪೭೧ ॥ ಧಾತೋಃ ಪರಸ್ಯ ಎನ್‌ಪ್ರತ್ಯಯಸ್ಯ ವೆನ್ ಇತ್ಯಾದೇಶೋ ಭವತಿ— ಎಂದುದಾಗಿ ಧಾತುವಿನತ್ತಣಿಂ ಪರಮಾದ ಎನ್ ಎಂಬುದರ್ಕೆ ವೆನ್ ಎಂಬಾದೇಶಂ ಆಶೀರಾದಿ ವಿಷಯದಲ್ಲಿ ಬರ್ಪುದು—ಆನಿದಂ ಮಾೞ್ಪೆಂ. ಆಂ ಶಿವನಂ ಪೂಜಿಸುವೆಂ.

ಇಂತು ಪೇೞ್ದುದಾಗಿ ಆಶೀರ್ವಿಧಿಗಳಾದಿಯಾದುವಱಲ್ಲಿ ಪ್ರಥಮೈಕವಚನಂ—ಆತಂ ಮಾಡುಗೆ, ಆತಂ ಮಾೞ್ಕೆ; ಆತಂ ಮಾಡುವುದು, ಆತಂ ಮಾೞ್ಪುದು.

ಬಹುವಚನಂ—ಅವರ್ ಮಾಡುಗೆ, ಮಾೞ್ಕೆ; ಅವರ್ ಮಾಡುವುದು, ಮಾೞ್ಪುದು.

ಮಧ್ಯಮೈಕವಚನಂ—ನೀಂ ಮಾಡ, ನೀಂ ಮಾಡು; ಮಾಡುವುದು, ಮಾೞ್ಪುದು.

ಬಹುವಚನಂ—ನೀವೆಲ್ಲರ್ ಮಾಡುವುದು, ಮಾೞ್ಪುದು, ಮಾಡಿಂ.

ಉತ್ತಮಪುರುಷೈಕವಚನಂ—ಆಂ ಮಾಡುವೆಂ, ಮಾೞ್ಪೆಂ.

ಬಹುವಚನಂ—ಆವೆಲ್ಲರ್ ಮಾಡುವಂ, ಮಾೞ್ಪಂ—ಎಂದಿಂತಱಿವುದು.

**ಪ್ರಯೋಗಂ.**—ಧಾತುಸ್ವರೂಪಕ್ಕೆ—ನುಡಿ, ನುಡಿಯೆ ಚಲಂ ಮಗುೞ್ಚಿ ಬೇೞ್ಪುದೆ ಬೇೞ್ಪುದು. ಪಾಡೆಲೆ ತುಂಬಿ. ಬಗ್ಗಿಸೆಲೆ ಕೋಗಿಲೆ. ತೀಡೆಲೆ ಗಂಧವಾಹ. ಹರಿ ಕೇಳ್. ಧೂಮಪತಾಕೆ ಕೇಳ್ ನಿರುತಿ ಕೇಳ್.

ಉ॥ ವಾಯಸದಂತೆ ನೋಡು ಬಕನಂತಿರಿ ಮೆಲ್ಲನೆ ಮೆಟ್ಟು ಕಚ್ಛಪೋ।
ಪಾಯದಡಂಗು ನಿಲ್ ಭ್ರಮರಿಪೊಲ್ ಭ್ರಮಿಯಂತಿರಿ ಬೆಳ್ಗರಾಗು ಖ॥
ಡ್ಗಾಯುಧ ಚಾಪರಂ ಪೋಲೆನ ಮಿಂಚನೆ ಪೋಲ್ತಿರೆ ಬೀಸು ನೀಂ ಖಳ।
ನ್ಯಾಯದಿನೆಲ್ಲಮಂ ನೆಱೆಯೆ ಕಲ್ತುಪದೇಶಕನಾಗು ಲೋಕದೊಳ್॥

ಇರ್ಗೆ—ಇರು ಮರುಳೆ ಶುಷ್ಕ ವೈಯಾಕರಣಂಗಂ.

ಕ್ರಿಯಾಸಮಭಿಹಾರದ ವಿಧಿಗೆ—ಬಿಡುಬಿಡೆಂದು ಬಿಡಿಸಿದಂ. ನಡೆನಡೆಯೆಂದೇಂ ನಡೆದುದೊ ಪಡೆ ಪಡೆವಚ್ಚರಿಯಂ.

ಕಂ॥ ಕೊಳ್ಕೊಳ್ಳೆಂದೊಡನೊಡನೆಯೆ।
ತುಳ್ಕುವ ಯುವತಿಯರ ಕರ ಪರಿಚ್ಯುತ ಸಲಿಲಂ॥
ಗಳ್ಕೊಳೆ ಬಿಡೆ ಕಿದಱುವ ಕಿಂ।
ಜಳ್ಕದಿನಾದುದು ಸರೋವರಂ ಕಪಿಶಜಳಂ॥

**ಸೂತ್ರಂ॥** ಧಾತುಗಿಸು ಕನ್ನಡಕ್ಕಾ।
ಹೇತುವಿನೊಳ್ ಸ್ವ ಪರ ಕರ್ತೃವೊಳ್ ಸಂಸ್ಕೃತದಾ॥
ಧಾತುಗನೇಕಾಕ್ಷರಕಿಸು।
ಜಾತಂ ನಿಜಕರ್ತೃವೊಳ್ ಪ್ರಯೋಜನದೆಡೆಯೊಳ್ ॥ ೨೩೧ ॥

**ವೃತ್ತಿ.**—ಕನ್ನಡದ ಧಾತುವಿಂಗೆ ಹೇತುವಿನೊಳಂ ಸ್ವಯಂಕರ್ತೃಕ ಪರಕರ್ತೃಕದೊಳಂ ಇಸುವಕ್ಕುಂ; ಸಂಸ್ಕೃತದನೇಕಾಕ್ಷರಧಾತುಗೆ ಸ್ವಯಂಕರ್ತೃವಿನೊಳಿಸುವಕ್ಕುಂ; ಪ್ರಯೋಜನವಸ್ತುವಿನೊಳ್ ಕರ್ತೃವಿವಕ್ಷೆಯಾಗೆ ಇಸುವಕ್ಕುಂ.

**ಪ್ರಯೋಗಂ.**—ಹೇತುಗೆ—ಮಾತಿಂ ನಗಿಸಿದಂ. ಮೃಗಗಣಮಂ ಪೋವ ಪಜ್ಜೆಯಿಂ ಕಾಣಿಸಿದಂ.

---

**ಟೀಕೆ.**—ಕನ್ನಡಕ್ಕೆ=ಕನ್ನಡವಾದ, ಧಾತುಗೆ=ಧಾತುಗಳ್ಗೆ, ಆ ಹೇತುವಿನೊಳ್=ಆ ಕಾರಣವಲ್ಲಿ, ಸ್ವ ಪರ ಕರ್ತೃವೊಳ್=ಸ್ವಕರ್ತೃ ಪರಕರ್ತೃವಿನಲ್ಲಿ, ಇಸು=ಇಸು ಪ್ರತ್ಯಯಂ, ಜಾತಂ=ಹುಟ್ಟುವುದು; ಸಂಸ್ಕೃತದ, ಆ ಧಾತುಗೆ=ಆ ಧಾತುಗಳ್ಗೆ, ಅನೇಕಾಕ್ಷರಕೆ, ನಿಜಕರ್ತೃವೊಳ್=ಸ್ವಕರ್ತೃವಿನಲ್ಲಿ, ಪ್ರಯೋಜನದೆಡೆಯೊಳ್=ಪ್ರಯೋಜನದ ತಾವಿನಲ್ಲಿ, ಇಸು=ಇಸುವೆಂಬ ಪ್ರತ್ಯಯಂ (ಹುಟ್ಟುವುದು). ॥ ೨೩೧ ॥

ಸ್ವಯಂಕರ್ತೃವಿವಕ್ಷೆಯಾಗೆ –– ನಿಟ್ಟಿಸಿದಂ, ಕಂಪಿಸಿದಂ, ತುಷ್ಟಿಸಿದಂ. ಘೃತಾಹುತಿವಡೆದನಲನಂತೆ ನಿಗೆ ವಳ್ಳಿಸಿದಂ.

ಅನ್ಯಕರ್ತೃಗೆ— ನುಡಿಯಿಸಿದಂ, ಮುಡಿಯಿಸಿದಂ. ಕಡೆಯಿಸಿದಂ ಸುರರಿನಸುರರಿಂ ಪಾಲ್ಗಡಲಂ.

ಏಕಾಕ್ಷರದೊಳ್ ಅನ್ಯಕರ್ತೃಗೆ—ಈಯಿಸಿದಂ, ತೇಯಿಸಿದಂ, ನೋಯಿಸಿದಂ. ಜಗುನೆಯ ತಡಿಯಲ್ಲಿ ತುಱುಗಳಂ ಮೇಯಿಸಿದಂ.

ಸಂಸ್ಕೃತ ಧಾತುವಿನ ಸ್ವಯಂಕರ್ತೃಗೆ — ಬರ್ಪಂಬಂ ನಿಶಿತ ವಿಶಿಖದಿಂ ಖಂಡಿಸಿದಂ. ಭಿನ್ನಕರ್ತೃವಿನೊಳಿಸುವಿಲ್ಲ.

ಪ್ರಯೋಜನವಸ್ತುವಿಂಗೆ ಸಂಸ್ಕೃತಕ್ಕೆ—ಚಿತ್ರಿಸಿದಂ, ಮುದ್ರಿಸಿದಂ.

ಕನ್ನಡಕ್ಕೆ—ಪೊಂಗಿಸಿದಂ, ಸೊಪ್ಪಿಸಿದಂ.

**ಸೂತ್ರಂ** ॥ ನೆಗೞ್ದಿರ್ದ ರೇಫ ಱ ಟ ನಾಂ।
ತ ಗಾಂತ ಸಾಂತೋತ್ವದಿದಿರ ವತ್ವಂ ಪತ್ವಂ ॥
ಪುಗುಗುಂ ದ್ವಿತ್ವಂ ಮೇಣ್ ಸುಗು।
ಯುಗಕ್ಕೆ ಲೋಪೋಕ್ತಿ ನಾಂತ ಣಾಂತಂ ಬತ್ವಂ ॥ ೨೩೨ ॥

**ವೃತ್ತಿ.**— ರೇಫೆ ಱಕಾರ ಟಕಾರ ನಕಾರ ಗಕಾರ ಸಕಾರ ಓಕಾರಾಂತದ ಧಾತುವಿನ ಪರದ ಭವಿಷ್ಯಂತಿಯ ವಕಾರಕ್ಕೆ ಪಕಾರಮಕ್ಕುಂ; ಅದಕ್ಕೆ ವಿಕಲ್ಪದಿಂ ದ್ವಿತ್ವಮುಮಕ್ಕುಂ; ಗಾಂತ ಸಾಂತ ಧಾತುವಿನ ಕಡೆಗೆಲ್ಲಿಯುಂ ಲೋಪಮಕ್ಕುಂ; ನಾಂತ ಣಾಂತಂಗಳ ಪರದ ವತ್ವಕ್ಕೆ ಬತ್ವಮಕ್ಕುಂ.

**ಪ್ರಯೋಗಂ.**— ರೇಫಕ್ಕೆ—ಕೂರ್ಪಂ, ಬರ್ಪಂ, ತರ್ಪಂ, ಇರ್ಪಂ. ಆ ಪುರದೊಳಿರ್ಪನಿನಕುಲ ದೀಪಂ ವಿಪುಲ ಪ್ರತಾಪಂ.

---

**ಟೀಕೆ.**— ನೆಗೞ್ದಿರ್ದ= ಪ್ರಸಿದ್ಧಿವಡೆದಿರ್ದ, ರೇಫ=ರೇಫೆಯ, ಱ=ಱಕಾರದ, ಟ=ಟಕಾರದ, ನಾಂತ=ನಕಾರಾಂತದ, ಗಾಂತ=ಗಕಾರಾಂತದ, ಸಾಂತ=ಸಕಾರಾಂತದ, ಓತ್ವದ=ಓಕಾರದ, ಇದಿರ=ಮುಂದಣ, ವತ್ವಂ=ಭವಿಷ್ಯಂತಿಯ ವಕಾರಂ, ಪತ್ವಂ=ಪಕಾರವಪ್ಪುದು; ಮೇಣ್=ವಿಕಲ್ಪದಿಂದೆ, ದ್ವಿತ್ವಂ=ದ್ವಿರ್ಭಾವಂ, ಪುಗುಗುಂ= ಪ್ರವೇಶವಾಗುವುದು; ಸುಗುಯುಗಕ್ಕೆ=ಸುಕಾರ ಗುಕಾರಂಗಳ್ಗೆ, ಲೋಪೋಕ್ತಿ= ಲೋಪದ ವಾಕ್ಯಂ ಬರ್ಪುದು; ನಾಂತ ಣಾಂತಂ=ನಕಾರಾಂತ ಣಕಾರಾಂತವಾಗೆ, ಬತ್ವಂ=ವಕಾರಂ ಬಕಾರಮಪ್ಪುದು. ॥ ೨೩೨ ॥

ಱಕಾರಕ್ಕೆ—ಆರ್ಪಂ, ತೋರ್ಪಂ, ಮಾರ್ಪಂ. ಮಾರ್ಪೆಡೆಗೆ ತೋಳ ಬಾಳ ಕೂರ್ಪಂ ತೋರ್ಪಂ.

ೞಕಾರಕ್ಕೆ—ಅೞ್ಪಂ, ಅಗೞ್ಪಂ, ಕೀೞ್ಪಂ.

ಡಕಾರಕ್ಕಾದೇಶಮಾದ ೞಕಾರಕ್ಕೆ—ಬೆಗೞ್ಪಂ, ಬಿಸುೞ್ಪಂ, ನೋೞ್ಪಂ, ಬೇೞ್ಪಂ, ಮಾೞ್ಪಂ.

ನಕಾರಕ್ಕೆ—ಆಂಪಂ, ನೋಂಪಂ, ಸೀಂಪಂ. ಮಲೆದು ನರಸೊಳಾಂಪಂ ಗಾವ್ಪಂ.

ಗಾಂತಕ್ಕೆ—ಪೋಪಂ, ತಾಪಂ. ತೂಪಂ. ತೊಳಪ ದಂತಮರೀಚಿ ಸಂತತಿ ಪರ್ವೆ ಬಳ್ಪಳಂ ನೀಳ್ದು. ಮಿಱುಪಂ. ಲಲಾಟದೊಳ್ ಮಿಱುಪ ಕಣ್ಣುರಿಯಂತೆ.

ಸಾಂತಕ್ಕೆ—ತರಿಪಂ, ಬರಿಪಂ ಇರಿಪಂ, ಬೆಸಪಂ, ಕಾಪಂ. ಸಿಸ್ಸೊಡ ನೊಂದು ಭಾಗಮುಂ ಬರಿಪುದು (ಚರಿಪುದು).

ಓಕಾರಕ್ಕೆ—ಓಪಂ.

ದ್ವಿತ್ವಕ್ಕೆ—ತೊಳಪ್ಪಂ, ಬೆಳಪ್ಪಂ, ಉದಯಿಪ್ಪಂ. ಉದಯಿಪ್ಪ ಗಂಡ ಮಾರ್ತಣ್ಡನಲರ್ಚುಗೆಮ್ಮಂ ಗೆಲ್ದು ಬೆಳಪ್ಪನೀಗೆ ಬೀರಂಗಳಂ.

ಗಕಾರ ಸಕಾರಂಗಳ ಲೋಪಕ್ಕೆ—ಪೋಪಂ, ತಾಪಂ, ಮಿಱುಪಂ, ತರಿಪಂ, ಬರಿಪಂ, ಇರಿಪಂ.

ಬಕಾರಕ್ಕೆ—ನಾಂಬಂ, ಎಂಬಂ, ತಿಂಬಂ. ಅದು ಪಣ್ಣದು ಪೋಗು ನೀನು ಮಾನುಂ ತಿಂಬಂ. ಉಣ್ಬಂ, ಕಾಣ್ಬಂ, ಮಾಣ್ಬಂ, ಪೂಣ್ಬಂ. ತಿರಿದುಣ್ಬಂ ಹರನನ್ನಿ ಕಾಡ ಕಸವಂ ತಿಂದಿರ್ದಂ.

**ಸೂತ್ರಂ** ‖ ದಪದ ಪಕಾರಕ್ಕಂ ಸಂ।
ದಿಪುದು ವಿಕಲ್ಪದೆ ಬುಧರ್ಕಳಿಂ ದ್ವಿತ್ವಂ ಸಂ॥
ದಿಪುದು ನಕಾರಂ ನೋಧಾ।
ತುಪರದೊಳಾ ದ ದಪವೊದವೆ ನೋಗಂ ಹ್ರಸ್ವಂ ‖ ೨೩೩ ‖

---

**ಟೀಕೆ.**—ದಪದ-ದಪಕಾರದ, ಪಕಾರಕ್ಕಂ, ಬುಧರ್ಕಳಿಂ=ವಿದ್ವಾಂಸರಿಂದೆ, ದ್ವಿತ್ವಂ, ವಿಕಲ್ಪದೆ, ಸಂದಿಪುದು; ನೋಧಾತುಪರದೊಳ್=ನೋ ಎಂಬ ಧಾತುವಿನ

**ವೃತ್ತಿ.**—ವಿಕಲ್ಪದಿಂ ದಪದ ಪಕಾರಕ್ಕಂ ದ್ವಿತ್ವಮಕ್ಕುಂ. ವ ದಪಂಗ ಳೊದವೆ ನೋಧಾತುವಿನ ಪರದೊಳ್ ನಕಾರಮುಂ ನೋಗೆ ಹ್ರಸ್ವಮುಂ ಅಕ್ಕುಂ. ಸಮುಚ್ಚಯದಿಂ ಬೇ ಎಂಬ ಧಾತುಗಮಂತೆ.

**ಪ್ರಯೋಗಂ.**—ದ್ವಿತ್ವವಿಕಲ್ಪಕ್ಕೆ—ಬರೆದಪಂ, ಬರೆದಪ್ಪಂ; ಕರೆದಪಂ. ಕರೆದಪ್ಪಂ; ನಿಲಿಸಿದಪಂ, ನಿಲಿಸಿದಪ್ಪಂ; ಇಱಿದಪಂ, ಇಱಿದಪ್ಪಂ. ಮಗ ಧೇಶನಂ ನಿಲಿಸಿದಪ್ಪಂ ಚೋಳನಂ ಭಾಷೆಯಂ ಹರಿ ಕೇಳ್.

ನೋ ಬೇ ಧಾತುಗಳ್ಗೆ—ನೊಂದಂ, ನೊಂದಪಂ; ಬೆಂದಂ, ಬೆಂದಪಂ.

**ಸೂತ್ರಂ** ॥ ಸತತಂ ಮಧ್ಯಮಪುರುಷ ।
ಪ್ರತಿಷೇಧದ ವಿಧಿಯೊಳಂ ಪ್ರಯೋಜನ ವಸ್ತ್ವಾ ॥
ಶ್ರಿತ ಹೇತುಕ್ರಿಯೆಯೊಳಮು ।
ನ್ವಿತಮಲ್ಕ್ರಿಯೆ ತಾಂ ಕ್ರಿಯಾರ್ಥಮಪ್ಪೆಡೆಗಳೊಳಂ ॥ ೨೩೪ ॥

**ವೃತ್ತಿ.**—ಮಧ್ಯಮಪುರುಷ ಪ್ರತಿಷೇಧದ ಕ್ರಿಯೆ ವಿಧ್ಯರ್ಥಮಾದಲ್ಲಿಯುಂ ಪ್ರಯೋಜನವಸ್ತುವಿಂಗೆ ನಿಮಿತ್ತಮಪ್ಪ ಕ್ರಿಯೆಯೊಳಂ ಕ್ರಿಯೆ ತಾಂ ಕ್ರಿಯಾರ್ಥ ಮಂ ಪೇೞ್ವೆಡೆಯೊಳಂ ಅಲ್ ಅಕ್ಕುಂ.

**ಪ್ರಯೋಗಂ.**—ವಿಧ್ಯರ್ಥಮಾದಲ್ಲಿ—ಉಸಿರಲಿಂ. ಸಾರಲಿಂ ಬಲ್ಲೞೆಯ ನೆಂದುದೆ ಮಾತು. ಮಿಾಜಲಿಂ. ಏಳಿದಂ ಗೆಯ್ಯಲಿಮಿಾಗಳೆನ್ನೊಳ್. ಆರಯ್ವಾ ರುಂ ಸಾರಲಿಂ.

ಪ್ರತಿಷೇಧಕ್ರಿಯೆಯೊಳ್ ಅಲ್ ಅಕ್ಕುಂ—ಪೆಱತೊಂದನಣಂಬಗೆಯಲ್‌ಗಡ ನಿನಗೆ ಸುಮತಿ ಬೇಱಾಂ ಬೇಱೆ. ಬನದಲ್ಲಿ ಪುಗಲ್ ಪುಗಲೆಂಬ ಗಂಡುಗೋಗಿಲೆ.

---

ಪರದಲ್ಲಿ, ಆ ದ ದಪಂ=ಆ ದಕಾರ ದಪಕಾರಂಗಳ್, ಒದವೆ=ಬರೆ, ನಕಾರಂ=ನಕಾ ರಾಗಮುಂ, ಸಂದಿಪುದು=ಬರ್ಪುದು ; ನೋಗಂ=ನೋ ಎಂಬುದರ್ಕಂ, ಹ್ರಸ್ವಂ= ಹ್ರಸ್ವಂ ಬರ್ಪುದು. ॥ ೨೩೩ ॥

**ಟೀಕೆ.**—ಸತತಂ=ಅವಾಗಳುಂ, ಮಧ್ಯಮಪುರುಷದ, ಪ್ರತಿಷೇಧದ=ಪ್ರತಿಷೇ ಧಾರ್ಥದ, ವಿಧಿಯೊಳಂ=ವಿಧಿಯಲ್ಲಿಯುಂ, ಪ್ರಯೋಜನವಸ್ತು=ಪ್ರಯೋಜನವಸ್ತುವಿ ನಲ್ಲಿ, ಆಶ್ರಿತ=ಆಶ್ರಯಿಸಲ್ಪಟ್ಟ, ಹೇತುಕ್ರಿಯೆಯೊಳಂ = ಕಾರಣಕ್ರಿಯೆಯಲ್ಲಿಯುಂ, ಕ್ರಿಯೆ, ತಾಂ, ಕ್ರಿಯಾರ್ಥಂ=ಕ್ರಿಯಾಪ್ರಯೋಜನಂ, ಅಪ್ಪೆಡೆಗಳೊಳಂ=ಆಗುವೆಡೆಗಳ ಲ್ಲಿಯುಂ, ಅಲ್=ಅಲ್ಲೆಂಬುದು, ಅನ್ವಿತಂ=ಕೂಡಲ್ಪಡುವುದು. ॥ ೨೩೪ ॥

ಪ್ರಯೋಜನ ವಸ್ತುಕ್ರಿಯೆಗೆ — ತಱಿಯಲ್ತಕ್ಕೆಳವರ್ತಿಗಳ್ಗೆ. ಬಿಡದೀಯಲ್ತಕ್ಕ ಸಂಪತ್ತಿ, ಮಾತಱಿಯಲ್ತಕ್ಕ ವಿವೇಕಂ.

ಕ್ರಿಯೆಗೆ—ಗೆಲಲ್ಬಗೆದಂ; ಪುಗಲ್ಬಂದಂ; ಮುತ್ತಲ್ವೇಟ್ಟಂ. ಈಯಲ್ಬಂದತ್ತು ಕಲ್ಪಾಂಘ್ರಿಪಮಭಿಮತಮಂ.

**ಸೂತ್ರಂ ॥** ಸಂದಿಪುದಲ್ಲಿನ ಪರದೊಳ್ ।
ಬಂದು ಕೆಕಾರಮುಮದೊರ್ಮೆ ವೈಕಲ್ಪಿಕದಿಂ ॥
ಸಂದಿಪುದಲ್ಗಂ ಲೋಪಂ ।
ಬಂದಾ ಪ್ರತಿಷೇಧವಿಧಿಯನೊದವದ ಪಕ್ಷಂ ॥ ೨೩೫ ॥

**ವೃತ್ತಿ.**—ಪ್ರತಿಷೇಧದ ವಿಧಿ ಪೂರ್ದದೊಡಲುವಿನ ಮುಂದೊರ್ಮೆ ಕೆಕಾರಮಕ್ಕುಂ: ಆಯಲ್ಗೆ ವಿಕಲ್ಪದಿಂ ಲೋಪಂ.

**ಪ್ರಯೋಗಂ.**—ಕೆಕಾರಕ್ಕೆ—ನುಡಿಯಲ್ಕೆ ಬಲ್ಲಂ. ಪೇೞಲ್ಕೆ ಕೇಳ್ದಂ. ಬೇಡಲ್ಕೆ ಬಂದಂ. ಬಿತ್ತರಿಸಲ್ಕೆವೇೞ್ ಸುವರ್ಣೋತ್ಕರಮಂ.

ಅಲುವಿನ ಲೋಪಕ್ಕೆ—ಉಡಲ್ವೇೞ್, ಉಡವೇೞ್; ತರಲ್ವೇೞ್, ತರವೇೞ್. ತರವೇೞ್ ಸನ್ನಿಧಿವಾಜಿ ಸಾಧನಮಂ.

**ಸೂತ್ರಂ ॥** ಪ್ರತಿಪಾದ್ಯಮುತ್ವಮಿತ್ವಂ ।
ಮತಿವಂತರಿನೆಯ್ದೆ ಪೂರ್ವಕಾಲ ಕ್ರಿಯೆಗಾ ॥
ಯುತುಮುತ್ತುಮುತ್ತೆಯುತೆಯಿಂ ।
ದು ತಗುಳ್ಗುಂ ವರ್ತಮಾನ ವಿಹಿತ ಕ್ರಿಯೆಯೊಳ್ ॥ ೨೩೬ ॥

**ವೃತ್ತಿ.**— ಭೂತಕಾಲ ಕ್ರಿಯೆಯೊಳುಕಾರಮುಮಿಕಾರಮುಮಕ್ಕುಂ ; ವರ್ತಮಾನ ಕ್ರಿಯೆಯೊಳ್ ಉತುಂ ಉತ್ತುಂ ಉತ್ತೆ ಉತೆ ಎಂದು ನಾಲ್ಕು ರೂಪಮಕ್ಕುಂ.*

---

**ಟೀಕೆ.**—ಆ ಪ್ರತಿಷೇಧ ವಿಧಿಯಂ=ಆ ಮಧ್ಯಮಪುರುಷದ ಪ್ರತಿಷೇಧದ ವಿಧಿಯಂ, ಒದವದ ಪಕ್ಷಂ=ಪೂರ್ದದ ಪಕ್ಷದಲ್ಲಿ, ಅಲ್ವಿನ=ಅಲ್ ಎಂಬುವಱ, ಪರದೊಳ್=ಮುಂದುಗಡೆಯಲ್ಲಿ, ಕೆಕಾರಮುಂ, ಅದು, ಒರ್ಮೆ=ಒಂದು ಬಾರಿ, ಬಂದು,

* **ವಿಚಾರಂ.**—ಈ, ಓ, ಕಾ, ಕೀ, ಕೇ, ಸೋ, ಪೂ, ಬೇ, ಬಾ—ಎಂಬೇಕಾಕ್ಷರ ಧಾತುಗಳ್ಗಂ ಇಕಾರಾಂತಂಗಳ್ಗಂ ಎಕಾರಾಂತಂಗಳ್ಗಂ ಉಕಾರಂ ಪತ್ತುವುದು. ಉಕಾರಾಂತಂಗಳ್ಗೆ ಇಕಾರಂ ಪತ್ತುವುದು. ವ್ಯಂಜನಾಂತಂಗಳ್ಗೆ ಎರಡುಂ ಪತ್ತುಗುಂ. ಅಲ್ಲಿ ಉತ್ವಂ ಪತ್ತಿದಲ್ಲಿ ಭೂತಕಾಲದ ದಕಾರಂ ಪತ್ತುವುದು, ಇತ್ವಂ ಪತ್ತಿದಲ್ಲಿ ದತ್ವಂ ಬಾರದು; ಅವು ಪ್ರಯೋಗಂಗಳಲ್ಲಿ ನೋಡಿ ತಿಳಿವುದು. ಬಂದಂ ಪೋದಂ—ಎಂಬಲ್ಲಿ, ಬಂದು ಪೋದಂ; ಪೋದಂ ಬಂದನೆಂಬಲ್ಲಿ—ಪೋಗಿ ಬಂದಂ, ಎಂಬಂತೆ.

ಭೂತಕಾಲದುಕಾರಕ್ಕೆ—ಕುಸಿದು ನಡೆದಂ; ಒಸೆದು ಕೊಟ್ಟಂ; ನೆನೆದು ಪೇೞ್ದಂ. ಮಿಂದುಂಡು ಕುಡಿದು ಮಗುೞ್ದಂ ಬಂದಿರ್ಪೊಡವಿರ್ಪ.

ಇಕಾರಕ್ಕೆ—ನಚ್ಚಿ ಬಂದಂ; ಮೆಚ್ಚಿ ಪೊಗೞ್ದಂ; ಎತ್ತಿ ನಡೆದಂ; ಮುತ್ತಿ ಬಿಟ್ಟಂ. ತಿರ್ದಿ ನರನುದ್ದಮಿಸೆ ಬೇಱಿಟ್ಟಂ.

ವರ್ತಮಾನದೊಳ್ ಉತುಗೆ—ನಗುತುಂ ಬಂದಂ; ಪುಗುತುಮಿರ್ದಂ; ಕರೆಯುತುಂ ಪೋದಂ. ಸೂಸುತುಂ ನದನದ್ಯಚ್ಛ ಜಲಂಗಳಂ

ಉತ್ತುಗೆ—ಕಾದುತ್ತುಂ ಬಂದಂ; ಜಡಿಯುತ್ತುಂ ಪೋದಂ. ಕೆದಱುತ್ತುಂ ಮಣಲಂ ಕಪಿಧ್ವಜಂ ನಿಲ್ಕಿ ನಿವರ್ತಿಸುತ್ತುಮಿರೆ.

ಉತ್ತೆಗೆ—ಕೆತ್ತುತ್ತೆ ಕಡಿದಂ; ಪರಸುತ್ತೆ ಬಂದಂ. ಪೋಗು ಪೋಗು ಕಾದುತ್ತೆ ಬಂದಪೆಂ ಸಲ್ಲವೆಮ್ಮೊಳಿವು.

ಉತೆಗೆ— ಮಿಱುಗುತೆ ಪೋದಂ; ಪಸುತೆ ನಿಂದಂ: ಈಸುತಿರ್ದಂ. ತಾನಂಬೆಗೆ ಪೇೞ್ದುದಂ ತೆಱುತಿರ್ಪ್ಪರ್.

ಸೂತ್ರಂ ॥ ದ ದಪಂಗಳ್ ಪರದೊಳ್ ತಾ ।
ಮೊದವಿರೆ ಮಿಾಯೆಂಬುದರ್ಕೆ ತರ್ಬರ್ಗಳ್ಗೊಂ ।
ದಿದ ಕೊಲ್ಸಲ್ಗಳ್ಗಮರ್ದಿ ।
ರ್ಪುದು ನತ್ವಂ ನಿಲ್ಗೆ ಬಲ್ಲರಿಂದೆ ವಿಕಲ್ಪಂ ॥ ೨೩೭ ॥

.............................................................................................

ಸಂದಿಪುದು=ಸಂದಿಸುವುದು; ವೈಕಲ್ಪಿಕದಿಂ=ವಿಕಲ್ಪದಿಂದೆ, ಅಲ್ಗಂ=ಅಲ್ ಎಂಬುದಱ ಲಕಾರಕ್ಕಂ, ಲೋಪಂ, ಬಂದು, ಸಂದಿಪುದು=ಬರ್ಪುದು. ॥ ೨೩೫ ॥

ಟೀಕೆ.—ಮತಿವಂತರಿಂ=ಬುದ್ಧಿವಂತರಿಂದೆ, ಎಯ್ದೆ=ಚೆನ್ನಾಗಿ, ಪೂರ್ವಕಾಲ ಕ್ರಿಯೆಗೆ=ಭೂತಕಾಲದ ಕ್ರಿಯೆಗೆ, ಉತ್ವಂ, ಇತ್ವಂ, ಪ್ರತಿಪಾದ್ಯಂ=ಪ್ರತಿಪಾದಿಸಲ್ಪಡುವುದು; ವರ್ತಮಾನ=ವರ್ತಮಾನಕಾಲದಲ್ಲಿ, ವಿಹಿತ=ಕೂಡಲ್ಪಟ್ಟ, ಕ್ರಿಯೆಯೊಳ್, ಆಯುತುಂ=ಆ ಉತುಂ, ಉತ್ತುಂ, ಉತ್ತೆ, ಉತೆ, ಎಂದು, ತಗುಳ್ಗುಂ = ಎಯ್ದುವುದು. ॥ ೨೩೬ ॥

ಟೀಕೆ.—ಪರದೊಳ್=ಧಾತುವಿನ ಪರದಲ್ಲಿ, ದ ದಪಂಗಳ್=ದಕಾರ ದಪಕಾರಂಗಳ್, ತಾಂ, ಒದವಿರೆ= ಬಂದಿರೆ, ಮಿಾ ಎಂಬುದರ್ಕೆ=ಮಿಾ (ಸ್ನಪನೇ) ಎಂಬ ಧಾತುವಿಂಗೆ, ತರ್ಬರ್ಗಳ್ಗೆ=ತರ್ ಬರ್ ಎಂಬ ಧಾತುಗಳ್ಗೆ, ಒಂದಿದ ಕೊಲ್ಸಲ್ಗಳ್ಗೆ= ಕೂಡಿದ ಕೊಲ್ ಸಲ್ ಎಂಬ ಧಾತುಗಳ್ಗೆ, ನತ್ವಂ, ಅಮರ್ದಿರ್ಪುದು = ಪೊರ್ದುಗೆಯಾಗಿರ್ಪುದು; ನಿಲ್ಗೆ=ನಿಲ್ ಎಂಬುದಕ್ಕೆ, ಬಲ್ಲರಿಂದೆ=ವಿದ್ವಾಂಸರಿಂದೆ, ವಿಕಲ್ಪಂ= ವಿಕಲ್ಪವಾಗಿ ಬರ್ಪುದು. ॥ ೨೩೭ ॥

ವೃತ್ತಿ.—ದ ದಪಂಗಳ್ಪರಮಾಗೆ ಮಿಾ ಎಂಬುದರ್ಕಂ ತರ್ ಬರ್ಗಳ ರೇಫೆ ಗಂ ಕೊಲ್ ಸಲ್ಗಳ ಲತ್ವಕ್ಕಂ ನಕಾರಾದೇಶಂ; ನಿಲ್ ಎಂಬುದರ್ಕೆ ವಿಕಲ್ಪಂ.*

ಪ್ರಯೋಗಂ.—ಕ್ರಮಪ್ರಯೋಗಕ್ಕೆ—ಅಲರ ಮೞೆಯೊಳ್ ಮಿಂದಂ ಭೂಪಾಳಮನ್ಮಥನಾಜಿಯೊಳ್. ನಡೆತಂದಂ ಮೇರೆದಪ್ಪಿ ಕವಿವಂಬುಧರಂಬೊಲ್ ಅವನ ಬೀಡಿನ ಬೀರನ ಶಿರೋಬ್ಜವಾರ್ತಂದರಿದರ್. ಬಂದಂ ಫಲ್ಗುಣನಿಲ್ಲ ಸಂದಯಮಣಂ ತಾನಿಲ್ಲ. ಬಂದಂನರಂ ಕೊಂದನಿಂನೆ ತಂತಮನೆ ಕೊಂದ ರಿಂದು ಪಡೆಯಾ ಸಕಳಂ. ಕೊಂದಂ ಕೊಳ್ವಂತೆ ರಸಮನಂಜನಸಿದ್ಧಂ. ಬೇಡರ ಪ್ರೋಲ್ ಮಸಗಿ ತುಱುಗೊಳಲ್ ಬೞಿಸಂದಂ. ಮಿಂದಪಂ, ತಂದಪಂ, ಬಂದಪಂ, ಕೊಂದಪಂ, ಸಂದಪಂ.

ನಿಲ್ಗೆ—ನಿಂದಂ, ನಿಲ್ತಂ; ನಿಂದಪಂ, ನಿಲ್ತಪಂ. ಮಂಡಲವ್ಯೂಹಮ ನೊಡ್ಡಿ ನಿಂದನಿಱಿಯಲ್. ಬೆನ್ನೊಳ್ ನಿಲ್ತಂ ಗಾಂಡೀವಿ.

ಸೂತ್ರಂ ॥ ಪ್ರಕೃತಿಯ ಪೂರ್ವದಿಕಾರದೊ।
ಳುಕಾರದೊಳ್ ಹ್ರಸ್ವದೇತ್ವವೋತ್ವಂ ಬಹುಳಂ ॥
ಪ್ರಕಟಂ ತರ್ಬರ್ಗಳ ವೊದ।
ಲಕಾರದೊಳ್ ದೀರ್ಘವಿಧಿ ವಿಲೋಮಕ್ರಿಯೆಯೊಳ್ ॥ ೨೩೮ ॥

ವೃತ್ತಿ.—ದ ದಪಂಗಳ್ಪರಮಾದ ಧಾತುವಿನ ಮೊದಲಿಕಾರದೊಳಮುಕಾರ

---

ಟೀಕೆ.—'ದ ದಪಂಗಳ್ಪರಮಾದ' ಎಂಬುದನುವರ್ತನೆ—ಪ್ರಕೃತಿಯ=ದ ದಪಂ ಗಳ್ಪರಮಾದ ಧಾತುವಿನ, ಪೂರ್ವದ=ಮೊದಲ, ಇಕಾರದೊಳ್, ಉಕಾರದೊಳ್, ಹ್ರಸ್ವದ, ಎತ್ವಂ, ಒತ್ವಂ, ಬಹುಳಂ=ಬಹುಳವಾಗಿ ಬಪ್ಪುದು; ವಿಲೋಮಕ್ರಿಯೆ ಯೊಳ್=ಪ್ರತಿಷೇಧದ ಕ್ರಿಯೆಯೊಳ್, ತರ್ಬರ್ಗಳ=ತರ್ಬರ್ ಎಂಬ ಧಾತುಗಳ, ವೊದಲ=ಆದಿಯ, ಅಕಾರದೊಳ್, ದೀರ್ಘವಿಧಿ=ದೀರ್ಘದ ವಿಧಿ, ಪ್ರಕಟಂ=ಸಿದ್ಧ ಮಾಗುವುದು. ॥ ೨೩೮ ॥

* ವಿಚಾರಂ.—ಶಬ್ದಾನುಶಾಸನದಲ್ಲಿ ಸೂತ್ರಂ— ॥ ಕೊಲ್ಸಲೋರ್ನಃ ॥ ೪೯೧ ॥ ಕೊಲ್ಸಲ್ ಇತ್ಯೇತಯೋರ್ಧಾತ್ವೋಃ ನಕಾರಾದೇಶೋ ಭವತಿ ದಕಾರಾದೌ ಪ್ರತ್ಯಯೇ ಪರೇ—ಎಂದುದಾಗಿ ಕೊಲ್ ಸಲ್ ಎಂಬ ಧಾತುಗಳ್ಗೆ ದಕಾರಾದಿ ಪ್ರತ್ಯಯಂ ಪರಮಾಗೆ ನಕಾರಾದೇಶಮಕ್ಕುಂ. ॥ ತರ್ಬರೋ ರಿಮಿಚ ॥ ೪೯೨ ॥ ತರ್ಬರ್ ಇತ್ಯೇತಯೋರ್ಧಾತ್ವೋಃ ನಕಾರಾದೇಶೋ ಭವತಿ ದಕಾರಾದೌ ಪ್ರತ್ಯಯೇ ಇಮಿಚ ಪರೇ—ಎಂದುದಾಗಿ, ದಕಾರಾದಿಪ್ರತ್ಯಯಂ ಪರಮಾಗೆಯುಂ ಮಧ್ಯಮಪುರುಷದ ವಿಧ್ಯರ್ಥದ ಬಹುವಚನವಾದ ಇಮ್ ಎಂಬುದು ಪರಮಾಗೆಯುಂ, ತರ್ ಬರ್ ಎಂಬ ಧಾತುಗಳ್ಗೆ ನಕಾರಾ ದೇಶಮಕ್ಕುಂ; ಅದೆಂತೆಂದೊಡೆ—ತಂದಂ, ತಂದಪಂ, ತಂದು, ತನ್ನಿಂ; ಬಂದಂ, ಬಂದಪಂ, ಬಂದು, ಬನ್ನಿಂ—ಎಂದಱಿವುದು.

ದೊಳಂ ಹ್ರಸ್ವಮಪ್ಪೇತ್ವಮುವೋತ್ವಮುಮಕ್ಕುಂ; ತರ್ ಬರ್ ಎಂಬ ಧಾತುಗಳ ಮೊದಲಕಾರಕ್ಕೆ ಪ್ರತಿಷೇಧಕ್ರಿಯೆಯೊಳ್ ದೀರ್ಘಮಕ್ಕುಂ. §

**ಪ್ರಯೋಗಂ.**—ಇತ್ವಪೆತ್ವಕ್ಕೆ—ಬಿಸು, ಬೆಚ್ಚಂ; ತಿಱು, ತೆತ್ತಂ; ಗಿಱು, ಗೆತ್ತಂ; ಕಿಡು, ಕೆಟ್ಟಂ. ಮಱುಗುವಿನಂ ಮಾಣಬೆಚ್ಚನರಿಸಾಹಿನಿಯಂ. ಮುಗಿಲಂ ಮಾಱಾನೆಗೆತ್ತಂ.

ಉತ್ವದೊತ್ವಕ್ಕೆ—ಉಗು, ಒಕ್ಕಂ; ಪುಗು, ಪೊಕ್ಕಂ; ಕುಡು, ಕೊಟ್ಟಂ. ಎನುತುಮನಿತುಮಂ ಧರ್ಮಜಂ ಸೂಜಿಗೊಟ್ಟಂ. ತುಡು, ತೊಟ್ಟಂ. ತೊಟ್ಟಂ ಸಂಮೋಹನಮಂ.

ದಪದೊಳಂ—ಎಚ್ಚಪಂ, ಬೆಚ್ಚಪಂ, ತೊಟ್ಟಪಂ, ಕೊಟ್ಟಪಂ—ಎಂಬಂ ತವರ್ಕಂ ಪತ್ತುಗುಂ.

ಬಹುಳದಿಂ ಕೆಲವಱೊಳಿತ್ವಮೊತ್ವಮಿಲ್ಲ—ಇತ್ತಂ, ಇರ್ದಂ. ಪಸೆಯಿರ್ದಂ ಗರುಡವೇಗ ನೃಪನಂದನೆಯೊಳ್. ಇಟ್ಟಂ. ಬೇಟ್ಪರಿದಿರೊಳ್ ಚಕ್ರಾದಿಚಿಹ್ನಂಗಳಂ ತರಿಸಿಟ್ಟಂ. ಉಟ್ಟಂ, ಸುಟ್ಟಂ. ಜವದಿಂದಗಮಲೆಯಂ (?) ಸುಟ್ಟಂ. ಕಟ್ಕಿಯಿಂದುಟ್ಟಂ. ಉರ್ಕಿದಂ, ಸುರ್ಕಿದಂ. ಆಗಳೆ ಗಂಡುಡಿಗೆಯುಟ್ಟು ಬಿಟ್ಟು ಹಿಣಿಲಂ. ದಪಕ್ಕಮಂತೆ.

ದೀರ್ಘಕ್ಕೆ—ಪತಿಗೆಂದುಂ ಯುದ್ಧದೊಳ್ ಬನ್ನಮಂ ತಾರಂ. ನೃಪಂ ಬೆಂಬಿಟ್ಟುಂ ದೂದಟ್ಟಿಯುಂ ಬಾರಂ.

ಬಹುಳದಿಂ ಪ್ರತಿಷೇಧಮಲ್ಲದಲ್ಲಿಯುಂ (ವಿಧಿಯೊಳ್) ದೀರ್ಘಮುಂಟು—ಬಾರ ಮುರಾಳಿಕಾಗಮನೇ!

**ಸೂತ್ರಂ ॥** ಧಾತುವಿನಂತ್ಯದ ವರ್ಗೋ ॥
ಪೇತ ತೃತಿಯಾಕ್ಷರಕ್ಕೆ ತಾಂ ಪ್ರಥಮತ್ವಂ ॥
ಮಾತೇಂ ವ್ಯಂಜನರೂಪದಿ ।
ನೇತೆಱದಿಂ ಸ್ವಂತಧಾತುಗಕ್ಕುಂ ಚತ್ವಂ ॥ ೨೫ ॥

---

**ಟೀಕೆ.**—'ಪ ದಪಂಗಳ್ಪರದೊಳೊದವಿರೆ' ಎಂಬುದನುವರ್ತನೆ—ಧಾತುವಿನ= ದ ದಪಂಗಳ್ಪರಮಾದ ಪ್ರಸ್ವಾದಿ ದ್ವಿಸ್ವರಂಗಳಾದುಕಾರಾಂತ ಧಾತುವಿನ, ಅಂತ್ಯದ= ಕಡೆಯಣ ವರ್ಗ=ವರ್ಗಂಗಳಲ್ಲಿ, ಉಪೇತ=ಕೂಡಲ್ಪಟ್ಟ, ತೃತೀಯಾಕ್ಷರಕ್ಕೆ=ಮೂಱನೆ

§ ವಿಚಾರಂ.—ಇಸು, ಬಿಸು, ಗಿಱು, ಕಿಱು, ತಿಱು, ಕಿಡು, ಉಗು, ಪುಗು, ಕುಡು, ತುಡು—ಎಂಬೀ ಪ್ರಸ್ವಾದಿ ದ್ವಿಸ್ವರಂಗಳಾದುಕಾರಾಂತ ಧಾತುಗಳ್ಗೆ ಕ್ರಮದಿಂದೆ ಆದಿಯ ಇಕಾರಕ್ಕೆಕಾರಂ ಉಕಾರಕ್ಕೊಕಾರಂ ಬರ್ಪುವೆಂದಱಿವುದು.

**ವೃತ್ತಿ.**—ಗ ಡ ದಂಗಳ್ಸ್ವರಮಾದ ಧಾತುವಿನ ಕಡೆಯ ವರ್ಗತೃತೀಯಾಕ್ಷರಕ್ಕೆ ವ್ಯಂಜನ ರೂಪದಿಂ ತಂತಮ್ಮ ಮೊದಲಕ್ಕರಮಕ್ಕುಂ; ಸುಕಾರಾಂತ ಧಾತುವಿನ ಕಡೆಯ ಸುಕಾರಕ್ಕೆ ವ್ಯಂಜನ ಚಕಾರಮಕ್ಕುಂ.*

**ಪ್ರಯೋಗಂ.**—ಗಕಾರಕ್ಕೆ—ಉಗು, ಒಕ್ಕುಂ; ಪುಗು, ಪೊಕ್ಕುಂ; ನಗು, ನಕ್ಕುಂ; ಮಿಗು, ಮಿಕ್ಕುಂ. ತಕ್ಕೆಂದಱಾವೆಡೆಯೊಳ್ ಮಿಕ್ಕುಂ ಕರ್ಣಾರ್ಜುನರ್ಕಳಂ. ಪೊಕ್ಕನಂದು ನಿಜಮಂದಿರಮಂ ಪರಸೈನ್ಯಭೈರವಂ.

ಡಕಾರಕ್ಕೆ—ನಡು, ನಟ್ಟುಂ; ಪಡು, ಪಟ್ಟುಂ; ಕಿಡು. ಕೆಟ್ಟುಂ; ಕುಡು, ಕೊಟ್ಟುಂ. ಪಿಡಿಯೆಂದಸಿತಾಳಪತ್ರಮಂ ಯತಿ ಕೊಟ್ಟುಂ. ಗರಂ ನೆಟಿಲೊಳೆ ಪೋರ್ವಂತೆವೊಲ್ ದೆಸೆಗೆಟ್ಟುಂ. ಸುಡು, ಸುಟ್ಟುಂ; ಬಿಡು, ಬಿಟ್ಟುಂ.

ದಕಾರಕ್ಕೆ—ಮುದು, ಮುತ್ತುಂ. ಮುತ್ತುದು ನೇಸಱ ತೇಜಂ ಸುತ್ತುದು ದಾವಾಗ್ನಿ.

ಸುಕಾರದ ಚತ್ವಕ್ಕೆ-ಪಸು, ಪಚ್ಚುಂ; ಬಿಸು, ಬೆಚ್ಚುಂ; ಇಸು, ಎಚ್ಚುಂ. ಕಳ್ಳ ವೆಳ್ಳಿ ನಟ್ಟಲ್ ಬಾಯೊಳ್ ಬೆಚ್ಚುಂತಿರೆ. ಮಾಱಾಂತೆಚ್ಚುಂ ಮಹಾರಥಂ ನರಂ.

ದಪಕ್ಕಮಂತೆ.

**ಸೂತ್ರಂ** ॥ ಱಾಂತದೊಳಂ ವೃತಿಪಾನಾ ।
ಥಾಂತದೊಳಂ ವ್ಯಂಜನದ ತಕಾರಂ ದೀರ್ಘಂ ॥
ಪಿಂತಿರೆ ಬರ್ಕುಂ ಹ್ರಸ್ವತೆ ।
ಱಾಂತಕ್ಕುಂ ರೇಫಮೊರ್ಮೆ ತವುಗೆ ಪಕಾರಂ ॥ ೨೪೦ ॥

---

ಯಕ್ಷರಂಗಳ್ಗೆ, ಪ್ರಥಮತ್ವಂ = ಮೊದಲಕ್ಷರದ ಭಾವಂ, ತಾಂ, ಮಾತೇಂ = ಹೇೞ್ವುದೇಂ, ವ್ಯಂಜನರೂಪದಿಂ, ಅಕ್ಕುಂ=ಆಗುವುದು; ಏ ತೆಱದಿಂ=ಆವ ರೀತಿಯಿಂದೆಯುಂ, ಸ್ವಂತ ಧಾತುಗೆ=ಸುಕಾರಾಂತಧಾತುಗೆ, ಚತ್ವಂ=ಚಕಾರಂ ಆಗುವುದು. ॥ ೨೩೯ ॥

*ವಿಚಾರಂ.—ಪುಗು, ನಗು, ಉಗು, ಮಿಗು—ಎಂಬ ಗಾಂತಕ್ಕಂ—ಅಡು, ಸುಡು, ಕುಡು, ತುಡು, ಬಿಡು, ಉಡು, ನಡು, ಪಡು, ಇಡು, ಕಿಡು, ಪುಡು—ಎಂಬ ಡಾಂತಕ್ಕಂ—ಆಸೆವಡು, ಪಡಲಿಡು, ಮುಂಬಿಡು, ಹೊಲಬುಗಿಡು, ಒಡಂಬಡು, ಮೂಗುವಡು, ಅೞ್ಜಂಬಡು, ಕರುವಿಡು, ತಿಟ್ಟನಿಡು, ಉಬ್ಬಸಂಬಡು—ಎಂಬತೆ ಬಹುಸ್ವರಯುಕ್ತಂಗಳಾದೊಡಂ, ಇಡು, ಪಡು, ಮಡು, ಬಿಡು, ಕುಡು—ಎಂಬ ಹ್ರಸ್ವಾದಿ ದ್ವಿಸ್ವರಂಗಳಾದುಕಾರಾಂತ ಧಾತುಗಳಂತ್ಯವಾಗಿರ್ಪುದಱಿಂದೆ ಈ ಕ್ರಿಯಾಸಮಾಸ ರೂಪಧಾತುಗಳ್ಗಂ ದಾಂತದಲ್ಲಿ 'ಮುದು' (ವೃದ್ಧೌ) ಎಂಬುದರ್ಕಂ ಪ್ರಥಮಾಕ್ಷರಂ ಬರ್ಕುಂ. ಇಸು, ಬಿಸು, ಪಸು—ಎಂಬ ಸುಕಾರಾಂತಕ್ಕೆ ಚತ್ವಂ ಬರ್ಕುಂ.

**ವೃತ್ತಿ.**—ದ ದಪಂಗಳ್ಪರಮಾದ ಧಾತುವಿನ ಕಡೆಯ ಱಕಾರಕ್ಕೆಯುಂ ಸಾ, ಈ ಎಂಬ ಧಾತುಗಳ ಕಡೆಯೊಳಂ ವ್ಯಂಜನ ತಕಾರಮಕ್ಕುಂ; ಸಾ, ಈ ಎಂಬವಱಾದಿ ದೀರ್ಘಕ್ಕೆ ಹ್ರಸ್ವಮಕ್ಕುಂ; ಱಕಾರಕ್ಕೊರ್ಮೆ ರೇಫಮಕ್ಕುಂ; ತವು ಎಂಬ ಧಾತುವಿನ ವಕಾರಕ್ಕೆ ಪಕಾರಮಕ್ಕುಂ.*

**ಪ್ರಯೋಗಂ.**—ಱಕಾರದ ತಕಾರಕ್ಕೆ—ಕಿಱು, ಕೆತ್ತಂ; ತಿಱು, ತೆತ್ತಂ; ಗಿಱು, ಗೆತ್ತಂ; ಪೆಱು, ಪೆತ್ತಂ. ಜಾತವೇದಂ ಪಟು ಕಪಟಮಯ ವ್ಯಾಜದಿಂ ಬೇಡಿ ಪೆತ್ತಂ. ಸಾಲಭಂಜಿಕೆಗೆತ್ತರಸಂ ನೋಡಿದಂ ಲಲಾಟ ಕೋಮಲೆಯಂ.

ಸಾ, ಈ, ಎಂಬಿವರ್ಕೆ—ಸತ್ತಂ, ಇತ್ತಂ. ಕಾಡಿನಿನ್ನುಳ್ಳರುಂ ಸತ್ತರ್ (ಬೇಸತ್ತರ್) ಕೆಲರ್. ನಗೆಮೊಗದೊಳುಗಿದು ಕವಚಮನಿಂದ್ರಂಗಿತ್ತಂ ಕರ್ಣಂ.

ಸಾ, ಈ, ಎಂಬವಱಂತೆ ಸಮುಚ್ಚಯವಶದಿಂ ಮತ್ತೆ ಕೆಲವಱಾದಿ ದೀರ್ಘಕ್ಕೆ ಹ್ರಸ್ವಮುಂಟು— ಕಾಣ್, ಕಂಡಂ; ಏೞ್, ಎೞ್ದಂ; ಬೀೞ್, ಬಿೞ್ದಂ; ಆೞ್, ಅೞ್ದಂ—ಇವು ಮೊದಲಾದುವು.

ಱಕಾರದ ರೇಫೆಗೆ—ಆಱು ಎಂಬುದರ್ಕೆ ಅರ್ತಂ; ವಿಕಲ್ಪದಿಂ ಅಱುತನೆಂದುಮುಂಟು—ಅರ್ತ ಕದಂಪು ಬತ್ತಿದ ಕಾಲುಂ ಹುರಿಯೞಿದಬೞಿವಿೞಿಯೆಸದ ಸೆರೆಯುಂ. ಆಱು ಎಂಬುದರ್ಕೆ ಆರ್ತಂ. ಮಾರ್ತಪ್ಪ ತೆರೆಗಳಿಂ ತರಲಾರ್ತುದು ತನ್ನದಿಗೆ ಸುರನದೀ ವಿಭ್ರಮಮಂ.

ತವುಗೆ—ತಪ್ಪಂ, ತಪ್ಪಪಂ. ತಪ್ಪಂ ತನ್ನೊಳ್ ಪಳಂಚಿ ಕಿಡುಗುಟ್ಟಿ ತಪ್ಪುವಂಬುಗಳನಪಂ.

........................................................................................................

**ಟೀಕೆ.**—'ದ ದಪಂಗಳ್ಪರದೊಳಿರೆ' ಎಂಬುದನುವರ್ತನೆ—ಱಾಂತದೊಳಂ= ರೇಫಾಂತ ಧಾತುಗಳಲ್ಲಿಯುಂ, ಮೃತಿದಾನಾರ್ಥಾಂತದೊಳಂ=ಸಾ ಈ ಎಂಬ ಮರಣಾರ್ಥ ದಾನಾರ್ಥದ ಧಾತುಗಳಂತ್ಯದಲ್ಲಿಯುಂ, ವ್ಯಂಜನದ, ತಕಾರಂ, ಬರ್ಕುಂ=ಱಾಂತಕ್ಕಂ ಸಾ ಎಂಬುದರ್ಕಂ ಆದೇಶವಾಗಿ ಈ ಎಂಬುದರ್ಕಾಗಮವಾಗಿ ಬರ್ಪುದು; ಪಿಂತೆ=ಹಿಂದೆ, ದೀರ್ಘಂ, ಇರೆ, ಹ್ರಸ್ವತೆ, ಬರ್ಕುಂ=ಬರ್ಪುದು; ಱಾಂತಕ್ಕಂ=ರೇಫಾಂತಕ್ಕೆಯುಂ, ಒರ್ಮೆ=ಒಂದು ಬಾರಿ, ರೇಫಂ, ಬರ್ಪುದು; ತವುಗೆ= ತವು (ಕ್ಷಯೇ) ಎಂಬ ಧಾತುಗೆ, ಪಕಾರಂ, ಬರ್ಪುದು. ॥ ೩೪೦ ॥

*ವಿಚಾರಂ.— ಪೆಱು, ತೆಪ್ಪಱು, ಕಿಱು, ತಿಱು, ಗಿಱು, ಪೊಱು, ಎಬ್ಬಱು, ಆಸಱು, ಬೇಸಱು— ಎಂಬೀ ಱಾಂತಕ್ಕೆ ತಕಾರಂ ಬರ್ಪುದು: ಉೞಿದ ಱಾಂತಕ್ಕೆ ಒರ್ಮೆ ಎಂಬುದಱಿಂ ವಿಕಲ್ಪದಿಂ ರೇಫೆಯಕ್ಕುಂ.

**ಸೂತ್ರಂ** ‖ ನಿಱುತಂ ಕ ಚ ಟ ತ ಪಂಗಳ ।
ಪರದ ದಕಾರಕ್ಕೆ ಪೂರ್ವರೂಪಮದಕ್ಕುಂ ‖
ಪರವರ್ಣಂ ಧಾತ್ವಂತ್ಯದೊ ।
ೞಿರೆ ಡತ್ವಂ ಮೇಣ್ ತಕಾರಮೊರ್ಮೆಯಕಾರಂ ‖ ೨೪೧ ‖

**ವೃತ್ತಿ.**—ಧಾತುವಿನ ಕಡೆಯ ಕ ಚ ಟ ತ ಪಂಗಳ ರೂಪಮಂ ಪರದ ದಕಾರಂ ಪಡೆಗುಂ; ಕ ಚ ಟ ತ ಪಂಗಳಲ್ಲದ ಪೆಱವಕ್ಕರಂಗಳ್ ಧಾತುವಿನ ಕಡೆಯೊಳಿರೆ ಪರದ ದಕಾರಕ್ಕೆ ಡಕಾರಮುಂ ತಕಾರಮುಕಾರಮುಮಕ್ಕುಂ.*

**ಪ್ರಯೋಗಂ.**—ಕಕಾರಕ್ಕೆ— ಒಕ್ಕು, ಒಕ್ಕರ್; ಮಿಕ್ಕಂ, ಮಿಕ್ಕರ್; ಪೊಕ್ಕಂ, ಪೊಕ್ಕರ್; ನಕ್ಕಂ, ನಕ್ಕರ್.

ಉ‖ ಮಿಕ್ಕರನೇಕೆ ಮನ್ನಿಸುವರಕ್ಕರವೋದದ ಕಲ್ಲಪಾಪೆಗಳ್ ।

ಕಂ‖ ರಕ್ಕಸಿಯ ಮಾಡಮುಪಱಿಯೊಳ್ ।
ಪೊಕ್ಕವರುೞಿವರೆ ಸರಸ್ವತೀಮಣಿಹಾರಾ ‖

ಚಕಾರಕ್ಕೆ—ಎಚ್ಚಂ, ಎಚ್ಚರ್; ಬೆಚ್ಚಂ, ಬೆಚ್ಚರ್; ಪಚ್ಚಂ, ಪಚ್ಚರ್. ಮಣಿಯದೆ ಮಣಿದಿದಿರನದಿರೆ ಕೂಡಿಱಿದೆಚ್ಚರ್. ಮಿೞ್ತುಗೆ ಮಾರಿಗೆ ಪಚ್ಚರ್. ಬೆಚ್ಚಾಡಿ ಘಾಯದಿಂ ಹಯಬಲಮುಂ.

..........................................................................................

**ಟೀಕೆ.**—ನಿಱುತಂ=ನಿಶ್ಚಯವಾಗಿ, ಕ ಚ ಟ ತ ಪಂಗಳ=ಕಕಾರ ಚಕಾರ ಟಕಾರ ತಕಾರ ಪಕಾರಂಗಳ, ಪರದ=ಮುಂದಣ, ದಕಾರಕ್ಕೆ, ಪೂರ್ವರೂಪಂ=ಮೊದಲಕ್ಷರದ ರೂಪು, ಅದು, ಅಕ್ಕುಂ=ಆಗುವುದು; ಪರವರ್ಣಂ= ಕ ಚ ಟ ತ ಪಂಗಳಲ್ಲದ ಅನ್ಯವರ್ಣಂ, ಧಾತ್ವಂತ್ಯದೊಳ್=ಧಾತುಗಳ ಕಡೆಯಲ್ಲಿ, ಇರೆ, ಡತ್ವಂ, ಮೇಣ್=ಅದಲ್ಲದೆ, ತಕಾರಂ, ಒರ್ಮೆ=ಒಂದುಬಾರಿ, ಆಕಾರಂ, ಆಗುವುದು. ‖೨೪೧‖

* ವಿಚಾರಂ.—ಉಣ್ ಕಾಣ್—ಎಂಬ ಣಕಾರದ, ಕೊಳ್‌ಧಾತುವಿನ ಣಕಾರದ, ಮುಂದೆ ದತ್ವಂ ಡಕಾರವಾಗುವುದು.

ಶಬ್ದಾನುಶಾಸನದಲ್ಲಿ ಸೂತ್ರಂ— ‖ ಕವಲಾದಿಭ್ಯಸ್ತಃ ‖೫೦೭‖ ಕವಲಾದಿಭ್ಯೋ ಧಾತುಭ್ಯಃ ಪರಸ್ಯ ದಕಾರಸ್ಯ ತಕಾರಾದೇಶೋ ಭವತಿ—ಎಂದುದಾಗಿ, ಕವಲಾದಿ ಧಾತುಗಳತ್ತಣಿಂ ಪರದ ದಕಾರಕ್ಕೆ ತಕಾರಾದೇಶವಪ್ಪುದು. ಕವಲ್, ಮಡಲ್, ಬಲ್, ಕಲ್, ಪೋಲ್, ಸಾಲ್, ಸೋಲ್, ಪೇಲ್, ನೋಲ್, ಕೂರ್, ಕಸರ್, ಕನರ್, ಕೊನರ್, ತಳಿರ್, ಬೆಳರ್, ಚಿಗುರ್, ಬೆಮರ್, ಅಟ್, ಉಟ್, ಕೀಟ್, ಚಳಿ, ಮೊಳೆ, ಆೞಿ, ಆಱು, ಮುೞಿ, ಕುಱು, ಬಾ, ಕೀ, ಪೂ, ಬೀ, ಓ, ಕೂನ್, ಸೀನ್, ಪೇನ್, ಆನ್, ನೋನ್, ಈನ್—ಎಂಬಿವು ಕವಲಾದ್ಯಾಕೃತಿಗಣಂ. ಇವಱಲ್ಲಿ ಆಱು, ಮೞಿ, ಬೆಮರ್, ಬೆಳರ್, ಕೀಟ್ ಎಂಬಿವಾದಿಯಾದುವರ್ಕೆ ವಿಕಲ್ಪದಿಂ ತಕಾರಮಪ್ಪುದಾಗಿ, ಇವು ಪ್ರಯೋಗಂಗಳಿಂದಱಿವುದು.

ಟಕಾರಕ್ಕೆ— ತೊಟ್ಟಂ, ತೊಟ್ಟರ್; ಕೊಟ್ಟಂ, ಕೊಟ್ಟರ್; ಬಿಟ್ಟಂ, ಬಿಟ್ಟರ್; ನಟ್ಟಂ, ನಟ್ಟರ್. ಬೆಕ್ಕಸಂಬಟ್ಟು ಬಾಯಂ ಬಿಟ್ಟರ್ ಭೀಷ್ಮರ್. ತೊಟ್ಟಂ ಸಂಮೋಹನಮುನಭಯಂ ಪಾಂಡವಂ.

ತಕಾರಕ್ಕೆ—ಪೆತ್ತಂ, ಪೆತ್ತರ್; ಕೆತ್ತಂ, ಕೆತ್ತರ್; ತೆತ್ತಂ, ತೆತ್ತರ್; ಗೆತ್ತಂ, ಗೆತ್ತರ್; ಪೊತ್ತಂ, ಪೊತ್ತರ್. ಮುಗಿಲಂ ಮಾಜಾನೆಗೆತ್ತರ್.

ಪಕಾರಕ್ಕೆ—ತಪ್ಪಂ, ತಪ್ಪರ್. ತಪ್ಪಂ ತನ್ನೊಳ್ ಪಳಂಚಿ ಕಿಡಿಗುಟ್ಟಿ ತಪ್ಪುವಂಬುಗಳನವಂ.

ಡಕಾರಕ್ಕೆ—ಉಣ್ಡಂ, ಕಣ್ಡಂ, ಕೊಣ್ಡಂ. ಮರದ ಹರಿಯಣದೊಳುಣ್ಡಂ. ಮರದೊಳ್ ಸಮೆಪಂಕವಣಿಯನೇಱಿದಂ. ಕುರುಪ್ರಭು ಕಣ್ಡಂ ಶರಜಾಲ ಜರ್ಜರಿತ ಗಾತ್ರತ್ರಾಣನಂ ದ್ರೋಣನಂ. ಭುವನತ್ರಿಣೇತ್ರ ರುಚಿಯಂ ಕೈಕೊಣ್ಡನಾ ಪಾಂಡವಂ.

ದಕಾರಕ್ಕಾದ ತಕಾರಕ್ಕೆ—ಸೋಲ್ತಂ, ಪೋಲ್ತಂ, ನಿಲ್ತಂ, ಕಿೞ್ತಂ, ಉೞ್ತಂ. ಮಾಲವ ದೇಶಮಂ ಕಿಡಿಸಿ ತದ್ಧಾರಾಪುರ ಸ್ತ್ರೀಯರಂ ತೊೞ್ತಿರ್ಮಾಡಿದಂ. ಕಾದದಿರ್ದಂದು ಸೋಲ್ತಂ ಕೌಂತೇಯಂ ಕೌರವಂಗೆಂದುಲಿಗುಂ. ಮಱಸೋಂದಿದ ಪುಲಿಯನಾಗಳಿನಿಸಂ ಪೋಲ್ತಂ. ನೋೞ್ಪಿಕೊಂಡು ಬೆನ್ನೊಳ್ ನಿಲ್ತಂ ಗಾಂಡೀವಿ.

ಅಕಾರಕ್ಕೆ—[1] ಬೆರಂಟಂ. ಬೆರಂಟುವು ಪೂಕ್ಕುಟಿನುಗುರಿಸಿದುವು ತುಱುಂಬ.

ಮೇಣೆಂಬುದಱಿಂ ಕೆಲವಱೊಳಿರ್ದಂತೆ ದಕಾರಮೆ—ಪೂಣ್ದಂ, ಮಾಣ್ದಂ, ಜೋಲ್ದಂ, ಎೞ್ದಂ, ನೇಲ್ದಂ, ಅೞ್ದಂ, ಬಿೞ್ದಂ, ಆರ್ದಂ, ನೇರ್ದಂ. ಬಾದುಂಟೆಂದು ಹತ್ತನೆಯ ತಲೆಯುಮಂ ನೇರ್ದಾಗಳ್.

**ಸೂತ್ರಂ** ॥ ನೆಗೞ್ಗಂ ಲೋಪಂ ಪೋಗಾ ।
ಗುಗಳ ಗಕಾರಕ್ಕೆ ದದಪಮಿರೆಯುಂ ದತ್ವ ॥
ಕ್ಕೊಗೆದಸ್ವರಯತ್ವಂ ಪ ।
ತ್ತುಗೆಗೊಂಡುದುಗಾದ ತುತ್ವದೊಳ್ ನೆಲಸಿರೆಯುಂ ॥ ೨೪೨ ॥

---

**ಟೀಕೆ.**—ದದಪಂ=ದದಪಕಾರಂ; ಇರೆಯುಂ=ಪರದಲ್ಲಿ ಇರ್ದೊಡೆಯುಂ, ಪತ್ವಕ್ಕೆ=ಭೂತಕಾಲದ ದಕಾರಕ್ಕೆ, ಅಸ್ವರಯತ್ವಂ=ವ್ಯಂಜನದ ಯಕಾರಂ, ಒಗೆದು=ಹುಟ್ಟಿ, ಉದುಗೆ=ನಪುಂಸಕಲಿಂಗದ ಉದು ಎಂಬುದರ್ಕೆ, ಆದ ತುತ್ವದೊಳ್=ಆದೇಶ

1. ಒಂದು ಸೂಚಿ, ದಕಾರಕ್ಕೆ ಟಕಾರಮುಕ್ಕುಂ.

**ವೃತ್ತಿ.**—ದ ದಪಂಗಳ್ ಪರವಾಗೆಯುಂ ಪೋಗು ಆಗು ಎಂಬಿವಱ ಗಕಾರಕ್ಕೆ ಲೋಪಂ; ಭೂತವತಿಯ ದಕಾರಕ್ಕೆ ವ್ಯಂಜನ ಯಕಾರಂ ಬಂದು ಉದುಗಾದ ತುಕಾರದೊಳ್ ಪೊರ್ದೆಯುಂ ಗಕಾರಕ್ಕೆ ಲೋಪಮಕ್ಕುಂ.

**ಪ್ರಯೋಗಂ.**—ಪೋದಂ, ಪೋದಪಂ; ಆದಂ, ಆದಪಂ; ಪೋದುದು, ಆದುದು; ಪೋಯ್ತು, ಆಯ್ತು. ಪೊಂಮಱುವೋಲ್ ಪೊಳೆದು ಪಾಱಿ ಪೋದಂ ಶ್ವೇತಂ. ಕೊಂಬಿಱಿಪಿದ ಮರದಿಂದಗ್ಗಳಂ ತಿಂಣಮಾದಂ. ಕೆಂದಳಿರ್ಗಿಸುಪ ಕೆಂಗಱಿಯಾದುದು, ಪೂದೊಡಂಬೆ ಪಿಳ್ಕಾದುದು, ಅಬ್ಜಿನಿ (?) ಪೋದುದು ನುಣ್ಣನಿ ನವಿಲ್ಗೆ ಶರದದ ಪುಗಿಲೊಳ್. ಭೀಷಣವಾಯ್ತು ಸೈನ್ಯಂ ಮಹಾರ್ಣವದಂತಾಯ್ತುಬ್ಬಿಯೆ ಘೂರ್ಣಿಸುವಂತಾಯ್ತುರಮುನೆಯೊಳಗೆ. ಬಗೆ ಪೋಯ್ತಾಗಳೆಲೆ ಇದಲ್ತೆ ತುಹಿನಕ್ಷ್ಮೋಣೀಧ್ರದುತ್ತುಂಗ ಸಾನುಗಳ್. ಪುಂಸ್ಕೋಕಿಲ ಧ್ವನಿ ತಾನಿರೆಲೆವೋಯ್ತು.

**ಸೂತ್ರಂ** ॥ ಪರದೊಳ್ ವಿಧಿಯ ಕೆಕಾರಂ ।
ಬರೆ ಕುಂ ಬರೆ ಪೋಗೆನಿಪ್ಪ ಧಾತುವಿನಂತ್ಯಾ ॥
ಕ್ಷರ ಲೋಪಂ ಚರಮಂ ವಿ ।
ಸ್ವರಮಾದ್ಯಂ ಹ್ರಸ್ವಮಕ್ಕುಮಾಗೆಂಬುದಱೊಳ್ ॥ ೨೪೩ ॥

**ವೃತ್ತಿ.**—ವಿಧಿಯ ಕೆಕಾರಮುಂ ಕುಂ ಎಂಬುದುಂ ಪರಮಾಗೆ ಪೋಗೆಂಬ ಗಕಾರಕ್ಕೆ ಲೋಪಂ; ಆಗೆಂಬುದಱ ಕಡೆಯ ಸ್ವರಕ್ಕೆ ಲೋಪಮುಂ ಮೊದಲ್ಗೆ ಹ್ರಸ್ವಮುಮಕ್ಕುಂ.

**ಪ್ರಯೋಗಂ.**—ಪೋಕೆ, ಪೋಕುಂ; ಅಕ್ಕೆ, ಅಕ್ಕುಂ. ಪೋಕೆ ಬರ್ಕೆ ಮುಳಿಸಿಲ್ಲೆಮಗಾತನೊಳ್ ಆವ ಪಾಂಗಿನಿಂ. ಪೊಱಮಾಱದೆ ಸಯ್ತೆ ಪೋಕುಮಾ ಪರಸೈನ್ಯಂ. ವೇದದೊಳೊಂದಿದಾಯು ನಿನಗಕ್ಕೆ ಸೊಗಂ ಕಲಿಕಾಲ ಸೂದನಾ. ಪ್ರಾಯಂ ಕೂಸಾದೊಡಭಿಪ್ರಾಯಂ ಕೂಸಕ್ಕುಮೆ.

..........................................................................................................

ವಾದ ತುಕಾರದಲ್ಲಿ, ಪತ್ತುಗೆಗೊಂಡು= ಪೊರ್ದುಗೆಯಾಗಿ, ನೆಲಸಿರೆಯುಂ, ಪೋಗಾಗುಗಳ=ಪೋಗು ಆಗು ಎಂಬ ಧಾತುಗಳ, ಗಕಾರಕ್ಕೆ, ಲೋಪಂ, ನೆಗೞ್ಗುಂ=ಬರ್ಪುದು. ॥ ೨೪೨ ॥

**ಟೀಕೆ.**—ಪರಪೊಳ್, ವಿಧಿಯ= ವಿಧ್ಯರ್ಥದ, ಕೆಕಾರಂ, ಬರೆ, ಕುಂ, ಬರೆ, ಪೋಗೆನಿಪ್ಪ ಧಾತುವಿನ, ಅಂತ್ಯಾಕ್ಷರಲೋಪಂ=ಕಡೆಯಕ್ಷರದ ಲೋಪಂ, ಆಗುವುದು; ಆಗೆಂಬುದಱೊಳ್= ಆಗು ಎಂಬ ಧಾತುವಿನಲ್ಲಿ, ಚರಮಂ=ಅಂತ್ಯಂ, ವಿಸ್ವರಂ= ವ್ಯಂಜನದ ಕಕಾರಂ, ಆದ್ಯಂ=ಮೊದಲಕ್ಷರಂ, ಹ್ರಸ್ವಂ, ಅಕ್ಕುಂ=ಆಗುವುದು. ॥ ೨೪೩ ॥

ಸೂತ್ರಂ ॥ ಅವತರಿಸಿರ್ಕುಮದುಳ್ಧಾ ।
ತುವಿನ ಳಕಾರಕ್ಕೆ ಣತ್ವಮುದುಗೆ ಟುಕಾರಂ ॥
ಪ್ರವಿಲೋಮಕ್ರಿಯೆಗದುವೆಂ ।
ದವೆಂದು ಬಂದಿರ್ಕುಮುದುಗಮುವುಗಂ ಪ್ರಚುರಂ ॥ ೨೪೪ ॥

ವೃತ್ತಿ.—ಉಳ್ ಎಂಬ ಧಾತುವಿನ ಳಕಾರಕ್ಕೆ ಣತ್ವಮುಂ ಅಲ್ಲಿ ಪರದ ಉದುವಿಂಗೆ ಟುಕಾರಾದೇಶಮುಮಕ್ಕುಂ. ನಪುಂಸಕಲಿಂಗದ ಉದುಗಮುವುಗಂ ಪ್ರತಿಷೇಧ ಕ್ರಿಯೆಯೊಳದುವೆಂದುಮವುವೆಂದುಂ ಆದೇಶಮಕ್ಕುಂ.

ಪ್ರಯೋಗಂ.—ಉಳ್ಳುದೆಂಬುದರ್ಕೆ—ಉಣ್ಟು. ಉಣ್ಟು ಭುಜಬಲಂ ಪಿರಿದು ಚಾಗದ ಮೆಯ್; ಈ ಸಿರಿಯುಂಟು ಮಾಡಿದಂ ಕುರುಬಲದೊಳ್.

ಪ್ರತಿಷೇಧ ಕ್ರಿಯೆಗೆ—ಉಱಿಯದು ವಿಭವಂ, ಜವ್ವನಮಿಱಿಯದು, ನವ ವಿಧ ರತೋಪಚಾರದಿನೆಂದುಂ ಪಱಿಸದು ಬೇಟಂ. ವಿಪುಳ ಕಳಾಪ ಕೋಪ ಶಿಖಿ ಪುಟ್ಟದು. ಸಲ್ಲವು, ಗೆಲ್ಲವು, ನಿಲ್ಲವು, ನೆಱೆಯವು. ಗಿರಿಯುಂ ಕರಿಯುಂ ನಿಲ್ಲವು ಪವಿಮುಖದ ಕೋಟ್ಗಿಮಾತನ ಬಾಳ್ಗಂ. ತುಱುಗಳ ಮೆಯ್ಗಳ ರೋಮಂ ನೆಱೆಯವು ದಲ್.

ಸೂತ್ರಂ ॥ ಣತ್ವಂ ಕೊಳ್ಧಾತ್ವಂತ್ಯ ।
ಕ್ಕುತ್ವಕ್ಕುಳ್ಧಾತು ಪೂರ್ವದೊಳ್ ನೆಗಟ್ಗುಂ ಹ್ರ ॥
ಸ್ವೋತ್ವಂ ಪುರುಷತ್ರಯದೊಳ್ ।
ದತ್ವನಿಷೇಧಂ ಬಹುತ್ವದುವುಗವುಮಕ್ಕುಂ ॥ ೨೪೫ ॥

---

ಟೀಕೆ.—ಉಳ್ಧಾತುವಿನ=' ಉಳ್ ಸತ್ತಾಯಾಂ, ' ಎಂಬ ಸತ್ತಾರ್ಥದ ಧಾತುವಿನ, ಳಕಾರಕ್ಕೆ, ಣತ್ವಂ, ಅದು, ಉದುಗೆ=ನಪುಂಸಕ ಲಿಂಗದ ಉದು ಎಂಬುದರ್ಕೆ, ಟುಕಾರಂ, ಅವತರಿಸಿರ್ಕುಂ=ಹುಟ್ಟಿರ್ಪುದು; ಪ್ರವಿಲೋಮಕ್ರಿಯೆಗೆ=ಪ್ರತಿಷೇಧಕ್ರಿಯೆಗೆ, ಉದುಗಂ=ನಪುಂಸಕಲಿಂಗದ ಉದುವೆಂಬುದರ್ಕಂ, ಉವುಗಂ=ಉವು ಎಂಬುದರ್ಕಂ, ಅದು ಎಂದು, ಅವು ಎಂದು, ಪ್ರಚುರಂ=ಪ್ರಸಿದ್ಧವಾಗಿ, ಬಂದಿರ್ಕುಂ. ॥ ೨೪೪ ॥

ಟೀಕೆ.—ದ ಡಪಂಗಳ್ಪರಮಾದ ಎಂಬುದನುವರ್ತನೆ—ಕೊಳ್ಧಾತ್ವಂತ್ಯಕ್ಕೆ=ದ ಡಪಂಗಳ್ಪರಮಾದ ಕೊಳೆಂಬ ಧಾತುವಿನಂತ್ಯಕ್ಕೆ, ಣತ್ವಂ = ಣಕಾರಾದೇಶಂ, ನೆಗಟ್ಗುಂ=ಪ್ರಸಿದ್ಧಿವಡೆವುದು; ಉಳ್ಧಾತು ಪೂರ್ವದೊಳ್=ಸತ್ತಾರ್ಥದಲ್ಲಿ ಉಳ್ ಎಂಬ ಧಾತುವಿನ ಮೊದಲಲ್ಲಿ, ಉತ್ವಕ್ಕೆ, ಹ್ರಸ್ವೋತ್ವಂ=ಹ್ರಸ್ವದ ಒಕಾರಂ ಪ್ರಸಿದ್ಧಿವಡೆವುದು; ಪುರುಷತ್ರಯದೊಳ್, ದತ್ವನಿಷೇಧಂ=ಭೂತಕಾಲದ ದಕಾರಂ ಬಾರದು; ಬಹುತ್ವದ=ನಪುಂಸಕಲಿಂಗದ ಬಹುವಚನದ, ಉವುಗೆ=ಉವು ಎಂಬುದರ್ಕೆ, ಅವು ಎಂಬುದುಂ, ಅಕ್ಕುಂ. ॥ ೨೪೫ ॥

ವೃತ್ತಿ.—ದಕಾರಂ ಪರಮಾದ ಕೊಳ್ಧಾತುವಿನ ಳಕಾರಕ್ಕೆ ಣತ್ವಮಕ್ಕುಂ. ಪುರುಷತ್ರಯದೊಳ್ ಉಳ್ಧಾತುವಿನ ಮೊದಲುಕಾರಕ್ಕೆ ಹ್ರಸ್ವೋತ್ವಮಕ್ಕುಂ; ನಪುಂಸಕಲಿಂಗದ ಬಹುವಚನದುವುವಿಂಗೆ ಅವು ಎಂದಕ್ಕುಂ. *

ಪ್ರಯೋಗಂ.—ಕೊಳ್ಧಾತುಗೆ—ಕೊಣ್ಡಂ, ಕೊಣ್ಡರ್. ಭುವನತ್ರಿಣೇತ್ರ ರುಚಿಯಂ ಕೈಕೊಂಡನಾ ಪಾಂಡವಂ. ತಮತಮಗೆ ಭಯಂಗೊಣ್ಡರಾಶಂಕೆ ಗೊಣ್ಡರ್.

ಉಳ್ಧಾತುಗೆ—ಒಳಂ, ಒಳರ್; ಒಳಯ್, ಒಳಿರ್; ಒಳೆನ್, ಒಳೆವು. ಪೇಟಿನಿತರ್ಕವೊಳಂ ಮುರಾಂತಕಂ ಒಳರನ್ನೆವರಂ ಮಾರ್ಬಲದೊಳಗಿಱ ಯಲ್ ಮಱುಗುವತಿಭಟರ್.

ನಪುಂಸಕಕ್ಕೆ—ಒಳವು.

ಕಂ ॥ ನೀನುಳ್ಳೊಡುಂಟು ರಾಜ್ಯಂ ।
ನೀನುಳ್ಳೊಡೆ ಪಟ್ಟಮುಂಟು ಪೀಱುಗೆಯುಂಟು ॥
ನೀನುಳ್ಳೊಡುಂಟು ಬೆಳ್ಗೊಡೆ ।
ನೀನಿಲ್ಲದಿವೆಲ್ಲಮೊಳವೆ ಭಾನುತನೂಜಾ ॥

ನುಂಗುವುವುವೊಳವುದಧಿಯೊಳೆ ಮಹಾಮತ್ಸ್ಯಂಗಳ್.

ಉಣ್ಬೆಂಬುದರ್ಕೆ ಎಲ್ಲವಱಂತೆ ಪ್ರತಿಷೇಧಮಾಗಿಲ್ಲೆಂದಾಯ್ತು.

ಶಾ ॥ ನೀಲಗ್ರೀವರುಮಾರ್ತರಿಲ್ಲ ಗೆ[1]ಲವಿಂಗಾರಾರ್ಪರೆಂದಂ ಕೃಪಂ ॥

ಸೂತ್ರಂ ॥ ಇನೆಗಮುದುಮಂನಮಂನೆಗ ।
ಮಿನಮಲೊಡಂ ಸೊಂನೆವೆರಸು ಸತ್ಯರ್ಥದೆಕಾ ॥
ರ ನಿಜಸ್ಥಾನದೊಳಪ್ಪುವಿ ।
ವನುಕೂಲಂ ಮತ್ತೆಕಾರದಾದಿಯೊಳಲೊಡಂ ॥ ೨೪೬ ॥

........................................................................................................

ಟೀಕೆ.—ಸತ್ಯರ್ಥದ= ಸತಿಸಪ್ತಮಿಯರ್ಥದ, ಎಕಾರ ನಿಜಸ್ಥಾನದೊಳ್=ಎ ಕಾರದ ನಿಜಸ್ಥಾನದಲ್ಲಿ; ಇನೆಗಂ, ಉದುಂ, ಅಂನಂ, ಅಂನೆಗಂ, ಇನಂ, ಅಲೊ ಡಂ—ಎಂದು, ಇವು = ಈ ರೂಪಂಗಳ್, ಸೊನ್ನೆವೆರಸು = ಸೊನ್ನೆಗೂಡಿ, ಅಪ್ಪುವು= ಆದೇಶವಾಗುವುವು; ಮತ್ತೆ, ಎಕಾರದ= ಸತ್ಯರ್ಥದೆಕಾರದ, ಆದಿಯೊಳ್=ಮೊದಲಲ್ಲಿ, ಅಲೊಡಂ ಎಂದು, ಅನುಕೂಲಂ=ಹಿತವಪ್ಪುದು. ॥ ೨೪೬ ॥

* ವಿಚಾರಂ.—ದಪ್ಪನಿಷೇಧವೆಂದು ಉಪಲಕ್ಷಣವಾಗಿ ಉಳ್ಧಾತುಗೆ ದ ದಪ ವಕಾರಂಗಳ್ ಮೂಱುಂ ನಿಷೇಧವೆಂಬುದರ್ಥಂ; ಭೂತಕಾಲವಾಗಿಯೆ ಸಲ್ವುದು.

1. ಗೆಲಲಿನ್ನಾರಾರ್ಪರೆಂದಂ ಕೃಪಂ.

ವೃತ್ತಿ.—ಇನೆಗಂ ಉದುಂ ಅಂನಂ ಅಂನೆಗಂ ಇನಂ ಅಲೊಡಂ ಎಂಬಿವು ಸೊಂನೆವೆರಸಲ್ಲದಿರವು; ಇವು ಸತಿಸಪ್ತಮಿಯ ಎಕಾರಕ್ಕಾದೇಶಮಾಗಿ ಬಂದುವು; ಎಕಾರದ ಪೆಱಗೆ ಒರ್ವೆ ಅಲೊಡಮೆಂಬುದೊಂದಾಗಮುಮಾಗಿ ಯುಂ ಬರ್ಕುಂ.

ಪ್ರಯೋಗಂ.—ಸತಿಸಪ್ತಮಿಯ ಎಕಾರಕ್ಕೆ—ನುಡಿಯೆ, ಪೊರ್ದೆ. ನೆಲ ನದಿರೆ, ನೋಟಕರ ಕಣ್ಣಲಸೆ, ಮನಂಗೊರಗೆ.

ಎಕಾರದ ಆದೇಶಂಗಳೊಳ್ ಇನೆಗಮೆಂಬುದರ್ಕೆ— ಕಾಮುಕರಂ ಕರ ಮಡಂಗಿ ನುರ್ಗಪ್ಪಿನೆಗಂ ಕಾಮದನಡಂಗೆವೊಯ್ದಂ.

ಉದುಮೆಂಬುದರ್ಕೆ — ಬರವೇಟಿಂಬುದುಂ ಅಂಜನಾಚಲದವೊಲ್ ಕಣ್ಗೊಪ್ಪಿ ಬರ್ಪಂಬುಜೋದರನಂ.

ಅಂನಮೆಂಬುದರ್ಕೆ—ಉದ್ದವಿರ್ದಂ ನೆಗೆಪಂನಂ ಪೊಯ್ಯಲೆಂದವ್ವಳಿಪುದು.

ಅಂನೆಗಂ ಇನಮೆಂಬುದರ್ಕೆ—ಓಲೆಯೊಡನೆ ಮುತ್ತುಂಗಾಲೊಳ್ [1]ನರೆ ಬರ್ಪಂನೆಗಮಿರು. ಗಂಗೆಯ ಮಡುಗಳನಡಹಡಿಸಿ ಪುಗುವಿನಂ ಭಯವಶದಿಂ.

ಅಲೊಡಮೆಂಬುದರ್ಕೆ—ಕುರುಕುಲಾಧಿಪಂ ನುಡಿಯಲೊಡಂ.

ಎಕಾರದ ಪೆಱಗೆ ಅಲೊಡಮಾಗಮುಕ್ಕೆ—ಬರಲೊಡನೆ ಕೊಟ್ಟಂ.

ಸೂತ್ರಂ ॥ ನೆಗಟ್ಗುಂ ಸಂಪ್ರತಿಗಂ ಭಾ ।
ವಿಗಮುಂನೆಗಮುಂನಮಿನೆಗಮಿನಮೆಂಬಿವು ಸೂ ॥
ರಿಗಳಿಂದುದುಮಲೊಡಂಗಳ್ ।
ನೆಗಟ್ಗುಂ ಭೂತಾರ್ಥದಲ್ಲಿ ಸತಿಸಪ್ತಮಿಯೊಳ್ ॥ ೨೪೭ ॥

ವೃತ್ತಿ.—ಅಂನೆಗಂ, ಅಂನಂ, ಇನೆಗಂ, ಇನಂ ಎಂಬಿವು ವರ್ತಮಾನ ದೊಳಂ ಭವಿಷ್ಯಂತಿಯೊಳಂ ವರ್ತಿಪುವು; ಉದುಂ, ಅಲೊಡಂ ಎಂಬಿವು ಭೂತವತಿಯೊಳ್ ಸಲ್ಗುಂ.

..................................................................................................................

ಟೀಕೆ.—ಸೂರಿಗಳಿಂದೆ=ವಿದ್ವಾಂಸರಿಂದೆ, ಸತಿಸಪ್ತಮಿಯೊಳ್, ಸಂಪ್ರತಿಗಂ= ವರ್ತಮಾನಕಾಲಕ್ಕಂ, ಭಾವಿಗಂ=ಭವಿಷ್ಯತ್ಕಾಲಕ್ಕಂ, ಅಂನೆಗಂ, ಅಂನಂ, ಇನೆಗಂ, ಇನಂ, ಎಂಬಿವು=ಎಂಬೀ ರೂಪಂಗಳ್, ನೆಗಟ್ಗಂ=ಬರ್ಪುವು; ಭೂತಾರ್ಥದಲ್ಲಿ, ಉದು ಮಲೊಡಂಗಳ್=ಉದುಂ ಅಲೊಡಂ ಎಂಬಿವು, ನೆಗಟ್ಗಂ=ಬರ್ಪುವು. ॥ ೨೪೭ ॥

1. ನೆರದಪ್ಪುನ್ನೆಗಂ, ನೇಿರಂಬರ್ಪ್ಪುಂನೆಗಂ ಕ. ಖ.

ಪ್ರಯೋಗಂ.—ಸಂಪ್ರತಿಗೆ—ನೆನೆವಂನೆಗಂ ಬಂದಂ. ಕೊಲ್ವಂನಂ ಇಕ್ಕೆ ಕೊಂದಂ ಬಿಂನೈಸುವಿನೆಗಂ ಎಡೆಗೊಂಡಂ ಇದಿರ್ವಪ್ಪಿನಂ ಅಪ್ಪಿಕೊಂಡಂ.

ಭವಿಷ್ಯಂತಿಗೆ — ಈವಂನೆಗಮಿರ್ದಂ. ವರಂಬಡೆವಂನಮಾರಾಧಿಸಿದಂ. ಅವಧಿ ಬರ್ಪಿನೆಗಂ ಸೈರಿಸಿದಂ. ಬೆಳಗಪ್ಪಿನಂ ಕೇಳಿಸಿದಂ.

ಭೂತವತಿಗೆ—ಓಲಗಂ ಪರಿವುದುಮಾಲೋಚನೆಗೆ ಪೊಕ್ಕಂ. ಪಾವಸೆ ಕಿಡಲೊಡಂ ನೀರ್ತಿಳಿದುದು. ಇವು ಸತಿಸಪ್ತಮಿಯ ಪ್ರಯೋಗಂಗಳ್.

ಸೂತ್ರಂ ॥ ಅಂನೆಗಮಿಂನೆಗ ಮೆಂನೆಗ ।
ಮೆಂನದೆ ಕಡೆಗುಂಟು ಲೋಪಮಿದಿರೊಳ್ ಸೀಮೋ ॥
ತ್ಪಂನಂ ವರಂ ವರೆಗಮಿರೆ ।
ಕೆಂನಂ ಪೆಜವರ್ಕೆ ಲೋಪವಿಧಿ ಮುಟ್ಟೆನೆಯುಂ ॥ ೨೪೮ ॥

ವೃತ್ತಿ.—ವರಂ ವರೆಗಮೆಂಬ ಸೀಮಾರ್ಥಶಬ್ದಂ ಪರದೊಳಿರೆ ಅಂನೆಗಂ ಇಂನೆಗಂ ಎಂನೆಗಂ ಎಂಬಿವಜ ಗಕಾರಕ್ಕೆ ಲೋಪಂ; ವರಂ ವರೆಗಮೆಂಬಿವು ಪರ ದೊಳಿರ್ದೊಡಂ ಮಿಕ್ಕಲ್ಲಿ ಲೋಪಮಿಲ್ಲ; ಮುಟ್ಟೆ ಎಂಬುದುಂ ಸೀಮಾರ್ಥಮಂ ಪೇಟ್ಗುಂ.

ಪ್ರಯೋಗಂ.—ಎಂನೆವರಂ ಸಿರಿ ತಮಗುಂಟಂನೆವರಂ ಸೇವ್ಯರಲ್ತೆ ಖಳರುಂ. ಇಂನೆವರಂ ಗುಜಿಯಾದುದಿಲ್ಲ ಕಾಮ ಕರ ವಿಮುಕ್ತ ಬಾಣಹತಿಗೆ.

ಮುಟ್ಟೆಂಬುದರ್ಕೆ—ದೆಸೆಮುಟ್ಟೆ, ವಾರ್ಧಿಮುಟ್ಟೆ, ಅಂತಮುಟ್ಟೆ. ಆನಜಿ ಯೆನಾತಂಮುಟ್ಟೆ ಸಂಗ್ರಾಮಮುಂ.

ಸೂತ್ರಂ ॥ ವಿದಿತೋಭಯ ಕರ್ತೃಕಮೆನಿ ।
ಸಿದ ಸತಿಸಪ್ತಮಿಗೆಕಾರಮಪ್ಪುದದರ್ಕಂ ॥
ಜದೆ ಕೆಲರಲ್ಲಂ ಪೇಟ್ವರ್ ।
ಚದುರರದಂ ಮೆಚ್ಚರಲೊಡಮೆಂದೊಡೆ ಶುದ್ಧಂ ॥ ೨೪೯ ॥

---

ಟೀಕೆ.—ಇದಿರೊಳ್=ಪರದಲ್ಲಿ, ಸೀಮಾ=ಎಲ್ಲೆಯಲ್ಲಿ, ಉತ್ಪನ್ನಂ=ಹುಟ್ಟಿದು ವಾದ, ವರಂ, ವರೆಗಂ, ಇರೆ, ಅಂನೆಗಂ, ಇಂನೆಗಂ, ಎಂನೆಗಂ, ಎಂನದೆ, ಕಡೆಗೆ= ಅಂತ್ಯಕ್ಕೆ, ಲೋಪಂ, ಉಂಟು; ಮುಟ್ಟೆ ಎನೆಯುಂ, ಕೆಂನಂ=ವೆಗ್ಗಳವಾಗಿ, ಪೆಜವರ್ಕೆ= ಅನ್ಯವಾದುವರ್ಕೆ, ಲೋಪವಿಧಿ ಬರ್ಪುದು. ॥ ೨೪೮ ॥

ಟೀಕೆ.—ವಿದಿತ=ಪ್ರಸಿದ್ಧವಾದ, ಉಭಯಕರ್ತೃಕಂ=ಇರ್ವರ್ ಕರ್ತೃಗಳ ನುಳ್ಳುದು, ಎನಿಸಿದ ಸತಿಸಪ್ತಮಿಗೆ, ಎಕಾರಂ ಅಪ್ಪುದು; ಅದರ್ಕೆ=ಆ ಎಕಾರಕ್ಕೆ,

**ವೃತ್ತಿ.**— ಇರ್ಬರ್ಕರ್ತೃಗಳ್ಗೆ ನಿಮಿತ್ತಮಪ್ಪ ಸತಿಸಪ್ತಮಿಗೆ ಎಕಾರಮಕ್ಕುಂ; ಆ ಎಕಾರಕ್ಕೆ ಅಲುವಂ ಕೆಲರ್ ಅಂಜದೆ ಪೇೞ್ವರ್; ಅದುವುಮಾಗದು; ಅಲೊಡಮೆಂದೊಡೆಶುದ್ಧಂ.

**ಪ್ರಯೋಗಂ.**—ಗಾಯಕಂ ಪಾಡೆ ದೇವಂ ಮೆಚ್ಚಿದಂ. ಪಾತ್ರವಾಡೆ ವಾದಕಂ ಬಾಜಿಸಿದಂ. ವಂದಿ ಪೊಗೞೆ ಚಾಗಿ ಕೊಟ್ಟಂ.

ಅಲ್ಗೆ— ಪಾದಪದ್ಮಂಗಳನೊತ್ತುತ್ತಿರಲ್ ಶೂದ್ರಕನೃಪತಿ ಸುಖಾಸೀನನಾಗಿರ್ದನಾಗಳ್. ಬಯ್ಗಿನ ಕೆಂಬಿಸಿಲೆಳಸಲೆಸೆದುವಾಶ್ರಮ ತರುಗಳ್—ಎಂಬಿವು ಅಬದ್ಧಂಗಳ್.

ಅಲೊಡಮೆಂಬುದಱ ಶುದ್ಧಕ್ಕೆ— ವಸಂತಂ ಬರಲೊಡಂ ಕೋಗಿಲೆ ಯುಲಿಗುಂ. ಗಾಳಿ ಬೀಸಲೊಡನೆ ಎಲೆ ಕಱಲ್ದುವು.

ಸೂತ್ರಂ ॥ ಪಿರಿದುಂ ಪಕ್ಷಾಂತರಮುಂ ।
ನಿರವಿಪೆಕಾರಂ ನಿಜಾಂತಮಾದೊಡೆಶಬ್ದಂ ॥
ಪರಿಕಿಸೆ ಧಾತ್ವಂತ್ಯದೊಳಾ ।
ವರಿಸಿರ್ಕುಂ ಲಿಂಗ ವಚನ ಪುರುಷಾಯತ್ತಂ ॥ ೨೫೦ ॥

**ವೃತ್ತಿ.**—ಪಕ್ಷಾರ್ಥಮಂ ಪೇೞ್ವೆಕಾರಂ ಕಡೆಯಾಗುಳ್ಳೊಡೆಶಬ್ದಂ ಲಿಂಗತ್ರಯ ವಚನತ್ರಯ ಪುರುಷತ್ರಯಾನ್ವಿತಮಾಗಿ ಧಾತುವಿನ ಕಡೆಯೊಳ್ಪತ್ತುಗುಂ.

**ಪ್ರಯೋಗಂ.**— ಲಿಂಗತ್ರಯಕ್ಕೆ — ನೋೞ್ಪೊಡವಳ್ ಕಿಱಿಯಳ್. ಸಮಂನುಡಿವೊಡವಂ ಪಿರಿಯಂ. ತೀಡುವೊಡಲ್ಲಿ ಕಂಪೆಲರ್ತೀಡುಗುಂ.

.................................................................

ಅಂಜದೆ=ಹೆದರದೆ, ಕೆಲರ್, ಅಲ್ವಂ=ಅಲ್ ಎಂಬುದಂ, ಪೇೞ್ವರ್, ಚದುರರ್=ಬಲ್ಲವರ್, ಅದಂ = ಆ ಪ್ರಯೋಗಮುಂ, ಮೆಚ್ಚರ್; ಅಲೊಡಂ = ಅಲೊಡಂ ಎಂದು, ಎಂದೊಡೆ=ಪೇೞ್ದೊಡೆ, ಶುದ್ಧಂ=ಶುದ್ಧವಪ್ಪದು. ॥ ೨೪೯ ॥

**ಟೀಕೆ.**—ಪಿರಿದುಂ=ವಿಶೇಷವಾಗಿ, ಪಕ್ಷಾಂತರಮುಂ=ಬೇರೆ ಪಕ್ಷಮುಂ, ನಿರವಿಪೆಕಾರಂ=ಪೇೞ್ವ ಎಕಾರಂ, ನಿಜಾಂತಂ=ತನ್ನಂತಂ, ಆದ, ಒಡೆ ಎಂಬ ಶಬ್ದಂ, ಪರಿಕಿಸೆ=ವಿಚಾರಿಸೆ, ಧಾತ್ವಂತ್ಯದೊಳ್=ಧಾತುಗಳಂತ್ಯದಲ್ಲಿ, ಲಿಂಗ=ಲಿಂಗತ್ರಯದಲ್ಲಿ, ವಚನ=ವಚನತ್ರಯದಲ್ಲಿ, ಪುರುಷ=ಪುರುಷತ್ರಯದಲ್ಲಿ, ಆಯತ್ತಂ=ಕೂಡಿದುದಾಗಿ, ಆವರಿಸಿರ್ಕುಂ=ಪೊರ್ದುಗೆಯಾಗಿರ್ಪುದು. ॥ ೨೫೦ ॥

ವಚನತ್ರಯಕ್ಕೆ—ಕಾದುವೊಡೊರ್ವನೆ ಬಲ್ಲಿದಂ. ಪೋಲಿಸುವೊಡಿರ್ವರುಂ ತಕ್ಕರ್. ನುಡಿವೊಡೆಲ್ಲರುಂ [1]ಮುಂತಱಿಯರ್.

ಪುರುಷತ್ರಯಕ್ಕೆ—ಪೊರ್ದುವೊಡವನೊಳ್ಳಿದಂ. ತಿರ್ದುವೊಡವರೊಳ್ಳಿದರ್. ಬೇಟಿಪ್ಪೊಡೆ ನೀನೊಳ್ಳಿದಯ್. ಈವೊಡೆ ನೀಮೊಳ್ಳಿದಿರ್. ಭಾವಿಪೊಡಾನೊಳ್ಳಿದೆಂ. ಸೇವಿಪೊಡಾವೊಳ್ಳಿದೆವು.

ಪಿರಿದೆಂಬುದಱಿಂ ಕಾಲತ್ರಯಕ್ಕೆ—ಪುಸಿದೊಡೆ ಬಿಟ್ಟಂ. ಪಳಂಚಿದಪೊಡೆ ಕೊಂದಪಂ. ಚಿತ್ರಿಪೊಡೆ ತೂಳಿಕೆಯುಂ ತರಿಸುವಂ.

ಸೂತ್ರಂ ॥ ಧಾತುಗಳವು ನಾನಾರ್ಥೋ ।
ಪೇತಂಗಳ್ ಲಕ್ಷ್ಯಸಿದ್ಧಿವಿಡಿದುವನಱಿದ ॥
ನ್ವಿತರೆ ಕ್ರಿಯಾನುಕೂಲಂ ।
ಮಾತೇಂ ಪೂರಿಸುಗೆ ಮತ್ತಮುೞಿದುವನಿದಱೊಳ್ ॥ ೨೫೧ ॥

ವೃತ್ತಿ.—ಧಾತುಗಳ್ ಪಲವರ್ಥಂಗಳಂ ನುಡಿಯಲ್ ಸಮರ್ಥಂಗಳಾಗಿ ರ್ಪುವು; ಪ್ರಮಾಣಪುರುಷರ ಮಾರ್ಗೋದಾಹರಣಂಗಳ ಬೞಿವಿಡಿದು ವಾಕ್ಯಾನ್ವಯಸಿದ್ಧಿಯುಳ್ಳರ್ ಕ್ರಿಯಾನುಕೂಲಮಾಗಿ ಮತ್ತಂ ಈ ಆಖ್ಯಾತಪ್ರಕರಣದೊಳ್ ತಿಳಿದು ಪೂರಿಸುಗೆ.

ಸೂತ್ರಂ ॥ ಕ್ರಿಯೆಯ ಪದಂ ತಾಂ ಕರ್ತೃ ।
ಪ್ರಯುಕ್ತ ಮಾಗೆಲ್ಲಿಯೇನದೆಂಬಿಚ್ಛೆಯನಾ ॥
ಶ್ರಯಿಪುದು ಸಕರ್ಮಕಮುದಲ್ ।
ಪ್ರಯುಕ್ತ ಪಡುಧಾತು ಸರ್ವಧಾತುಗೆಯಕ್ಕುಂ ॥ * ॥

---

ಟೀಕೆ.—ಧಾತುಗಳ್, ಅವು, ನಾನಾರ್ಥೋಪೇತಂಗಳ್=ನಾನಾರ್ಥದೊಡನೆ ಕೂಡಲ್ಪಟ್ಟವು; ಲಕ್ಷ್ಯಸಿದ್ಧಿ ವಿಡಿದುವಂ=ಉದಾಹರಣೆಗಳಲ್ಲಿ ಸಿದ್ಧಿವಡೆದುವಂ, ಅಱಿದು= ತಿಳಿದು, ಅನ್ವಿತರೆ=ಬಲ್ಲವರೆ, ಕ್ರಿಯಾನುಕೂಲಂ=ಕ್ರಿಯೆಗೆ ಅನುಕೂಲವಾಗಿ, ಮಾತೇಂ= ಹೇೞ್ವುದೇಂ, ಮತ್ತಂ=ಇನ್ನುಂ, ಉೞಿದುವಂ=ಉೞಿದ ಧಾತುಗಳಂ, ಇದಱೊಳ್= ಈ ಆಖ್ಯಾತಪ್ರಯೋಗದಲ್ಲಿ, ಪೂರಿಸುಗೆ=ಪೂರಣವಂ ಮಾಡುಗೆ. ॥ ೨೫೧ ॥

ಟೀಕೆ.—ಕ್ರಿಯೆಯ ಪದಂ = ಕ್ರಿಯಾಪದಂ, ತಾಂ, ಕರ್ತೃಪ್ರಯುಕ್ತಂ=ಪದದೊಡನೆ ಕೂಡಿದುದು, ಆಗಿ, ಎಲ್ಲಿ=ಆವೆಡೆಯಲ್ಲಿ, ಅದು, ಏನೆಂದು, ಎಂಬಿಚ್ಛೆಯುಂ=

1. ಮಾತಱಿಯರ್

* ಇದು ನಮಗೆ ದೊರೆತಿರುವ ಪ್ರತಿಗಳಲ್ಲಿ ಕಾಣಬರುವುದಿಲ್ಲ; ಕರ್ಣಾಟಕ ಶಬ್ದಾನುಶಾಸನವನ್ನು ನೋಡಿ ಈ ಸೂತ್ರವೃತ್ತಿ ಮೊದಲಾದುವನ್ನು ರಚಿಸಿದಂತೆ ತೋರುತ್ತದೆ.

**ವೃತ್ತಿ.**—ಕ್ರಿಯಾಪದಂ ಕರ್ತೃಪದದೊಡನೆ ಕೂಡಿದುದಾಗಿ ಎಲ್ಲಿ ಏನೆಂಬಪೇಕ್ಷೆಯಂ ಬಯಸುವುದು ಅದು ಸಕರ್ಮಕಮುಕ್ಕುಂ. ಅಲ್ಲಿ ಈ (ಪ್ರದಾನೇ) ಎಂಬುದಾದಿಯಾದ ಸಕಲಧಾತುಗಳ್ಗೆ ಅಲ್ ಎಂಬುದಱೊಡನೆ ಕೂಡಿದ ಪಡುಧಾತುವಕ್ಕುಂ; ಅಲ್ಲಿ ಮೊದಲ್ಗೊಟ್ಟು ತಾಂ ನೀನ್ ಆನೆಂಬ ಪುರುಷತ್ರಯಕ್ಕೆ ಏಕಾನೇಕವಚನದೊಳ್, 'ಅಮ್ ಅರ್ ಅಯ್ ಇರ್ ಎನ್ ಎವುಗಳಕ್ಕುಂ' ಎಂಬುದನುವರ್ತಿಸೆ ಪದಮುಕ್ಕುಂ.

**ಪ್ರಯೋಗಂ.**—ತಾನಿರಲ್ಪಟ್ಟಂ, ತಾಮಿರಲ್ಪಟ್ಟರ್; ನೀನಿರಲ್ಪಟ್ಟಯ್, ನೀಮಿರಲ್ಪಟ್ಟರ್; ಆನಿರಲ್ಪಟ್ಟೆಂ, ಆಮಿರಲ್ಪಟ್ಟೆವು—ಎಂಬಂತೆ ಎಲ್ಲಕ್ಕಂ ತಿಳಿವುದು.

ಶಬ್ದಾನುಶಾಸನದಲ್ಲಿ (ಸೂತ್ರಂ ೪೪೩) ॥ ಕರ್ಮಣಿ ॥ ಅನ್ಯಯುಷ್ಮದಸ್ಮದರ್ಥೇಷು ಪ್ರತ್ಯೇಕಂ ಏಕತ್ವಾನೇಕತ್ವಯೋಃ ವಿವಕ್ಷಿತಯೋಃ ಯಥಾಕ್ರಮಂ ಧಾತೋಃ ಅಮ್ ಅರ್ ಅಯ್ ಇರ್ ಎನ್ ಎವು ಏತೇ ಪ್ರತ್ಯಯಾ ಭವಂತಿ ಕರ್ಮಣಿ ಚಾಭಿಧೇಯೇ॥ ಇಲ್ಲಿ ಕರ್ಮಣಿ (ಎಂದು ಕರ್ಮದಲ್ಲಿ) ಎಂಬೀ ಸೂತ್ರಕ್ಕೆ ಅನುವರ್ತನೆ ಬಂದು, ತಾನ್ನೀನಾನೆಂಬರ್ಥಂಗಳಲ್ಲಿ ಬೇಱೆ ಬೇಱೆ ಏಕವಚನ ಬಹುವಚನಂಗಳ್ ವಿವಕ್ಷೆಯಾಗೆ ಯಥಾಕ್ರಮವಾಗಿ ಧಾತುಗೆ ಅಮ್ ಅರ್ ಅಯ್ ಇರ್ ಎನ್ ಎವು ಎಂಬೀ ಪ್ರತ್ಯಯಂಗಳ್ ಕರ್ಮದೊಳಮ್ ಅಕ್ಕುಂ:—ತಾನಿರಲ್ಪಟ್ಟಂ, ತಾಮಿರಲ್ಪಟ್ಟರ್, ನೀನಿರಲ್ಪಟ್ಟಯ್, (ಅದು ಇರೆಪಟ್ಟುದು)—ಎಂಬಂತೆಲ್ಲಕ್ಕಂ ಪತ್ತಿಸುಗುಂ. ಯೋಗವಿಭಾಗಮುತ್ತರಾರ್ಥಂ.

(ಸೂತ್ರಂ ೪೪೪) ॥ ಬೇಡ್ವಾದೇರಪ್ರಧಾನೇ ॥ ಅನ್ಯಾದ್ಯರ್ಥವಿವಕ್ಷಾಯಾಂ ಬೇಡು ಇತ್ಯೇವಮಾದಿಭ್ಯೋ ಧಾತುಭ್ಯಃ ಅಪ್ರಧಾನೇ ಕರ್ಮಣಿ ಅಮಾದಯೋ ಭವಂತಿ॥ ಎಂದುದಾಗಿ 'ಬೇಡ್ವಾದಿಗಪ್ರಧಾನದಲ್ಲಿ' ಎಂಬ ಸೂತ್ರಾರ್ಥಕ್ಕೆ ಅನ್ಯಾರ್ಥವಿವಕ್ಷೆಯಲ್ಲಿ ಬೇಡು ಎಂಬುದಾದಿಯಾದ ಧಾತುಗಳ್ಗೆ ಅಪ್ರಧಾನವಾದ ಕರ್ಮದಲ್ಲಿ ಅಮಾದಿಗಳಕ್ಕುಂ.

ಪ್ರಯೋಗಂ.—ಪಾರ್ವನಿನರಸಂ ಗ್ರಾಮಮಂ ಬೇಡಲ್ಪಟ್ಟಂ, ನೀಂ ಬೇಡಲ್ಪಟ್ಟಯ್, ಆಂ ಬೇಡಲ್ಪಟ್ಟೆಂ. ಇಂತು—ಗೋವಳನಿಂದೆ ಎರ್ಮೆ ಪಾಲಂ ಕಱೆಯಲ್ಪಟ್ಟುದು. ಉಪಾಧ್ಯಾಯಂ ಶಿಷ್ಯರಿಂ ತತ್ವಮಂ ಬೆಸಗೊಳಲ್ಪಟ್ಟಂ. ಬೇಹುಕಾಱನರಸನಿಂ ಸುದ್ದಿಯಂ ಕೇಳಲ್ಪಟ್ಟಂ; ಪಟ್ಟಳ್, ಪಟ್ಟುದು—ಎಂಬಂತೆ.

(ಸೂತ್ರಂ ೪೪೦) ॥ ಕರ್ಮಣ್ಯನು ಪಡುಃ ॥ ಧಾತೋಃ ಪಡುಧಾತುರನುಪ್ರಯುಜ್ಯತೇ ಕರ್ಮಣಿ ವಿಹಿತೇ ತಿಙಿ ಪರೇ॥ ಎಂದುದಾಗಿ ಧಾತುಗೆ ಕರ್ಮದಲ್ಲಿ ವಿಹಿತವಾದ ಅಮಾದಿಗಳ್ಪರಮಾಗೆ—ಪಡುಧಾತುವನುಪ್ರಯುಜ್ಯಮಾಪುದು.

---

ಎಂಬಪೇಕ್ಷೆಯಂ, ಆಶ್ರಯಿಪುದು=ಬಯಸುವುದು, ಅದು=ಆ ಪದಂ, ಸಕರ್ಮಕಂ= ಸಕರ್ಮಕ ಪ್ರಯೋಗಂ ಅಪ್ಪುದು; ಸರ್ವಧಾತುಗೆ=ಈ (ಪ್ರದಾನೇ) ಎಂಬುದಾದಿಯಾದ ಸಮಸ್ತ ಧಾತುಗಳ್ಗೆ, ಅಲ್ ಪ್ರಯುಕ್ತ ಪಡು ಧಾತು=ಅಲ್ ಎಂಬುದಱೊಡನೆ ಕೂಡಿದ ಪಡು ಎಂಬ ಧಾತು, ಅಕ್ಕುಂ=ಆಗುವುದು. ॥ * ॥

ಮಾಡಲ್ಪಟ್ಟುದು ಘಟಂ ಕುಂಭಜನಿಂ. ನೋಡಲ್ಪಟ್ಟನರಸನಂಗನೆಯಿಂ. ಬಯಸಲ್ಪಟ್ಟಳ್ತರುಣಿ ರಮಣನಿಂ. ಮಾಡಲ್ಪಡುಗೆಮಗೆ ಸಂಪದಂ ಜಿನಪತಿಯಿಂ. ಕಿಡಿಸಲ್ಪಡುಗೆಮ್ಮ ದುಃಖಸಂತತಿ ಜಿನನಿಂ.

ಕರ್ಮಣಿಪ್ರಯೋಗಮಲ್ಲದಿರೆ— ನೋಡಿದನರಸನಂಗನೆಯಂ. ರಮಣಂ ತರುಣಿಯಂ ಬಯಸಿದಂ. ಮಾಡಿದಂ ಪದಕಮನಕ್ಕಸಾಲೆ.

ಸೂತ್ರಂ(೫೩೨) ‖ ತಸ್ಮಿನ್ನೆದಲೌ ॥ ಧಾತೋಃ ಎಕಾರಃ ಅಲ್ ಭವತಃ ಪಡು ಧಾತೌ ಪರೇ—ಎಂದುದಾಗಿ ಧಾತುಗೆ ಪಡುಧಾತು ಪರಮಾಗೆ ಪ್ರಸ್ವದೆಕಾರಂ ಅಲ್ಲುಂ ಅಪ್ಪುವು—ಮಾಡೆಪಟ್ಟಂ, ಮಾಡಲ್‌ಪಟ್ಟಂ; ನೋಡೆಪಟ್ಟಂ, ನೋಡಲ್‌ಪಟ್ಟಂ; ಕಿಡಿಸೆ ಪಟ್ಟುದು, ಕಿಡಿಸಲ್‌ಪಟ್ಟುದು—ಎಂಬಂತೆಲ್ಲಕ್ಕಂ ಪತ್ತಿಸುವುದು.

ಮ ‖ ಕವಿತಾ ಪ್ರಾಥಿಯೊಳಬ್ಜಸಂಭವನೆ ಕರ್ತಾರಂ ಕ್ರಿಯಾ ಕೌಶಲಂ ।
ಸ್ತವನೀಯಂ ತದಧೀನಮಾದಖಿಳ ಶಾಸ್ತ್ರಾಮ್ನಾಯಮುಂ ಕೂಡೆ ಬ ॥
ಲ್ಲವರಿಲ್ಲೆನ್ನದಿರೊರ್ವನಿಂದಭಿನವ ಬ್ರಹ್ಮಂ ಗಡೆಂಬಂತೆ ತೋ ।
ಱುವನಾತ್ಮೀಯ ವಚೋ ವಿಚಿತ್ರತರ ವಿದ್ಯಾವೇಶಮಂ ಕೇಶವಂ ॥

ತಾತ್ಪರ್ಯ—ಕವಿತ್ವದ ಬಲ್ಲತನದಲ್ಲಿ ಬ್ರಹ್ಮನೆ ಕರ್ತೃ ಕ್ರಿಯಾಕೌಶಲವುಳ್ಳವಂ, ಸ್ತುತಿ ಮಾಡಲ್ತಕ್ಕವಂ; ಅವನಧೀನವಾದ ಸಮಸ್ತ ವೇದಶಾಸ್ತ್ರಂಗಳಂ ಒಡನೆ ಅಱಿತವರ್ ಇಲ್ಲವೆಂದು ಎನಲ್ ಬೇಡ; ಕವಿಕೇಶವಂ ಒರ್ವಂ ಇಂದು ಹೊಸಬನಾದ ಬ್ರಹ್ಮಂ ಗಡ! ಎಂಬ ಹಾಗೆ ತನ್ನ ಸಂಬಂಧವಾದ ವಾಕ್ಯಂಗಳ ಚೋದ್ಯತರವಾದ ವಿದ್ಯಂಗಳ ಆವೇಶವನ್ನು ಕಾಣಿಸುವಂ.

ಇದು ಸಮಸ್ತ ಶಾಬ್ದಿಕಜನ ಮನೋಜನಿತ ಶಬ್ದ ಸಂದೇಹಶಲ್ಯ
ಚಾರು ಚುಂಬಕಾಯಮಾನಾನೂನ ಕರ್ಣಾಟಕ ಲಕ್ಷಣ
ಶಿಕ್ಷಾಚಾರ್ಯ ಸುಕವಿ ಕೇಶಿರಾಜ ವಿರಚಿತ
ಮಪ್ಪ ಶಬ್ದಮಣಿದರ್ಪಣದೊಳ್
ಆಖ್ಯಾತಸಾಕಲ್ಯಲಕ್ಷಣಮೆಂಬ
ಪಂಚಮಸಂಧಿ
ಸಂಪೂರ್ಣಂ.

## ಆರನೆಯ ಸಂಧಿ

### ಧಾತುಪ್ರಕರಣಂ

ವೇದಸಮನಾಗಿ ಭೀಮನಿ ।
ನಾದುದು ಸಂಸ್ಕೃತದ ಧಾತುವಾ ತೆಱದಿಂದಂ ॥
ಯಾದವ ಕಟಕಾಚಾರ್ಯನಿ ।
ನಾದುದು ಕರ್ಣಾಟಧಾತು ಕವಿಕೇಶವನಿಂ ॥

ವೃತ್ತಿ.—ವೇದದವೋಲ್ ಭೀಮಕವಿಯಿನೆಂತು ಸಂಸ್ಕೃತಧಾತು ಪ್ರಸಿದ್ಧಮಾಯ್ತಾತೆಱದೊಳೆ ಯಾದವಕಟಕೋಪಾಧ್ಯಾಯನಪ್ಪ ಕವಿಕೇಶವನಿಂ ಕರ್ಣಾಟಧಾತು ನೆಗಟ್ತೆವಡೆದುದು. [ಸಂ. ಕ. ಸಾ. ಪ.

ಸೂತ್ರಂ ॥ ದೊರೆವಡೆದ ಮಹಾಪ್ರಾಣಾ ।
ಕ್ಷರಾಂತದಿಂ ಜ ಞ ಶ ಷಾಂತ ಹಾಂತ ಕ್ಷಾಂತೋ ॥
ದ್ಧರಣದಿನುದ್ಭವಿಸವು ಬ ।
ಲ್ಲರ ಮತದಿಂ ಧಾತು ತಿಳಿವುದಿವನೀ ಕ್ರಮದಿಂ ॥ * ॥

ವೃತ್ತಿ.—ವರ್ಗದ್ವಿತೀಯ ಚತುರ್ಥಾಕ್ಷರಂಗಳುಂ ಜ ಞ ಶ ಷ ಹ ಕ್ಷಕಾರಂಗಳುಮಂತಂಗಳಾಗಿರ್ಪ ಧಾತುಗಳ್ ಕನ್ನಡದೊಳ್ ನಿಸರ್ಗದಿನಿಲ್ಲೆಂಬುದು ಶಾಬ್ದಿಕ ಸಮಯಮೆಂದಱಿವುದು. [ಸಂ. ಕ. ಸಾ. ಪ.

ವೃತ್ತಿ.—ಪದದ ಮೊದಲ ಋತ್ವಕ್ಕೆ ಇತ್ವಮುಂ ಎತ್ವಮುಂ ಅತ್ವಮುಂ ಬಹುಳದಿನುತ್ವಮುಮಕ್ಕುಂ; ಬ್ರಹ್ಮ ಶಬ್ದದಂತಮೃತಶಬ್ದದ ಕಡೆಗಂ ರೇಫಂ.

ಪ್ರಯೋಗಂ.—ಋತ್ವಕ್ಕಿತ್ವಂ—

| | | |
|---|---|---|
| ಋಜು—ರಿಜು | ಬೃಂದ—ಬಿಂದ | ವೃತ್ತಿ—ವಿತ್ತಿ |
| ಋಣ—ರಿಣ | ಭೃಂಗ—ಬಿಂಗ | ವೃಥಾ—ವಿತೆ |
| ಋತು—ರಿತು | ಭೃಂಗಾರ—ಬಿಂಗಾರ | ವೃಧ್ಧಿ—ವಿದ್ಧಿ |
| ಋಷಿ—ರಿಸಿ | ಮೃಗ—ಮಿಗ | ಶೃಂಗಾರ—ಸಿಂಗಾರ |
| ತೃಣ—ತಿಣ | ಮೃತ—ಮಿತ | ಶೃಂಗಿ—ಸಿಂಗಿ |

ಋತ್ವಕ್ಕೆತ್ವಂ—ಹೃದಯ—ಹೆದೆಯ; ಹೃಷ್ಟ—ಹೆಟ್ಟ.

ಋತ್ವಕ್ಕತ್ವಂ—ಕೃತಕಿ–ಗದಕಿ: ವೃಷಭ-ಬಸವ; ಶೃಂಖಲಾ–ಸಂಕಲೆ;

ಬಹುಳದಿಂ ಪದಮಧ್ಯದ ಋತ್ವಕ್ಕವುತ್ವಂ — ಅಮೃತ—ಅಮುರ್ದು; ಪ್ರಾಕೃತ–ಪಾಗದ; ಸಂಸ್ಕೃತ–ಸಕ್ಕದ.

ಪದಪಾದಿಯ ಋತ್ವಕ್ಕುತ್ವಂ—ಮೃದ್ವೀಕಾ–ಮುದ್ದಿಗೆ.

ಬ್ರಹ್ಮಶಬ್ದದಂತಮೃತಶಬ್ದದ ಕಡೆಗಂ ರೇಫಂ-ಬ್ರಹ್ಮ-ಬರ್ಮ್ಮ; ಅಮೃತ-ಅಮುರ್ದು.

ಸೂತ್ರಂ ॥ ಆದಿಯೊಳಿರ್ದತ್ವಕ್ಕು ।
ತ್ವಾದೇಶಮುಮಿತ್ವವೃತ್ತಿಯುಂ ಹತ್ವಮುಮಾ ॥
ಪಾದಿತಮಕ್ಕುಂ ಜ್ಞತ್ವ ।
ಕ್ಕಾದಿಯನುೞಿದು ನ್ನನಕ್ಕುಮದು ಬಹುಳತೆಯಿಂ ॥ ೨೯ ॥

ವೃತ್ತಿ.—ಪದಪಾದಿಯ ಅಕಾರಕ್ಕುಕಾರಮುಮಿಕಾರಮುಂ ಹಕಾರಮುಮಕ್ಕುಂ; ಆದಿಯಂ ಕಳೆದುೞಿದ ಜ್ಞತ್ವಕ್ಕೆ ದ್ವಿತ್ವದ ನಕಾರಂ ಬಹುಳದಿನಕ್ಕುಂ.

ಪ್ರಯೋಗಂ.—ಅತ್ವಕ್ಕುತ್ವಂ—ಅಂಗುಷ್ಠ–ಉಂಗುಟ; ತ್ವರಿತ–ತುರಿಹ.

ಅತ್ವಕ್ಕಿತ್ವಂ—ಅಂಗಾರ—ಇಂಗಳ; ಜಳೂಕ-ಜಿಗುಳೆ.

ಅತ್ವಕ್ಕೆ ಹತ್ವಂ—ಅಗ್ನಿ–ಹಗ್ಗಿ.

ಜ್ಞಕಾರಕ್ಕೆ ದ್ವಿತ್ವ ನಕಾರಂ—ಯಜ್ಞ–ಜನ್ನ; ವಿಜ್ಞಾನ—ಬಿನ್ನಣ; ವಿಜ್ಞಾಪನ—ಬಿನ್ನಪ; ಸಂಜ್ಞಾ—ಸನ್ನೆ.

ಬಹುಳಮೆಂಬುದಱಿಂದೆ 'ಆಜ್ಞೆಗೆ' 'ಆಣೆ' ಎಂದುಂಟು.

**ಸೂತ್ರಂ** ॥ ಪದದಾದಿಯುವರ್ಣಕ್ಕೌ।
ತ್ವದತ್ವದೆಡೆಗೊತ್ವಮುಂ ಪೊದಳ್ದೋತ್ವಮುಮ ॥
ಪ್ಪುದು ವೈಕಲ್ಪಿಕದಿಂ ಶ।
ಬ್ದದಾದಿ ದೀರ್ಘಕ್ಕೆ ಪಿರಿದುಮಕ್ಕುಂ ಹ್ರಸ್ವಂ ॥ ೨೭೦ ॥

**ವೃತ್ತಿ.**—ವಿಕಲ್ಪದಿಂ ಪದದಾದಿಯ ಉ ಊ ಎಂಬಿವರ್ಕಂ ಔಕಾರಕ್ಕಂ ಅಕಾರಕ್ಕಂ ಹ್ರಸ್ವೋತ್ವಮುಂ ದೀರ್ಘೋತ್ವಮುಂ ಅಕ್ಕುಂ; ಪದಂಗಳ ಮೊದಲ ದೀರ್ಘಕ್ಕೆ ಪಿರಿದುಂ ಹ್ರಸ್ವಮಕ್ಕುಂ.

**ಪ್ರಯೋಗಂ.**—ಉಕಾರಕ್ಕೆ ಒತ್ವಂ—

| | | |
|---|---|---|
| ಉಷ್ಟ್ರ—ಒಟ್ಟೆ, ಒಂಟೆ | ತುವರಿ—ತೊವರಿ | ಸುಧಾ—ಸೊದೆ |
| ಕುಂಡ—ಕೊಂಡ | ಪುಸ್ತಕ—ಪೊತ್ತಗೆ | ಸುಭಗ—ಸೊಬಗ. |
| ಕುಂತ—ಕೊಂತ | ಭುಜಂಗ—ಬೊಜಂಗ | |
| ತುಲಸಿ—ತೊಳಸಿ, | ಮುಖ—ಮೊಗ | |
| ತೊಳಚಿ | ಸುಖ—ಸೊಕ, ಸೊಗ | |

ಉಕಾರಕ್ಕೆ ಓತ್ವಂ—ಕುಕ್ಕುಟ — ಕೋೞಿ; ಕುರಂಟ — ಗೋರಟೆ; ಸುವಾಸಿನಿ—ಸೋವಾಸಿಣಿ, ಸೋವಾಸಿನಿ.

ಊಕಾರಕ್ಕೆ ಓತ್ವಂ—ಕೂಟ—ಕೋಡು; ಮೂಢ—ಮೋಡ.

ಔಕಾರಕ್ಕೆ ಒತ್ವಂ—ಕ್ರೌಂಚ—ಕೊಂಚೆ; ಸೌರಾಷ್ಟ್ರ—ಸೊರಟ.

ಔಕಾರಕ್ಕೆ ಓತ್ವಂ—ಕೌಪೀನ—ಕೋವಣ.

ಅಕಾರಕ್ಕೆ ಒತ್ವಂ—ಸ್ವರ್ಣ—ಸೊಂನೆ.

ಅಕಾರಕ್ಕೆ ಓತ್ವಂ—ಮಯೂರ—ಮೋರ.

ಆದಿ ದೀರ್ಘಕ್ಕೆ ಹ್ರಸ್ವಂ—

| | | |
|---|---|---|
| ಆರ್ಯ—ಅಜ್ಜ | ತಾತ—ತಂದೆ | ಲಾಗ್ನಿಕ—ಲಗ್ಗಿಕ, ಲಗ್ಗಿಗ |
| ಕಾರ್ಯ—ಕಜ್ಜ | ತೀಕ್ಷ್ಣ—ತಿಕ್ಕ | ಸಾಕ್ಷಿ—ಸಕ್ಕಿ |
| ಕಾಂಚಿ—ಕಂಚಿ | ಪೂರ್ವ—ಹುಬ್ಬೆ | ಸೂತ್ರಿಕಾ—ಸುತ್ತಿಗೆ |
| ಕಾಂಜಿ—ಗಂಜಿ | ಪ್ರೇಕ್ಷಣ—ಪೆಕ್ಕಣ | |
| ಕಾಂಡಪಟ-ಕಂಡಪಟ | ವ್ಯಾಘ್ರ—ಬಗ್ಗ | |
| ಗೂರ್ಜರ—ಗುಜ್ಜರ | ರಾಕ್ಷಸ—ರಕ್ಕಸ | |

**ಸೂತ್ರಂ** ‖ ಅಕ್ಕುಮೆವರ್ಣಂ ಭಾವಿಸೆ ।
ತಕ್ಕಂತೆ ಪದಾದಿಯಿತ್ವದತ್ವದ ಸಂಸ್ಥಾ ‖
ನಕ್ಕಂ ಮತ್ತೈತ್ವಕ್ಕಂ ।
ಮಿಕ್ಕಾದಿ ಹಕಾರಮಸ್ವರದೆ ಲೋಪಿಸುಗುಂ ‖ ೨೭೧ ‖

**ವೃತ್ತಿ.**—ಎ ಏ ಎಂಬಕ್ಷರಂಗಳ್ ಪದಾದಿಯ ಇಕಾರಕ್ಕಮಕಾರಕ್ಕ ಮೈಕಾರಕ್ಕಮಕ್ಕುಂ; ಪದಾದಿಯ ಹಕಾರಂ ಸ್ವರ ರಹಿತಮಾಗಿ ಲೋಪಮಕ್ಕುಂ.

**ಪ್ರಯೋಗಂ.**— ಇಕಾರಕ್ಕೆ ಎತ್ವಂ—ಇಳಾ—ಎಳೆ; ದಿವಸ—ದೆವಸ; ದಿಶಾ—ದೆಸೆ; ಬಿಲ್ವಪತ್ರ—ಬೆಲ್ಲವತ್ತ; ವಿನಾಯಕ—ಬೆನಕ; ಶಿಲಾ—ಸೆಲೆ; ಸಿಂದೂರ—ಸೆಂದುರ.

ಇಕಾರಕ್ಕೆ ಏತ್ವಂ—ನಿಯಮ—ನೇಮ.

ಅ ಆಕಾರಂಗಳ್ಗೆ ಎತ್ವಂ—ವ್ಯತಿರೇಕ—ಬೆತಿರೇಕ, ವೆತಿರೇಕ; ವ್ಯಂಜನ—ಬೆಂಜನ; ಜಟಾ—ಜೆಡೆ; ವ್ಯಥಾ—ಬೆತೆ, ವೆತೆ; ಶಯ್ಯಾ—ಸೆಜ್ಜೆ.

ಅಕಾರಕ್ಕೆ ಏತ್ವಂ—ವ್ಯವಹಾರ—ಬೇಹಾರ, ಬೇಹರ.

ಐಕಾರಕ್ಕೆ ಎತ್ವಂ—ತೈಲಿಕ—ತೆಲ್ಲಿಗ; ವೈದ್ಯ-ಬೆಜ್ಜ; ಸೈಂಧವ-ಸೆಂದವ.

ಐಕಾರಕ್ಕೆ ಏತ್ವಂ—ವೈರ—ಬೇರ; ವೈಶಾಖ—ಬೇಸಗೆ.

ತಕ್ಕಂತೆ ಎಂಬ ಪರಿಮಿತ ವಚನದಿಂದಿತ್ವಕ್ಕಮತ್ವಕ್ಕಮೈತ್ವಕ್ಕಂ ಎವರ್ಣಂ ಕೆಲವೆಡೆಯೊಳಿಲ್ಲ; ಇತ್ವಕ್ಕೆ—ನಿಮಿಷ—ನಿಮಿಸ; ನಿಶಾ—ನಿಸಿ; ವಿಷ—ಬಿಸ.

ಅತ್ವಕ್ಕಮಂತೆ—ಅಂಕುಶ—ಅಂಕುಸ; ಕಂಠಿಕಾ—ಕಂಟಕೆ, ಕಂಟಗೆ; ಖಂಖರಿ—ಕಂಕರಿ.

ಐತ್ವಕ್ಕಮಂತೆ—ಭೈಕ್ಷ—ಬೈಕ; ಭೈರವ—ಬೈರವ; ಶೈವ—ಸೈವ.

ಅಸ್ವರ ಹಕಾರ ಲೋಪಕ್ಕೆ—ಹಂಸ—ಅಂಚೆ; ಹಿಂಗು—ಇಂಗು; ಹಿಂಗುಲಿಕ—ಇಂಗುಲಿಕ.

ಸೂತ್ರಂ ॥ ಅಕ್ಕುಂ ಸ್ಪರ್ಶ ಸ್ಫಟಿಕ ।
ಸ್ಫಿಕ್ಕಾ ಸ್ಫೋಟಕದೊಳಂ ಸ್ತುತಿ ಸ್ತಿಮಿತ ಸ್ತೋ ॥
ಮಕ್ಕಿರ್ದ ಪದಾದಿ ಸಕಾ ।
ರಕ್ಕಂ ಲೋಪಂ ಶ್ಮಶಾನದಾ ಶತ್ವಕ್ಕಂ ॥ ೨೭೨ ॥

ವೃತ್ತಿ.—ಈ ಪೇಟಿಲ್ಪಟ್ಟ ಶಬ್ದಂಗಳ ಸಕಾರಕ್ಕಂ ಶ್ಮಶಾನ ಶಬ್ದದ ಶಕಾರಕ್ಕಂ ಲೋಪಮಕ್ಕುಂ.

ಪ್ರಯೋಗಂ.—ಸ್ಪರ್ಶ—ಪರುಸ; ಸ್ಫಟಿಕ—ಪಳಿಕು; ಸ್ಫಿಕ್ಕಾ—ಹೆಕ್ಕೆ, ಹಿಕ್ಕೆ; ಸ್ಫೋಟಕ—ಹೋಳಿಗೆ; ಸ್ತುತಿ—ತುತಿ; ಸ್ತಿಮಿತ—ತಿಮಿತ; ಸ್ತೋಮ—ತೋಮ; ಶ್ಮಶಾನ—ಮಸಣ.

ಸೂತ್ರಂ ॥ ಪದಮಧ್ಯದ ದೀರ್ಘಕ್ಕೆ ।
ಪುದು ಪೀನಂ ಹ್ರಸ್ವಮೋತ್ವಮಾದಂದುತ್ವಂ ॥
ಪುದಿದುತ್ವಕ್ಕಿತ್ವಮುಮ ।
ತ್ವದ ಮೆಯ್ಯುಮದತ್ವದಲ್ಲಿಗಿತ್ವಾದೇಶಂ ॥ ೨೭೩ ॥

ವೃತ್ತಿ.—ಪದಮಧ್ಯದ ದೀರ್ಘಕ್ಕೆ ಪಿರಿದುಂ ಹ್ರಸ್ವಮಕ್ಕುಂ; ಪದಮಧ್ಯದೋತ್ವಕ್ಕುತ್ವಮಕ್ಕುಂ; ಪದಮಧ್ಯದುತ್ವಕ್ಕಿತ್ವಮುಮುತ್ವಮುಮಕ್ಕುಂ: ಪದಮಧ್ಯದತ್ವಕ್ಕಿತ್ವಮಕ್ಕುಂ.

ಪ್ರಯೋಗಂ.—ದೀರ್ಘಕ್ಕೆ ಹ್ರಸ್ವಂ—

| | | |
|---|---|---|
| ಆಯೋಗ್ರ—ಅಯೊಗ | ತೃತೀಯಾ—ತದಿಗೆ | ಬಂಧೂಕ—ಬಂದುಗೆ |
| ಆಕಾಶ—ಆಗಸ | ದ್ವಿತೀಯಾ—ಬಿದಿಗೆ | ವಿಲಾಸ—ವಿಲಸ |
| ಆರಾಮ—ಆರವೆ | ದುಕೂಲ—ದುಗುಲ | ಶಲಾಕಾ—ಸಲಗೆ |
| ಕೂರ್ಪಾಸ—ಕುಪ್ಪಸ | ಪ್ರಯಾಣ—ಪಯಣ | ಶ್ಮಶಾನ—ಮಸಣ |
| ಗೋಧೂಮ-ಗೋದುವೆ | ಬರ್ಬೂರ, ಬರ್ಬೂಲ—ಬೊಬ್ಬುಲಿ, ಬಬ್ಬುಲಿ | ಸನ್ನಾಹ—ಸನ್ನಣ |
| ಗೋಪಾಳ—ಗೋವಳ | | |
| ತಾಂಬೂಲ—ತಂಬುಲ | | |

ಓತ್ವಕ್ಕುತ್ವಂ—ಅಶೋಕ—ಅಸುಗೆ ; ಉದ್ಯೋಗ-ಉಜ್ಜುಗ; ಕಠೋರ—ಕಟುರ.

ಉತ್ವಕ್ಕಿತ್ವಂ—ಆಯುಷ್ಯ—ಆಯಿಸ.

ಉತ್ವಕ್ಕತ್ವಂ—ಕುರುಂಟ—ಗೋರಟೆ, ಗೋರಣ್ಟೆ; ಮಾನುಷ—ಮಾನಸ.

ಅತ್ವಕ್ಕಿತ್ವಂ—ಕನ್ಯಕಾ—ಕನ್ನಿಕೆ.

ಸೂತ್ರಂ ॥ ಪದಮಧ್ಯದೇತ್ವದೊಳವಿಾ।
ತ್ವದೊಳಂ ತಾನತ್ವಮತ್ವಮಿರ್ದಂದುತ್ವಂ ॥
ವಿದಿತಾತ್ವಕ್ಕಕ್ಕುಂ ಹ್ರ।
ಸ್ವದೆತ್ವವಿಧಿ ಬಹುಳವೃತ್ತಿಯಿಂ ಕೆಲವೆಡೆಯೊಳ್ ॥ ೨೭೪ ॥

ವೃತ್ತಿ.— ಪದಮಧ್ಯದೇಕಾರದೊಳಮಿಾಕಾರದೊಳಮತ್ವಮಕ್ಕುಂ; ಪದಮಧ್ಯದತ್ವಕ್ಕುತ್ವಮಕ್ಕುಂ ; ಪದಮಧ್ಯದಾತ್ವಕ್ಕೆತ್ವಂ ಬಹುಳದಿನಕ್ಕುಂ.

ಪ್ರಯೋಗಂ.—ಏತ್ವಕ್ಕತ್ವಂ—ಅಲೇಖ—ಅಳಕ.

ಈಕಾರಕ್ಕೆ ಅತ್ವಂ—ಕೌಪೀನ—ಕೋವಣ; ಮರೀಚ-ಮೆಳಸು, ಮೆಱಸು.

ಅತ್ವಕ್ಕುತ್ವಂ—ಸತ್ವಕ—ಸತ್ತುಗ.

ಆತ್ವಕ್ಕೆತ್ವಂ—ಅನ್ಯಾಯ—ಅನ್ನೆಯ.

ಬಹುಳದಿನೆಂಬುದಱಿಂ—ರಸಾಯನ—ರಸೆಯನ.

ಸೂತ್ರಂ ॥ ಅವತರಿಸಿರ್ಕುಂ ಪದ ಮ।
ಧ್ಯ ವರ್ಣದೊಳ್ ಲೋಪವೃತ್ತಿ ಬಹುಳತೆಯಿಂ ತ ॥
ದ್ಭವಮಾದಿಯ ಬತ್ವಂ ಭೈ।
ತ್ವ ವೈತ್ವವಿಧಿಯತ್ವದಾತ್ವದೊಳ್ ದೊರೆಕೊಳ್ಗುಂ ॥ ೨೭೫ ॥

ವೃತ್ತಿ.—ಪದಮಧ್ಯದಕ್ಕರಕ್ಕೆ ಬಹುಳದಿಂ ಲೋಪಮಕ್ಕುಂ ; ಪದಾದಿಯ ಬಕಾರಕ್ಕೆ ಐತ್ವಂಬೆರಸಿದ ಭಕಾರಮಕ್ಕುಂ; ಪದಾದಿಯತ್ವಕ್ಕಮಾತ್ವಕ್ಕಮೈತ್ವಮಕ್ಕುಂ

ಪ್ರಯೋಗಂ.—ಪದಮಧ್ಯಲೋಪಕ್ಕೆ—ಕುಕ್ಕುಟ-ಕೋೞಿ; ಕುಮಾರ-ಕೋರ, ಕುವರ; ಗಹನ—ಗಾನ; ನವಮಿ—ನಾಮಿ; ನಿಯಮ—ನೇಮ; ಮಯೂರ—ಮೋರ; ಸಾಹಸ—ಸಾಸ.

ಬತ್ವದ ಭೈಕಾರಕ್ಕೆ—ಬಹಿತ್ರ—ಭೈತ್ರ.

ಅತ್ವಕ್ಕೈತ್ವಂ—ಮಹಿಮ—ವೈಮೆ; ಮಹಿಷಿ—ವೈಸಿ.

ಆತ್ವಕ್ಕೈತ್ವಂ—ವಾಹ್ಯಾಳಿ—ವೈಹಾಳಿ, ವೈಹ್ಯಾಳಿ. ಬಹುಳದಿನಿಲ್ಲಿ ಪದ ಮಧ್ಯ ಲೋಪಮಿಲ್ಲ.

**ಸೂತ್ರಂ** ॥ ಸಮನಿಸುಗುಂ ಗತ್ವಂ ಶ।
ಬ್ದಮಧ್ಯ ಮತ್ವಕ್ಕಮಂತೆ ಳತ್ವಕ್ಕಂ ಕ ॥
ತ್ವಮದಿರ್ದೊಡೆ ವತ್ವಂ ಯ।
ತ್ವಮಿಶ್ರ ಥತ್ವಕ್ಕೆ ದತ್ವಮತ್ವಕ್ಕಿತ್ವಂ ॥ ೨೭೬ ॥

**ವೃತ್ತಿ.**—ಶಬ್ದಮಧ್ಯದ ಮಕಾರಕ್ಕಂ ಳಕಾರಕ್ಕಂ ಗಕಾರಮಕ್ಕುಂ; ಪದ ಮಧ್ಯ ಕಕಾರಕ್ಕೆ ವಕಾರಮಕ್ಕುಂ; ಯತ್ವಮಿಶ್ರ ಥಕಾರಕ್ಕೆ ದಕಾರಮಕ್ಕುಂ, ಅದ ಱತ್ವಕ್ಕಿತ್ವಮಕ್ಕುಂ.

**ಪ್ರಯೋಗಂ.**—ಮಕಾರಕ್ಕೆ ಗಕಾರಂ—ಯಮುನಾ—ಜಗುನೆ.

ಳಕಾರಕ್ಕೆ ಗಕಾರಂ—ಜಳೂಕಾ—ಜಿಗುಳೆ.

ಕಕಾರಕ್ಕೆ ವತ್ವಂ—ಶೀಕರ—ಸೀವರ.

ಯತ್ವಮಿಶ್ರ ಥಕಾರಕ್ಕಿತ್ವಂ ಬೆರಸಿದ ದಕಾರಂ—ಅಧ್ಯಕ್ಷ—ಅದ್ದಿಕ.

**ಸೂತ್ರಂ** ॥ ಪದಮಧ್ಯ ತಕಾರಕ್ಕ।
ಪ್ಪುದೊರ್ವೆ ರೇಫಂ ಟಕಾರಮೊರ್ವೆ ಗಕಾರಂ ॥
ಪುದಿದಿರ್ಕುಮೊರ್ವೆ ತಾನಂ।
ತ್ಯದೊಳೊಂದಿರೆ ಡತ್ವಮೊರ್ವೆಯೊರ್ವೆ ಹಕಾರಂ ॥ ೨೭೭ ॥

**ವೃತ್ತಿ.**—ಪದಮಧ್ಯ ತಕಾರಕ್ಕೊರ್ವೆ ರೇಫಮುಂ ಟಕಾರಮುಂ ಗಕಾರ ಮುಮಕ್ಕುಂ; ಪದಾಂತ್ಯ ತಕಾರಕ್ಕೆ ಡಕಾರಮುಂ ಹಕಾರಮುಮಕ್ಕುಂ.

**ಪ್ರಯೋಗಂ.**—ಪದಮಧ್ಯ ತಕಾರದ ರೇಫೆಗೆ—ಖಾತಿಕಾ=ಕಾರಿಗೆ, ಖಾರಿಗೆ, ಗಾರಿಗೆ.

ತಕಾರಕ್ಕೆ ಟಕಾರಂ—ಪತ್ತನ—ಪಟ್ಟಣ.

ತಕಾರಕ್ಕೆ ಗಕಾರಂ—ಅತಸಿ—ಅಗಸೆ; ಉತ್ಕಟ—ಉಗ್ಗಟ.

ಪದಾಂತ ತಕಾರದ ಡತ್ವಕ್ಕೆ—ಸಂಘಾತ—ಸಂಗಡ.

ತಕಾರಕ್ಕೆ ಹಕಾರಂ—ತ್ವರಿತ—ತುರಿಹ.

ಸೂತ್ರಂ ॥ ತಿಳಿ ಬಹುಳದೆ ಶಬ್ದಾಂತಂ ।
ಗಳ ನತ್ವ ಜ್ಞತ್ವ ಕತ್ವದೆಡೆಗೆ ಣಕಾರಂ ॥
ತಳೆಗುಮದಂತಪದಾಂತಂ ।
ಗಳಿತ್ವಮುಮನಿತ್ವವೃತ್ತಿಯುಮನುತ್ವಮುಮಂ ॥ ೨೭೮ ॥

ವೃತ್ತಿ.—ಬಹುಳದಿಂ ಶಬ್ದಂಗಳ ಕಡೆಯ ನಕಾರ ಜ್ಞಕಾರ ಕಕಾರಂಗಳ್ಗೆ ಣತ್ವಮಕ್ಕುಂ; ಪದಾಂತ್ಯದಕಾರಂಗಳ್ಗೆ ಇತ್ವಮುಮಿತ್ವಮುಮುತ್ವಮುಮಕ್ಕುಂ.

ಪ್ರಯೋಗಂ.—ನತ್ವಕ್ಕೆ ಣತ್ವಂ—ಅಂಕನ—ಅಂಗಣ*; ಖನಿ—ಕಣಿ; ಪತ್ತನ—ಪಟ್ಟಣ; ಪಿಶುನ-ಹಿಸುಣ; ಫಲ್ಗುನ-ಪಲುಗುಣ; ಮಂಥನಿ-ಮಂತಣಿ; ಲಂಬನ-ಲಂಬಣ; ವಿಜ್ಞಾನ-ಬಿನ್ನಣ; ಸ್ಥಾನ-ತಾಣ; ಸುವಾಸಿನಿ—ಸೋವಾಸಿಣಿ.

ಜ್ಞತ್ವಕ್ಕೆ ಣತ್ವಂ—ಆಜ್ಞೆ—ಆಣೆ.

ಕಕಾರಕ್ಕೆ ಣತ್ವಂ—ನರ್ತಕಿ—ನಚ್ಚಣಿ.

ಬಹುಳದಿಂ ಪದಮಧ್ಯ ನಕಾರಕ್ಕಂ ಣತ್ವಂ—ಶುನಕ—ಸೊಣಗ.

ಅತ್ವಕ್ಕೆತ್ವಂ—

ಅರ್ಕ್ಕ—ಎರ್ಕ್ಕೆ
ಅಂದುಕ—ಅಂದುಗೆ
ಕಳಮ—ಕಳವೆ
ಕುರಂಟ—ಗೋರಟೆ
ಕುಸುಂಭ— ಕುಸುಂಬೆ
ಕೋಕಿಲ—ಕೋಗಿಲೆ
ಘಟ್ಟಣ—ಘಟ್ಟಣೆ
ಚೀರ—ಸೀರೆ
ಜೀರಕ—ಜೀರಿಗೆ
ಧೂಮ—ದೂವೆ
ಪಾದುಕ—ಪಾವುಗೆ, ಹಾವುಗೆ
ಪ್ರಹರಣ—ಪ್ರಹರಣೆ
ಮಂಡಕ—ಮಂಡಗೆ
ಶಾಣ—ಸಾಣೆ
ಸ್ಥಾಪನ—ತಾಪಣೆ
ಹಂಸ—ಅಂಚೆ.

ಅತ್ವಕ್ಕಿತ್ವಂ—

*'ಅಂಗಣವಾವಿ' ಎಂದು ಅಚ್ಚಗನ್ನಡದ ಸಮಾಸವುಂಟು; ಮತ್ತಂ ಸಂಸ್ಕೃತದೊಳಂ 'ಅಂಗಣಂ' ಉಂಟು—ರಾಜಾಂಗಣಂ, ಗೃಹಾಂಗಣಂ—ಎಂದು.

| | | |
|---|---|---|
| ಅರ್ಗಳ—ಅಗುಟಿ | ಕುದ್ದಾಲ—ಗುದ್ದಲಿ | ಭೃಂಗಾರ— ಬಿಂಗಾರಿ |
| ಆಷಾಢ-ಆಸಡಿ, ಅಸಡಿ | ಪಾಟಳ—ಪಾದರಿ | ಮಾಘ—ಮಾಗಿ |
| ಕಂಬಲ—ಕಂಬಳಿ | ಬರ್ಬುಲ—ಬೊಬ್ಬುಲಿ, ಬಬ್ಬುಲಿ | ಸಸ್ಯ—ಸಸಿ |
| ಕುಕ್ಕುಟ—ಕೋಟಿ | | |

ಅತ್ವಕ್ಕುತ್ವಂ—

| | | |
|---|---|---|
| ಅಮೃತ—ಅಮುರ್ದು | ದ್ಯೂತ-ಜೂದು,ಜೂಜು | ರೂಪ—ರೂಪು, ರೂವು |
| ಅಕ್ಷ—ಅಚ್ಚು | ದಾಮ—ದಾವು | ವಾಟ—ಬಾಡು |
| ಕಾಚ-ಗಾಜು, ಕಾಜು | ಪಿಷ್ಟ—ಹಿಟ್ಟು | ವಾದ—ಬಾದು |
| ಕೂಟ—ಕೋಡು | ಪೇಟ್ಟ—ಪೆಟ್ಟು | ಸ್ಫಟಿಕ—ಪಳಿಕು |
| ತರಂಗ—ತರಂಗು | ಮರೀಚ—ಮೆಳಸು, ಮೆಣಸು | ಶುಲ್ಪಂ, ಸುಲ್ಪಂ —ಸುಲು[1] |
| ದಂಡ—ದಂಡು | | |

ಸೂತ್ರಂ ॥ ನೆಲೆಗೊಂಡುತ್ವಕ್ಕಿತ್ವಂ ।
ಕೆಲವೆಡೆಯಿತ್ವಕ್ಕಮುತ್ವಮುಂ ಹ್ರಸ್ವತೆಯ ॥
ಗ್ಗಲಿಸಿರ್ದೆತ್ವಮುಮಂತ್ಯ ।
ಸ್ಥಲ ಸ್ವರಕ್ಕೊರ್ಮೆ ಲೋಪಮುಂ ಸಂಭವಿಕುಂ ॥ ೨೭ ॥

ವೃತ್ತಿ.—ಪದಾಂತ್ಯದುಕಾರಕ್ಕಿಕಾರಮಕ್ಕುಂ; ಕೆಲವೆಡೆಯಿಕಾರಕ್ಕುಕಾರಮುಂ ಹ್ರಸ್ವಮಪ್ಪೆತ್ವಮುಮಕ್ಕುಂ; ಪದಾಂತ್ಯ ಸ್ವರಕ್ಕೊರ್ಮೆ ಲೋಪಮಕ್ಕುಂ.

ಪ್ರಯೋಗಂ.—ಉತ್ವಕ್ಕಿತ್ವಂ—ಕುಸ್ತುಂಬುರು-ಕೊತ್ತುಂಬರಿ; ಖರ್ಜು-ಕಜ್ಜಿ.

ಇತ್ವಕ್ಕುತ್ವಂ—ಗ್ರಂಥಿ—ಗಂಟು; ಮಕ್ಷಿ—ಮಚ್ಚು; ಮಂತ್ರಿ—ಮಂತು; ಸಂಧಿ—ಸಂದು.

ಇತ್ವಕ್ಕೆತ್ವಂ—ಅತಸಿ—ಅಗಸೆ; ಅಷ್ಟಮಿ—ಅಟ್ಟವೆ; ಕುಕ್ಷಿ—ಕುಕ್ಕೆ; ತುಲಸಿ—ತೊಳಚೆ; ತುಂಡಿ—ತೊಂಡೆ; ಪಂಚಮಿ—ಪಂಚವೆ; ಪುಷ್ಕರಿಣಿ—ಹೊಕ್ಕರಣೆ; ಸಪ್ತಮಿ—ಸತ್ತವೆ.

ಅಂತ್ಯಸ್ವರಲೋಪಕ್ಕೆ-ಕೀಲ-ಕೀಲ್; ಕೋಣ-ಕೋಣ್; ನೀರ—ನೀರ್; ಪ್ರಮಾಣ—ಪವಣ್; ಮೀನ—ಮೀನ್; ಮುಕುಳ-ಮುಗುಳ್; ಶೀಲ-ಶೀಲ್.

---

1. ಸುಲು, ಸುಲುವು = ಕಿಸುವೊನ್.

ಸೂತ್ರಂ ॥ ಮಹಿ ಪೊಗಚಾಶ್ಚರ್ಯ ಪ್ರ ।
ಗ್ರಹ ವಿಜ್ಞಾಪನ ಕಪಿಂಜಳಾಂಗಿರಸಾಂತ್ಯ ॥
ಕ್ಕೆ ಹಿತಂ ಲೋಪವಿಧಾನಂ ।
ಗ್ರಹಣಕ್ಕಂ ಗರಣಮಾಯ್ತು ಶಬ್ದಾದೇಶಂ ॥ ೨೮೦ ॥

ವೃತ್ತಿ.—ಈ ಶಬ್ದಂಗಳ ಕಡೆಯಕ್ಕರಕ್ಕೆ ಲೋಪಂ; ಗ್ರಹಣ ಶಬ್ದಕ್ಕೆ ಗರಣ ಮೆಂದಾದೇಶಂ.

ಪ್ರಯೋಗಂ.—ಆಶ್ಚರ್ಯ—ಅಚ್ಚರಿ; ಪ್ರಗ್ರಹ—ಹಗ್ಗ; ವಿಜ್ಞಾಪನ—ಬಿಂನಪ; ಕಪಿಂಜಳ—ಕವಿಂಜು; ಆಂಗಿರಸ—ಆಂಗಿರ; ಗ್ರಹಣ—ಗರಣ.

ಸೂತ್ರಂ ॥ ಕೂರ[1] ಪ್ರಾಕಾರಂಗಳ ।
ಮೇರೆಯ ರೇಫಕ್ಕೆ ತರದೆ ಱ ಟ ಲತ್ವಂಗಳ್ ॥
ಪೂರಿಪುವಸ್ವರ ವಿಧಿಯಿಂ ।
ಸಾರಂ ಗ್ರಾಮಿಣ ಣತ್ವದೆಡೆಗೆ ಲಕಾರಂ ॥ ೨೮೦ (*a*) ॥

ವೃತ್ತಿ.—ಕೂರ[1] ಪ್ರಾಕಾರಂಗಳ ರೇಫೆಗೆ ಪರಿವಿಡಿಯಿಂ ಱ ಟನುಂ ಲಕಾರ ಮುಂ ವ್ಯಂಜನ ರೂಪದಿನಕ್ಕುಂ; ಗ್ರಾಮಿಣ ಶಬ್ದದ ಣಕಾರಕ್ಕೆ ಲಕಾರ ಮಕ್ಕುಂ.

ಪ್ರಯೋಗಂ.—ಕೂರ—ಕೂಟ್ ; ಪ್ರಾಕಾರ-ಪಾಗಲ್ ; ಗ್ರಾಮಿಣ-ಗಾವಿಲ.

ಸೂತ್ರಂ ॥ ಶ ಸ ದ ಧ ಲ ಜ ಳ ತದಿಂ ಕೆಳ ।
ಗೆ ಸಲ್ವ ವತ್ವಂ ಸ್ನಕಾರ ನತ್ವಂ ಮತ್ತಂ ॥
ಜ ಸ ಕ ನ ವ ಶ ಷದ ಯತ್ವಂ ।
ಪ್ರಸನ್ನ ಭಾವದೊಳೆ ತಳ್ತು ಲೋಪಮನಾಳ್ಗುಂ ॥ ೨೮೧ ॥

ವೃತ್ತಿ.— ಶಕಾರ ಸಕಾರ ದಕಾರ ಧಕಾರ ಲಕಾರ ಜಕಾರ ಳಕಾರ ತಕಾರದ ಕೆಳಗಣ ವತ್ವಕ್ಕೆ ಲೋಪಂ; ಸ್ನಕಾರದ ನಕಾರಕ್ಕಂ ಲೋಪಂ; ಜಕಾರ ಸಕಾರ ಕಕಾರ ನಕಾರ ವಕಾರ ಶಕಾರ ಷಕಾರದ ಕೆಳಗಿರ್ದ ಯತ್ವಕ್ಕಂ ಲೋಪಂ.

ಪ್ರಯೋಗಂ.—ವತ್ವಲೋಪಕ್ಕೆ—

---

1. ಕ್ರೂರ. (ಮುದ್ರಿತ ಪುಸ್ತಕ ಪಾಠ)

| | | |
|---|---|---|
| ಈಶ್ವರ— ಈಸರ | ದ್ವೀಪ—ದೀಪ, ದೀವಿ | ಸ್ವಯಂಭು-ಸಯಂಬು |
| ಖಿಳ್ವ—ಕೆಲ್ | ಧ್ವನಿ—ದನಿ | ಸ್ವರ—ಸರ |
| ಜ್ವರ—ಜರ | ಬಿಳ್ವ—ಬಿಳ್ | ಸ್ವರೂಪ—ಸರೂಪ |
| ಜ್ವಾಲಾ—ಜಾಳೆ | ಶಾಶ್ವತ—ಸಾಸತ | ಸ್ವಾತಿ—ಸಾತಿ |
| ತಪಸ್ವಿ—ತಪಸಿ, ತವಸಿ | ಶ್ವಾನ—ಸಾನ | ಸ್ವಾಮಿ—ಸಾಮಿ |
| ತ್ವರಿತ—ತುರಿಹ | ಶ್ವೇತ—ಸೇತ | ಸುಲ್ವ } ಸುಲು, |
| ದ್ವಾರಪಟ್ಟ-ದಾರವಟ್ಟ | ಸರಸ್ವತಿ—ಸರಸತಿ | ಶುಲ್ವ } ಸುಲ್ |
| ದ್ವಿಗುಣ—ದುಗುಣ | ಸ್ವರ್ಗ—ಸಗ್ಗ | |

ಸ್ನುಕಾರ ನತ್ವಲೋಪಕ್ಕೆ—ಸ್ನುಷಾ—ಸೊಸೆ.

ಯತ್ವಲೋಪಕ್ಕೆ—

| | | |
|---|---|---|
| ಅಮಾವಾಸ್ಯಾ— ಅಮಾಸೆ, ಅವಸೆ | ಜ್ಯೋತಿಷ-ಜೋಯಿಸ | ವ್ಯಂಜನ—ಬೆಂಜನ |
| ಆಯುಷ್ಯ—ಆಯಿಸ, ಆಯುಸ | ನ್ಯಾಯ-ನೇಯ, ನಾಯ | ವಾಂಶ್ಯ—ವಾಸ |
| ಆಲಸ್ಯಕ—ಅಲಸುಗೆ | ನ್ಯೂನ—ನೂನ | ಶ್ಯಾಮವರ್ಣ— ಸಾಮವರ್ಣ |
| ಕಾಂಸ್ಯ—ಕಂಚು | ಮಾಣಿಕ್ಯ—ಮಾಣಿಕ | ಸಸ್ಯ—ಸಸಿ |
| ಜ್ಯೋತಿ—ಜೋತಿ | ವ್ಯಥಾ—ಬೆತೆ, ವೆತೆ | |
| | ವ್ಯವಹಾರ—ಬೇಹಾರ, ವೆವಹಾರ | |

ಸೂತ್ರಂ ॥ ಯತ್ವದ ಸತ್ವದ ಚತ್ವದ ।
ದತ್ವದ ವಿಧಿ ಜತ್ವದಲ್ಲಿ ಸಂಭವಿಸಿರ್ಕುಂ ॥
ಭತ್ವಕ್ಕೆ ಹ ಪ ವಮಕ್ಕುಂ ।
ರತ್ವಕ್ಕಂ ಲ ಳಮುಮಕ್ಕುಮೋರೊಂದೆಡೆಯೊಳ್ ॥ ೨೮೩ ॥

ವೃತ್ತಿ.—ಯತ್ವಮುಂ ಸತ್ವಮುಂ ದತ್ವಮುಂ ಚತ್ವಮುಂ ಜತ್ವಕ್ಕಾದೇಶಮಕ್ಕುಂ; ಭತ್ವಕ್ಕೆ ಹತ್ವಮುಂ ಪತ್ವಮುಂ ವತ್ವಮುಮಕ್ಕುಂ; ರೇಫೆಗೆ ಲತ್ವಮುಂ ಳತ್ವಮುಂ ಕೆಲವೆಡೆಯೊಳಕ್ಕುಂ.

ಪ್ರಯೋಗಂ.—ಜತ್ವಕ್ಕೆ ಯತ್ವಂ—ರಾಜ—ರಾಯ.

ಜತ್ವಕ್ಕೆ ಸತ್ವಂ—ಕುಟಜಕ—ಕೊಡಸಿಗೆ.

ಜತ್ವಕ್ಕೆ ದತ್ವಂ—ಮುಂಜ—ಮೊಡೆ.

ಜತ್ವಕ್ಕೆ ಚತ್ವಂ—ಲಾಮಜ್ಜ—ಲಾಮಚ್ಚ, ಲಾಮಚ.

ಭತ್ವಕ್ಕೆ ಹತ್ವಂ—ವಲ್ಲಭ—ಬಲ್ಲಹ.

ಭತ್ವಕ್ಕೆ ಪತ್ವಂ—ಭಿಂಡಿವಾಳ—ಪಿಂಡಿವಾಳ.

ಭತ್ವಕ್ಕೆ ವತ್ವಂ—ವೃಷಭ—ಬಸವ.

ರೇಫೆಗೆ ಲತ್ವಂ—ಕುಠಾರ—ಕೊಡಲಿ.

ರೇಫೆಗೆ ಳತ್ವಂ—ಮರೀಚ—ಮೆಳಸು, ಮೆಣಸು.

**ಸೂತ್ರಂ** ॥ ಡತ್ವಂ ಜತ್ವಂ ದ್ವಿತ್ವಾ ।
ದ್ವಿತ್ವ ಧಕಾರಕ್ಕೆ ಯೋಗವಾಹಮನಾಳ್ದಾ ॥
ಷತ್ವಕ್ಕೆ ಡತ್ವ ಟತ್ವಂ ।
ದ್ವಿತ್ವದಿನಕ್ಕುಂ ಟಕಾರಮೊರ್ಮೆದ್ವಿತ್ವಂ ॥ ೨೮೩ ॥

**ವೃತ್ತಿ.**—ದ್ವಿತ್ವಮುಮದ್ವಿತ್ವಮುಮಪ್ಪ ಧಕಾರಕ್ಕೆ ತದನುರೂಪಮಾಗಿ ಡಕಾರಮುಂ ಜಕಾರಮುಮಕ್ಕುಂ; ಆ ಯೋಗವಾಹದ ಷತ್ವಕ್ಕೆ ದ್ವಿತ್ವದ ಡಕಾರಮುಂ ಟಕಾರಮುಮಕ್ಕುಂ; ದ್ವಿತ್ವರಹಿತಮಪ್ಪ ಟತ್ವಮೊರ್ಮೆಯಕ್ಕುಂ.

**ಪ್ರಯೋಗಂ.**—ದ್ವಿತ್ವ ಧಕಾರಕ್ಕೆ ಡಕಾರಂ—ವರ್ಧಕಿ—ಬಡ್ಡಗಿ, ಬಡಗಿ.

ದ್ವಿತ್ವ ಧಕಾರಕ್ಕೆ ಜಕಾರಂ—ಪದ್ಧತಿ — ಪಜ್ಜೆ, ಹಜ್ಜೆ. (ಪದ್ಧತಿಯೆಂಬ ಶಬ್ದದ ತಕಾರಕ್ಕೆ ಲೋಪಮುಂಟು).

ಅದ್ವಿತ್ವ ಧಕಾರಕ್ಕೆ ಜಕಾರಂ—ಧಾತು—ಜಾದು.

ಯೋಗವಾಹ ಷಕಾರಕ್ಕೆ ಡತ್ವಂ —ಕಾಷ್ಠ—ಕಡ್ಡಿ.

ಆ ಷಕಾರಕ್ಕೆ ಟತ್ವಂ—

ಅಂಗುಷ್ಠ—ಉಂಗುಟ್ಟ, ಉಂಗುಟ
ಇಷ್ಟಕಾ—ಇಟ್ಟಗೆ
ಕಷ್ಟ—ಕಟ್ಟ
ಗೋಷ್ಠೀ—ಗೊಟ್ಟಿ
ದುಷ್ಟ—ದುಟ್ಟ
ನಷ್ಟಿ— ಸಟ್ಟೆ
ನಿಷ್ಠಾ—ನಿಟ್ಟೆ
ನಿಷ್ಠುರ—ನಿಟ್ಟುರ
ಪಿಷ್ಟ—ಪಿಟ್ಟು, ಹಿಟ್ಟು
ಮಂಜಿಷ್ಠಕ—ಮಂಜಿಟ್ಟಗೆ, ಮಂಜಿಟಗೆ
ಮುಷ್ಟಿಕಾ — ಮುಟ್ಟಗೆ
ಷಷ್ಠೀ—ಚಟ್ಟಿ
ಸೃಷ್ಟಿ—ಸಿಟ್ಟಿ

ಆ ಷಕಾರಕ್ಕೆ ಅದ್ವಿತ್ವ ಟಕಾರಂ—ಜ್ಯೇಷ್ಠಾ—ಜೇಟಿ; ಪ್ರತಿಷ್ಠಾ—ಹದಿಟೆ, ಪದಿತೆ; ಸೌರಾಷ್ಟ್ರ—ಸೊರಟ.

**ಸೂತ್ರಂ ॥** ವಿದಿತಂ ದಾಡಿಮ ಕೂಷ್ಮಾಂ।
ಡದ ಮತ್ವಸ್ಥಾನದಲ್ಲಿ ಬತ್ವಂ ಕೂಷ್ಮಾಂ॥
ಡದ ಷತ್ವಕ್ಕಂ ಬಿಂದುಗ।
ಮುದಯಿಸುಗುಂ ಲೋಪವೃತ್ತಿ ಲಕ್ಷಣವಿಧಿಯಿಂ ॥ ೨೭೪ ॥

**ವೃತ್ತಿ.**—ದಾಡಿಮ ಕೂಷ್ಮಾಂಡಂಗಳ ಮತ್ವಕ್ಕೆ ಬತ್ವಂ; ಕೂಷ್ಮಾಂಡದ ಷಕಾರಕ್ಕಂ ಬಿಂದುಗಂ ಲೋಪಮಕ್ಕುಂ.

**ಪ್ರಯೋಗಂ.**—ದಾಡಿಮ—ದಾಳಿಂಬ; ಕೂಷ್ಮಾಂಡ—ಕುಂಬಳ.

**ಸೂತ್ರಂ ॥** ಸಮನಿಸುಗುಮಾದಿ ವರ್ಣಾಂ।
ತಿಮದೊಳಮೆರಡನೆಯ ವರ್ಣದಂತಿಮದೊಳಮಾ॥
ಸಮುಚಿತ ಬಿಂದುಸ್ಥಿತಿ ಬಿಂ।
ದುಮಂತ ಶಬ್ದಕ್ಕೆ ಬಿಂದುಲೋಪಂ ಬಹುಳಂ ॥ ೨೭೫ ॥

**ವೃತ್ತಿ.**—ಮೊದಲಕ್ಕರದ ಕಡೆಯೊಳಮೆರಡನೆಯಕ್ಕರದ ಕಡೆಯೊಳ ಮುಚಿತವಾಗಿ ಬಿಂದುವಕ್ಕುಂ; ಬಿಂದುಯುಕ್ತ ಶಬ್ದಂಗಳ್ಗೆ ಬಹುಳದಿಂ ಲೋಪ ಮಕ್ಕುಂ.

**ಪ್ರಯೋಗಂ.**—ಆದ್ಯಕ್ಷರದ ಬಿಂದುವಿಂಗೆ—ಕೂಷ್ಮಾಂಡ—ಕುಂಬಳ; ತಾತ—ತಂದೆ; ಮರ್ಕಟ—ಮಂಕಡ, ಮಕ್ಕಡ; ಮೇಥಿ—ಮೇಂಟಿ.

ದ್ವಿತೀಯಾಕ್ಷರದ ಬಿಂದುವಿಂಗೆ—ಕ್ರಮುಕ—ಕವುಂಗು; ದಾಡಿಮ—ದಾಳಿಂಬ.

ಬಿಂದುಲೋಪಕ್ಕೆ—ಮುಂಜ—ಮೊದೆ; ವಾಂಶ್ಯ—ವಾಸ; ಲಾಂಛನ-ಲಚ್ಛಣ; ಸಂಸ್ಕೃತ—ಸಕ್ಕದ.

ಬಹುಳಮಾಗಿ ಲೋಪಮಿಲ್ಲ— ಅಂಕುಶ— ಅಂಕುಸ ; ಮಂಥನಿ—ಮಂತಣಿ; ಸಂಘಾತ—ಸಂಗಡ.

**ಸೂತ್ರಂ ॥** ಪದದೆರಡನೆಯಕ್ಕರದ।
ತ್ವದೊಳೆತ್ವಂ ಹ್ರಸ್ವದೆತ್ವಮಾತ್ವಕ್ಕೊತ್ವ॥
ಕ್ಕುದಯಿಕುಮುತ್ವಸ್ಥಿತಿ ಬಹು।
ಳದೆ ದೀರ್ಘಂ ಹ್ರಸ್ವಮಾ ತೃತೀಯಾಕ್ಷರಕಂ ॥ ೨೭೬ ॥

ವೃತ್ತಿ.—ಪದದೆರಡನೆಯಕ್ಕರದತ್ವಕ್ಕೈತ್ವಮುಮಾಕಾರಕ್ಕೆ ಹ್ರಸ್ವೈತ್ವಮು ಮೂಕಾರಕ್ಕುತ್ವಮುಮಕ್ಕುಂ; ಆ ದ್ವಿತೀಯಾಕ್ಷರ ದೀರ್ಘಕ್ಕೆ ಹ್ರಸ್ವಮಕ್ಕುಂ; ಆ ತೃತೀಯಾಕ್ಷರಕ್ಕಮಂತೆ.

ಪ್ರಯೋಗಂ.—ಅತ್ವಕ್ಕೈತ್ವಂ—ಉಜ್ಜಯಿನಿ—ಉಜ್ಜೆಣಿ.

ಆತ್ವಕ್ಕೈತ್ವಂ—ರಸಾಯನ—ರಸೆಯನ

ಊಕಾರಕ್ಕುತ್ವಂ—ನಿರೂಪಿಸಿದ(?)—ನಿರವಿಸಿದ.

ದ್ವಿತೀಯಾಕ್ಷರದೀರ್ಘಕ್ಕೆ ಹ್ರಸ್ವಂ—ಅಮಾವಾಸ್ಯಾ—ಅವಸೆ; ಉದ್ಯಾಪನ—ಉಜ್ಜವಣೆ; ತೃತೀಯಾ—ತದಿಗೆ; ದ್ವಿತೀಯಾ—ಬಿದಿಗೆ; ಪ್ರಸಾಧನ—ಪಸದನ; ವಿನಾಯಕ—ಬೆನಕ; ಹಿಂಗೂಲಕ—ಇಂಗುಲಿಕ.

ತೃತೀಯಾಕ್ಷರ ದೀರ್ಘಕ್ಕೆ ಹ್ರಸ್ವಂ—ಉತ್ತರೀಯಕ—ಉತ್ತರಿಗೆ; ವರ್ಧಮಾನ—ಬದ್ದವಣ[1].

ಸೂತ್ರಂ ॥ ವ್ಯವಹರಿಸುಗುಮತ್ವಕ್ಕಿ ।
ತ್ವವಿಧಾನಂ ಹ್ರಸ್ವದೋತ್ವಮುತ್ವಂ ಶಬ್ದ ॥
ಪ್ರವಿದಿತಮಾದುತ್ವಕ್ಕ ।
ತ್ವವೃತ್ತಿ ಮೂಱನೆಯ ವರ್ಣದೊಳ್ ನೆಲೆಗೊಳ್ಗುಂ ॥ ೨೮೭ ॥

ವೃತ್ತಿ.—ಶಬ್ದಂಗಳ ತೃತೀಯಾಕ್ಷರದತ್ವಕ್ಕಿತ್ವಮುಂ ಹ್ರಸ್ವೋತ್ವಮುಂ ಉತ್ವಮುಮಕ್ಕುಂ; ಉತ್ವಕ್ಕುತ್ವಮಕ್ಕುಂ.

ಪ್ರಯೋಗಂ.—ಅತ್ವದ ಇತ್ವಕ್ಕೆ—ಹಿಂಗೂಲಕ—ಇಂಗುಲಿಕ.

ಒತ್ವಕ್ಕೆ—ಸುರಪರ್ಣಿ—ಸುರಹೊನ್ನೆ.

ಉತ್ವಕ್ಕೆ—ಆಲಸ್ಯಕ—ಅಲಸುಗೆ.

ಉತ್ವದತ್ವಕ್ಕೆ—ಕುಸ್ತುಂಬುರು—ಕೊತ್ತುಂಬರಿ

ಸೂತ್ರಂ ॥ ದೊರೆಕೊಳ್ಗುಂ ನಾಲ್ಕನೆಯ ।
ಕ್ಕರದತ್ವಕ್ಕೋತ್ವವೃತ್ತಿ ಶಬ್ದಂಗಳೊಳ್ ॥
ರ್ದೆರಡನೆಯ ಮೂಱನೆಯ ಸಂ ।
ಚರಿಸುವ ನಾಲ್ಕನೆಯ ವರ್ಣಮಕ್ಕುಮಭಾವಂ ॥ ೨೮೮ ॥

1· ಬದ್ದವಣ—ಪಾಡಲ.

ವೃತ್ತಿ.—ನಾಲ್ಕನೆಯಕ್ಕರದತ್ವಕ್ಕೋತ್ವಮಕ್ಕುಂ; ಶಬ್ದಂಗಳೊಳಿರ್ದೆರಡನೆಯ ಮೂರನೆಯ ನಾಲ್ಕನೆಯಕ್ಕರಕ್ಕೆ ಲೋಪಂ.

ಪ್ರಯೋಗಂ.—ಅಕಾರದೋತ್ವಕ್ಕೆ—ಆಟರೂಷಕ—ಆಡಸೋಗೆ.

ದ್ವಿತೀಯಾಕ್ಷರಕ್ಕೆ ಲೋಪಂ—ವ್ಯವಹಾರ—ಬೇಹಾರ.

ತೃತೀಯಾಕ್ಷರಕ್ಕೆ ಲೋಪಂ—ಅಮಾವಾಸ್ಯಾ—ಅವಸೆ; ಆಟರೂಷಕ—ಆಡಸೋಗೆ; ಉಜ್ಜಯಿನಿ—ಉಜ್ಜೆಣಿ; ಪಲ್ಯಯನ—ಹಲ್ಲಣ; ಮರುವಕ—ಮರುಗ, ಮರಗ; ವಿನಾಯಕ—ಬೆನಕ.

ಸಂಸ್ಕೃತ ಪದಕ್ಕಾದಪಭ್ರಂಶದಚ್ಚಗನ್ನಡದ ಸಮಾಸಮಂ ಪೇಟ್ವಿಂ—

ಸೂತ್ರಂ ॥ ಪದನೆರಡುಂ ತದ್ಭವದೊಳ್ ।
ಪುದಿದಿರೆ ಮಾಟ್ಪುದು ಸಮಾಸಮಂ ಪದಯುಗದೊಳ್ ॥
ಪದವೊಂದೇಗೆಯ್ದುಂ ವಿಧಿ ।
ಗೊದವದೆ ನಿಲೆಯುಂ ಸಮಾಸಮುಂಟರೆ ಯೆಡೆಯೊಳ್ ॥ ೨೪೯ ॥

ವೃತ್ತಿ.—ಎರಡು ಪದಂಗಳಪಭ್ರಂಶದೊಳ್ ನಿಲೆ, ಸಮಾಸಮಂ ಮಾಟ್ಪುದು; ಎರಡು ಪದಂಗಳೊಳೊಂದು ಪದನಪಭ್ರಂಶ ಲಕ್ಷಣಕ್ಕೆ ಬಾರದೆ ನಿಜದಿನಿರೆಯುಂ ನಿರ್ದೋಷಮಾಗಿ ಕಿಱಿದೆಡೆಯೊಳ್ ಸಮಾಸಮುಂಟು.

ಪ್ರಯೋಗಂ.—(1) ಎರಡು ಪದಂಗಳಪಭ್ರಂಶಕ್ಕೆ—

| | |
|---|---|
| ಅಚ್ಛ ಸ್ಫಟಿಕ—ಅಚ್ಚವಳಿಕು | ಪ್ರತಿಚ್ಛಂದ—ಪಡಿಚಂದ |
| ಅವನ ಜೇಮನ—ಅವಣ ಜವಣ | ಯಮ ಪುರ—ಜವ ಹುರ |
| ಅಂಕುಶ ಚಾರಣ—ಅಂಕುಸ ಸಾರಣೆ | ರಕ್ಷಾ ಶೃಂಖಲ—ರಕ್ಕ ಸಂಕಲೆ |
| ಆಂದೋಳ ಛತ್ರಿಕಾ—ಅಂದಳ ಸತ್ತಿಗೆ | ವರ್ಣ ಶರ—ಬಣ್ಣ ಸರ |
| ಕರ್ಕಶ ಯೌವನ—ಕಕ್ಕಸ ಜವ್ವನ | ವೀರಶ್ರೀ—ಬೀರ ಸಿರಿ |
| ಕ್ರೂರ ಕರ್ಮಿ—ಕೂಟ್ಕಮ್ಮಿ | ಶಿಲ್ಪಕ ವಿದ್ಯಾ—ಚಿಪ್ಪಿಗ ಬಿಜ್ಜೆ |
| ಖರ ಶಾಣ—ಕರ ಸಾಣೆ | ಶ್ರೀಖಂಡ—ಸಿರಿ ಕಂಡ |
| ದಶ ಶಿರ—ದಸ ಸಿರ | ಷಷ್ಠೀ ಗ್ರಹಣ—ಚಟ್ಟಿ ಗರಣ |
| ದೃಷ್ಟಿ ವಿಷ—ದಿಟ್ಟಿ ಬಿಸ, ದಿಟ್ಟಿ ವಿಸ | ಸರ್ವಲಕ್ಷಣ—ಸಬ್ಬ ಲಕ್ಕಣ |

ಸರ್ವೋಘ ಸನ್ನಾಹ—ಸವಗ ಸನ್ನಣ
ಸರ್ವ ಸನ್ನಾಹ—ಸಬ್ಬ ಸನ್ನಣ
ಸಂಭಾರ ಕಬಳ—ಸಂಬರಗವಳ
ಸ್ಥಾನ ದೀಪಿಕಾ—ತಾಣ ದೀವಿಗೆ
ಸ್ಥಾನ ಭ್ರಷ್ಟ—ತಾಣ ಬಟ್ಟ

(2) ಮೊದಲ ಪದನಪಭ್ರಂಶಕ್ಕೆ ಬಾರದೆ, ಪರಪದಂ ತದ್ಭವವಮಾದ ಸಮಾಸಕ್ಕೆ—

ಉತ್ತರ ದೇಶ—ಉತ್ತರ ದೇಸ
ಕರಣ ಶಾಲಾ—ಕರಣ ಸಾಲೆ
ಜಗವರ್ತಿ—ಜಗವತ್ತಿ
ದಾನ ಶಾಲಾ—ದಾನ ಸಾಲೆ
ಪಟ್ಟ ಶಾಲಾ—ಪಟ್ಟ ಸಾಲೆ
ಪರ ಬ್ರಹ್ಮ—ಪರ ಬೊಮ್ಮ
ಪರಮ ಶ್ರೀ—ಪರಮ ಸಿರಿ
ಪಂಚ ಶರ—ಪಂಚ ಸರ
ಪಾದ ರಕ್ಷಾ—ಪಾದ ರಕ್ಕೆ
ಪಾದ ಶೃಂಖಲಾ—ಪಾದ ಸಂಕಲೆ
ಬಾಹು ವಳಯ—ಬಾಹು ಬಳೆ
ಮಂಗಳ ಪ್ರಸಾಧನ—ಮಂಗಳ ವಸದನ
ವಿಜಯ ಶೇಷಿ—ವಿಜಯ ಸೇಸಿ

(3) ಪೂರ್ವಪದಂ ತದ್ಭವವಮಾದುದರ್ಕೆ—

ಗ್ರಾಮ ರಸ—ಗಾವ ರಸ
ಚತುರ್ದಂತ—ಚೌದಂತ
ತ್ರಿಗುಣ—ತಿಗುಣ
ತ್ರಿಪುರಾಂತಕ—ತಿವುರಾಂತಕ
ತ್ರಿವಳಿ—ತಿವಳಿ
ದಿಶಾ ಬಲಿ—ದೆಸೆ ವಲಿ
ದ್ವಿಗುಣ—ದುಗುಣ
ಪದ ಗತಿ—ಪಯ ಗತಿ
ಪಶು ಪತಿ—ಪಸು ಪತಿ
ಯಮ ದಂಡ—ಜವ ದಂಡ
ಶನಿವಾರ—ಸಣಿವಾರ
ಶೂಲ ಪಾಣಿ—ಸೂಳ ಪಾಣಿ
ಸಂಧಿವಾತ—ಸಂದುವಾತ
ಸ್ವರ ಕರಣ—ಸರ ಕರಣ
ಸ್ವರ ವಾದಿ—ಸರ ವಾದಿ

(4) ಎರಡು ಪದಮುಂ ತದ್ಭವಮನೆಯ್ದುವಲ್ಲಿಯೊಂದು ಪದಮನುಟಿಸಿ ತಪ್ಪಾದುದರ್ಕೆ ಹಂಸರಾಜನ ಪ್ರಯೋಗಂ—

ತರವೇಟ್ಮಾಣಿಕ್ಯಭಂಡಾರದ ಪುಟಕೆಗಳಂ.

ಇಲ್ಲಿ ಮಾಣಿಕ್ಯಶಬ್ದಮನುಟಿದು ಮಾಣಿಕಭಂಡಾರಮೆನೆ ಶುದ್ಧಂ.

ಸೂತ್ರಂ ॥ ಏಕ ದ್ವಿ ತ್ರಿ ಚತುಃ ಶ।
ಬ್ದಾಕೃತಿಗೆಕ್ಕ ದು ತಿ ಚೌಗಳಾದೇಶಂಗಳ್ ॥
ಸ್ವೀಕೃತ ಸಮಾಸ ಪೂರ್ವದೊ।
ಳಾಕರಿಪರ್ ಪ್ರತ್ಯಯಾಂತದೊಳಮಿಾ ವಿಧಿಯಂ ॥ ೨೯೦ ॥

ವೃತ್ತಿ.—ಸಮಾಸದಾದಿಯೊಳಿರ್ದ ಏಕ ದ್ವಿ ತ್ರಿ ಚತುಃ ಶಬ್ದಂಗಳ್ಗೆ ಎಕ್ಕ ದು ತಿ ಚೌ ಎಂಬಿವಾದೇಶಮಪ್ಪುವು; ದ್ವಿ ತ್ರಿ ಚತುಃ ಶಬ್ದಂಗಳ್ ಪ್ರತ್ಯಯಾಂತ ಮಾದೊಡಂ ಈ ಲಕ್ಷಣಮೆ.

ಪ್ರಯೋಗಂ.—ಎಕ್ಕಕ್ಕೆ—ಏಕಪತ್ರ—ಎಕ್ಕವತ್ತಿ; ಏಕಶರ—ಎಕ್ಕಸರ; ಏಕಸ್ಥಲ—ಎಕ್ಕತಳ.

ದುಗೆ—ದ್ವಿಗುಣ—ದುಗುಣ; ದ್ವಿಪಟ್ಟಿಕಾ — ದುವಟ್ಟಿಗೆ, ದೂವಟ್ಟಿಗೆ; ದ್ವಿಶರ—ದುಸರ; ದ್ವಿಹಸ್ತ—ದುಹತ್ತ, ದೂಹತ್ತ.

ತಿಗೆ—ತ್ರಿಗುಣ—ತಿಗುಣ; ತ್ರಿಪದಿ—ತಿವದಿ; ತ್ರಿವಳಿ—ತಿವಳಿ; ತ್ರಿಶರ—ತಿಸರ; ತ್ರಿಶೂಲ—ತಿಸುಳ.

ಚೌಗೆ—ಚತುಃಖಂಡ — ಚೌಕಂಡ; ಚತುರ್ಗ್ರಾಮ — ಚೌಗಾವೆ; ಚತುರ್ದಂತ—ಚೌಜಂತ; ಚತುಃಪಟ್ಟ—ಚೌವಟ್ಟ, ಚೌವಟ; ಚತುಃಪದ—ಚೌಪದ; ಚತುರ್ವೇದಿ—ಚೌವೇದಿ.

ಪ್ರತ್ಯಯಾಂತಕ್ಕೆ—ದ್ವಿಕ—ದುಗ; ತ್ರಿಕ—ತಿಗ; ಚತುಷ್ಕ—ಚೌಕ.

ಸೂತ್ರಂ ॥ ಸಮಸಂದ ಸಹ ಮಹಚ್ಛ।
ಬ್ದಮೆ ಸಾ ಮಾದೇಶದಿಂ ಸಮಾಸಾದಿಯೊಳಂ॥
ತಮರ್ದಿರ್ಕುಂ ಪರಪದ ಪೂ।
ರ್ವಮದುಂ ವ್ಯಂಜನದೊಳೊಂದೆ ಬಹುಳತೆಯಿಂದಂ ॥ ೨೯೧ ॥

ವೃತ್ತಿ.—ವ್ಯಂಜನಂ ಪರಮಾಗೆ, ಸಹ ಮಹಚ್ಛಬ್ದಂಗಳ್ಗೆ ಸಾ ಮಾ ಎಂಬಾದೇಶಂ ಬಹುಳದಿನಕ್ಕುಂ.

ಪ್ರಯೋಗಂ.—ಸಾಗೆ—ಸಹದೇವ—ಸಾದೇವ; ಸಹವಾಸಿ—ಸಾವಾಸಿ.

ಮಾಗೆ-ಮಹಾಕಾಳಿ-ಮಾಕಾಳಿ; ಮಹಾಜನ—ಮಾಜನ; ಮಹಾ ದಾನಿ—ಮಾದಾನಿ; ಮಹಾ ದೇವ-ಮಾದೇವ; ಮಹಾ ಪಥ-ಮಾಪತ; ಮಹಾ ಪಾತಕ-

ಮಾಪಾತಕ; ಮಹಾ ಪುರುಷ—ಮಾಪುರುಷ; ಮಹಾಸಾಮಂತ—ಮಾಸಾವಂತ; ಮಹಾ ಲಕ್ಷ್ಮೀ—ಮಾಲಕುಮಿ.

ಕೆಲವೆಡೆಯೊಳಿಲ್ಲ—ಮಹಾ ಗಜ; ಮಹಾ ಗಿರಿ; ಮಹಾ ಸೈನ್ಯ.

ಸಹ ಜಾತ; ಸಹ ಧರ್ಮಿ; ಸಹ ಭೋಜಿ.

ಸೂತ್ರಂ ॥ ಪರದೊಳ್ ಪ ಬ ಮಂಗಳ್ ನೆಲ।
ಸಿರೆ ವತ್ವಂ ಪೀನಮಾ ಪಕಾರಮದೂತ್ವಂ ॥
ಬೆರಸಿರೆ ತಾಂ ಹ್ರಸ್ವತೆಯಂ।
ತರೆಂಬ ಶಬ್ದಾಂತರೇಫೆಗಕ್ಕುಂ ಲೋಪಂ ॥ ೫೨ ॥

ವೃತ್ತಿ.—ಪರಪದದ ಮೊದಲೊಳ್ ಪಕಾರ ಬಕಾರ ಮಕಾರಂಗಳಿರೆ ವತ್ವಮಕ್ಕುಂ; ಆ ಪಕಾರದೂತ್ವಕ್ಕೆ ಹ್ರಸ್ವಮುಪ್ಪುಕಾರಮಕ್ಕುಂ; ಅಂತರ್ ಶಬ್ದದ ಕಡೆಯ ರೇಫೆಗೆ ಲೋಪಮಕ್ಕುಂ.

ಪ್ರಯೋಗಂ.—

ಚಂದ್ರ ಪುರ—ಚಂದವುರ
ಪಂಜರ ಪಕ್ಷಿ—ಹಂಜರವಕ್ಕಿ
ಪಾದ ಪಟ್ಟ—ಪಾಯವಟ್ಟ
ಪಾದಪಾಶ—ಪಾದವಾಸ
ಯೋಗ ಪಾದುಕಾ—ಜೋಗ ವಾವುಗೆ
ರತ್ನ ಪಟ್ಟಿಕಾ—ರನ್ನವಟ್ಟಗೆ
ರಾಕ್ಷಸ ಪ್ರಕರಣ—ರಕ್ಕಸವಗರಣ
ಮಾನುಷ ಪುಸ್ತಕ—ಮಾನಸವೊತ್ತಗೆ
ಸಂಘಾತ ಪ್ರೇಕ್ಷಣ—ಸಂಗಡವೆಗ್ಗಣ, ಸಂಗಡವೆಕ್ಕಣ
ಸಂಸ್ಥಾ ಪತ್ತನ—ಸಂತೆವಟ್ಟಣ
ಹಂಸ ಪಿಂಡ—ಅಂಚೆವಿಂಡು

ಬಕಾರಕ್ಕೆ ವಕಾರಂ—ದಿಶಾ ಬಲಿ—ದೆಸೆವಲಿ; ಶರ ಬಂಧ—ಸರವಂದ; ಶೃಂಖಲಾ ಬಂಧ—ಸಂಕಲೆವಂದ.

ಮಕಾರಕ್ಕೆ ವತ್ವಂ—ದೇವ ಮಾನುಷ—ದೇವವಾನಸ; ಯಮಳ ಮರ್ದಳ—ಜವಳಿವದ್ದಳೆ; ರತ್ನ ಮಣಿ—ರನ್ನವಣಿ.

ಆ ಪತ್ವದ ಊತ್ವಕ್ಕುತ್ವಂ—ಕರ್ಣಪೂರ—ಕನ್ನವುರ; ವರ್ಣಪೂರ—ಬಂಣವುರ.

ರೇಫಲೋಪಕ್ಕೆ—ಅಂತಃಪುರ—ಅಂತವುರ

ಪೀನಗ್ರಹಣದಿಂದೆ ಕೆಲವಱೊಳ್ ವತ್ವವಿಲ್ಲ—

| | |
|---|---|
| ಅಚ್ಛ ಮಲ್ಲಿಕಾ—ಅಚ್ಚ ಮಲ್ಲಿಗೆ | ನಿರ್ಬುದ್ಧಿ—ನಿಬುದ್ಧಿ |
| ಅಕ್ಷರ ಮಾಲಾ—ಅಕ್ಕರ ಮಾಲೆ | ಪತಿವ್ರತಾ—ಹದಿಬದೆ, ಹದಿಬತೆ |
| ಕಾಂಡ ಪಟ—ಕಂಡ ಪಟ | ವಲ್ಲಿಮಾಟ—ಬಳ್ಳಿಮಾಡ |
| ಗೂರ್ಜರ ಪಟ್ಟ—ಗುಜ್ಜರ ಪಟ್ಟ | ಶಂಕರ ಪ್ರಸಾದಿತ—ಸಂಕರ ಪಸಾಯಿತ |
| ನಿರ್ಬಂಧಿಕ—ನಿಬ್ಬಂದಿಗ | |

ಸೂತ್ರಂ ॥ ಉದಯಿಪುದು ತೃತೀಯತೆ ಪೂ।
ರ್ವದ ಸೂತ್ರವಿಧಾನದಿಂದೆ ಕ ತ ಪಕ್ಕೆ ತಗು ॥
ಳ್ವುದು ದೀರ್ಘಂ ಪೂರ್ವಪದಾಂ।
ತ್ಯದೊಳುತ್ತರ ಪದದ ಮೊದಲೊಳೊದವಿರೆ ಲೋಪಂ ॥ ೨೯೩ ॥

ವೃತ್ತಿ.—ಪೂರ್ವೋಕ್ತ ಸೂತ್ರದಿಂ ಪರದ ಕ ತ ಪಕ್ಕೆ ತೃತೀಯತೆಯಕ್ಕುಂ; ಪೂರ್ವಪದಾಂತ್ಯಕ್ಕೆ ದೀರ್ಘಮುಮುತ್ತರ ಪದದಾದಿಗೆ ಲೋಪಮುಮಕ್ಕುಂ.

ಪ್ರಯೋಗಂ.— ಕಕಾರ ತೃತೀಯತೆಗೆ — ಕರ್ಪೂರ ಕರಂಡಕ — ಕಪ್ಪುರ ಗರಡಗೆ; ಕಾಶಾ ಕರ್ಪಟ—ಕಾಸಿಗಪ್ಪಡ, ಕಸೆಗಪ್ಪಡ; ಮಾನುಷ ಕಾವ್ಯ—ಮಾನಸಗಬ್ಬ; ರತ್ನ ಕಂಬಳ — ರನ್ನಗಂಬಳಿ; ಸಂಭಾರ ಕಬಳ — ಸಂಬರ ಗವಳ.

ತಕಾರ ತೃತೀಯತೆಗೆ —ಅಚ್ಛ ತುವರಿ — ಅಚ್ಚದೊವರಿ, ಅಚ್ಚದೊಗರಿ; ಕಾಕ ತುಂಡಿ—ಕಾಗೆದೊಂಡೆ; ಖದಿರ ತಾಂಬೂಲ—ಕೈರದಂಬುಲ; ಮಾಲಾ ತೋರಣ—ಮಾಲೆದೋರಣ; ಸಂಘಾತ ತಾಳ—ಸಂಗಡದಾಳ.

ಪಕಾರ ತೃತೀಯತೆಯಂ ಪ್ರಯೋಗದೊಳ್ ನೋಡಿಕೊಳ್ವುದು.

ಪೂರ್ವಪದಾಂತ್ಯಕ್ಕೆ ದೀರ್ಘಮುಂ ಉತ್ತರ ಪದಾದಿಗೆ ಲೋಪಮುಮಾಗಿ— ಕಾಂಸ್ಯತಾಳ—ಕಂಸಾಳ; ಧರ್ಮಪಾನೀಯ—ದವ್ಮಾಣಿ—ಎಂದಾಯ್ತು.

ಸೂತ್ರಂ ॥ ಪರಪದದಾದಿಗೆ ಲೋಪಂ।
ದೊರೆಕೊಳ್ಗುಂ ಕೆಲವಱಲ್ಲಿ ಪೂರ್ವಪದಾಂತ್ಯ ॥
ಕ್ಕಿರದಕ್ಕುಂ ಲೋಪಂ ವ್ಯವ।
ಹರಿಪ ಸಮಾಸಂಗಳಲ್ಲಿ ಕೆಲಕೆಲವೆಡೆಯೊಳ್ ॥ ೨೯೪ ॥

ವೃತ್ತಿ.–ಸಮಾಸದೊಳುತ್ತರಪದದಾದಿಗೆ ಕೆಲವೆಡೆಯೊಳ್ ಲೋಪಮಕ್ಕುಂ; ಪೂರ್ವಪದಾಂತ್ಯಕ್ಕೆ ಕೆಲವಱೊಳ್ ಲೋಪಮಕ್ಕುಂ.

ಪ್ರಯೋಗಂ.— ಉತ್ತರಪದಾದಿಯ ಲೋಪಕ್ಕೆ — ಚರ್ಮಪಟ್ಟಿಕಾ — ಚಮ್ಮಟ್ಟಿಗೆ, ಸಮಟಿಗೆಯೆನಲುಮಕ್ಕುಂ.

ಪೂರ್ವಪದಾಂತ್ಯಲೋಪಕ್ಕೆ— ದೇವಕುಲ — ದೇಗುಲ ; ದೇಶ ಶಾಖಾ— ದೇಸಾಕೆ; ಸೂಚಿ ಯಾನ—ಸೂಯಾಣ.

ಸೂತ್ರಂ ॥ ಆವಗಮಾಕಾರಾಗಾ ।
ರಾವಳಿಕೆಗಳಿವು ಸಮಾಸದುತ್ತರಪದನಾ ॥
ಗಾವರಿಸಿರ್ಕುಂ ಲೋಪಂ ।
ಭಾವಿಪೊಡೆರಡನೆಯ ವರ್ಣದೊಳಮಾದಿಯೊಳಂ ॥ ೨೫೫ ॥

ವೃತ್ತಿ.—ಆಕಾರ ಆಗಾರ ಆವಳಿಕಾ ಶಬ್ದಂಗಳ್ ಪರಮಾಗೆ, ತಮ್ಮೆರಡನೆಯಕ್ಕರದೊಳಂ ಆದಿಯಕ್ಕರದೊಳಂ ಲೋಪಂ.

ಪ್ರಯೋಗಂ.—ಆಕಾರಕ್ಕೆ—ಚಿತ್ರಾಕಾರ—ಚಿತ್ತಾರ; ರೂಪಾಕಾರ— ರೂಪಾರ.

ಆಗಾರಕ್ಕೆ–ಕ್ಷೀರಾಗಾರ–ಕೀಱಾರ, ಕೀಲಾರ; ಕೋಷ್ಠಾಗಾರ–ಕೊಟ್ಟಾರ; ಗೂಢಾಗಾರ—ಗೂಡಾರ; ದೇವಾಗಾರ— ದೇವಾರ; ಧವಳಾಗಾರ—ಧವಳಾರ; ಭಾಂಡಾಗಾರ—ಭಂಡಾರ.

ಆವಳಿಕೆಗೆ—ದೀಪಾವಳಿಕಾ—ದೀಪಾಳಿಗೆ; ಆದಿಯಕ್ಕರಂ ಲೋಪಮಾಗಿ. ದೀವಳಿಗೆ ಎಂದಾಯ್ತು. ಸಿಂಹಾಗಾರ, ಕಾರಾಗಾರಮೆಂಬ ಶಬ್ದಂಗಳ್ಗೆ ಬಹುಳದಿನೀ ಲಕ್ಷಣಮಿಲ್ಲ.

ಸೂತ್ರಂ ॥ ದರ ದಾರ ಬಾರಮಕ್ಕುಂ ।
ಪರದಾ ದ್ವಾರಕ್ಕೆ ಪೂರ್ವದೊಳ್ ತದ್ಭವಮಾ ॥
ಗಿರೆ ಸಿರಿಯ ವಂಕ ಪಾಣಿಯ ।
ಮಿರೆ ಕಂಟೆಯುಮುಚಿತವಿಧಿ ವಿಕಲ್ಪ ವಿಧಾನಂ ॥ ೨೫೬ ॥

ವೃತ್ತಿ.—ಶ್ರೀ ವಕ್ರ ಪಾನೀಯ ಕಂಟಕಮೆಂಬಿವರ್ಕಾದ ಸಿರಿಯ ವಂಕ ಪಾಣಿಯ ಕಂಟೆಯುಂಗಳ್ ಮೊದಲೊಳಿರೆ, ಪರದ ದ್ವಾರಶಬ್ದಕ್ಕೆ ದರಮೆಂದುಂ

ದಾರಮೆಂದುಂ ಬಾರಮೆಂದುಮಕ್ಕುಂ; ಇವಱೊಳ್ ವಿಕಲ್ಪಮನುಚಿತಮಾಗಱಿವುದು.

**ಪ್ರಯೋಗಂ.**—ಶ್ರೀದ್ವಾರ—ಸಿರಿಯದರ, ಸಿರಿಯದಾರ, ಸಿರಿಯಬಾರ. ವಕ್ರದ್ವಾರ—ವಂಕದರ, ವಂಕದಾರ, ವಂಕಬಾರ.

ಪಾನೀಯದ್ವಾರ — ಪಾಣಿಯಬಾರ; ಕಂಟಕದ್ವಾರ — ಕಂಟಿಯಬಾರ: ಈ ಎರಡು ಸಮಾಸಪದಕ್ಕಮುಚಿತವಿಧಿಯಿಂ ವಿಕಲ್ಪಮಿಲ್ಲ.

ಇಲ್ಲಿಂದಂ ಮೇಲೆ ತತ್ಸಮಕ್ಕೆ ಸೂತ್ರಂ

**ಸೂತ್ರಂ** ॥ ಮಣಿ ಮಂಚಂ ಪಟ್ಟಂ ತೋ।
ರಣಮಟ್ಟಂ ಗೋಣಿ ಸಬಳಮಂಕಂ ಲತೆ ಕಂ॥
ಕಣಮೆಸೆವ ಕೋಂಟೆ ಬಲಮಂ।
ಗಣಂ ಬಿಲಂ ಬಂದಿ ಮಾಲೆ ಗಾಳಂ ಗಂಡಂ ॥ ೨೯೭ ॥

ಗಲ್ಲಂ ಮಲ್ಲಂ ತಳಮಿಂ।
ತೆಲ್ಲಂ ತತ್ಸಮಮುಮಿವಱುದಾಹರಣೆಗಳಂ॥
ಸೊಲ್ಲಿಸುವೆನೆರಡು ಮೆಯ್ಗಂ।
ಬಲ್ಲರ್ಗಳ್ ಮೆಚ್ಚುತಿರೆ ಸಮಾಸೋಕ್ತಿಗಳಿಂ ॥ ೨೯೮ ॥

**ವೃತ್ತಿ.**—ಈ ಶಬ್ದಂಗಳ್ ಸಂಸ್ಕೃತಕ್ಕಂ ಕನ್ನಡಕ್ಕಂ ಸರಿ; ಇವಱುದಾಹರಣಂಗಳಂ ಸಮಾಸೋಕ್ತಿಯಿಂ ಸಂಸ್ಕೃತ ಕರ್ಣಾಟಕಂಗಳೊಳ್, ಬಲ್ಲರ್ ಮೆಚ್ಚೆ, ತೋಱಿದಪೆಂ.

**ಪ್ರಯೋಗಂ.** — ಮಣಿಗೆ — ಮಕುಟ ಮಣಿ, ದಿನ ಮಣಿ, ಉಡೆವಣಿ, ಕೆಲವಣಿ.

ಮಂಚಕ್ಕೆ—ಕಾಂಚನ ಮಂಚ, ತೂಗು ಮಂಚ, ರತ್ನ ಮಂಚ, ಸೆಳೆ ಮಂಚ.

ಪಟ್ಟಕ್ಕೆ—ಪಟ್ಟ ಗರ್ದುಗೆ, ಪಟ್ಟ ಗೊಱೆ, ಪಟ್ಟ ಮಹಿಷಿ, ಪಟ್ಟವಣೆ, ಪಟ್ಟ ವರ್ಧನ, ಪಟ್ಟ ಶರ.

ತೋರಣಕ್ಕೆ — ಕಾಂಸ್ಯ ತೋರಣ, ತಳಿರ್ದೋರಣ, ಪಚ್ಚೆದೋರಣ, ಮಕರ ತೋರಣ.

ಅಟ್ಟಕ್ಕೆ—ಅಟ್ಟಗವಲ್, ಅಟ್ಟವಡಿ, ಅಟ್ಟಹಾಸ.

ಗೋಣಿಗೆ—ಕಿಱು ಗೋಣಿ, ಗೋಣಿಕಾ ಪುತ್ರ, ಪೆರ್ಗೋಣಿ.

ಸಬಳಕ್ಕೆ—ಸಬಳ ಗದ್ಯಾಣ, ಸಬಳ ತ್ರಿಣೇತ್ರ, ಸಬಳದೆಱೆ, ಸಬಳ ವಿಂನಣಿ, ಸಬಳ ಸಹಸ್ರಬಾಹು.

ಅಂಕಕ್ಕೆ—ಅಂಕವಱೆ, ಅಂಕವಾತು, ಕಟ್ಟಂಕ, ಮಾಱಂಕ, ಮೃಗಾಂಕ, ವೃಷಾಂಕ.

ಲತೆಗೆ—ಎಳ ಲತೆ, ನವ ಲತೆ, ಲತೆವನೆ, ಲತೆವಳ್ಳಿ.

ಕಂಕಣಕ್ಕೆ—ಗುಬ್ಬಿ ಗಂಕಣ, ಮಣಿ ಕಂಕಣ, ಹಸ್ತ ಕಂಕಣ, ಹಿಂಡು ಗಂಕಣ.

ಕೋಂಟೆಗೆ—ತಟಿಗೋಂಟೆ, ಧೂಳಿ ಕೋಂಟೆ, ಹತ್ತುಗೋಂಟೆ, ಹೆಡಗೆ ಗೋಂಟೆ (ಹೆಡೆಗೆಗೋಂಟೆ, ಹೆಡೆ—, ಹೆಡ—).

ಬಲಕ್ಕೆ—ಆಳ್ವಲ (ಆಳ್ಬಲ), ತೋಳ್ವಲ (ತೋಳ್ಬಲ), ನೆಲವಲ, ಪೆರ್ವಲ, ಭುಜಬಲ, ಭೂಬಲ, ಮಾರ್ವಲ.

ಅಂಗಣಕ್ಕೆ—ಅಂಗಣ ವಲಯ, ಅಂಗಣವಾವಿ, ಅಂಗಣವೆಟ್ಟು (ಅಂಗಣ ವೆಟ್ಟ). ಅಂಕಣಶಬ್ದಕ್ಕಂಗಣಮಾದುದಾಗಿ ತತ್ಸಮುಮಾಗಲಾರ್ಪುದು.

ಬಿಲಕ್ಕೆ—ಬಿಲ ದ್ವಾರ, ಬಿಲ ಸರ್ಗ (ಬಿಲ ಸಗ್ಗ), ಪೆರ್ಬಿಲ.

ಬಂದಿಗೆ— ಬಂದಿ ಗ್ರಹಣ, ಬಲ್ವಂದಿಕಾಱ. ಬಲ್ವಂದಿಕಾಱನ ಪೋಲ್ ಹಿಂಡೊಡೆದೊಂದೆ (ಹಿಂಡೊಡೆದಂತೆ) ಪೋಯ್ತು. ಬಂದಿವಿಡಿದಂ ಬಿಂಬಾಧರ ಸ್ಥಾನಮಂ.

ಮಾಲೆಗೆ—ಕಂಠ ಮಾಲೆ, ಪಚ್ಚೆ ಮಾಲೆ, ಪೂ ಮಾಲೆ, ವನ ಮಾಲೆ.

ಗಾಳಕ್ಕೆ—ಎಡೆ ಗಾಳ, ಗಳ ಗಾಳ, ಸಂಣ ಗಾಳ.

ಗಂಡಕ್ಕೆ—ಗಂಡ ಗಲಿ, ಗಂಡ ಗರ್ವ, ಗಂಡ ಗುಣ, ಗಂಡ ಪೆಂಡಿರ್, ಗಂಡ ವರಿಜು, ಗಂಡ ವಸದನ (ಗಂಡ ವಸನ).

ಗಲ್ಲಕ್ಕೆ—ಗಲ್ಲಗಿವಿ, ಗಲ್ಲ ಗುಗ್ಗುರಿ, ಗಲ್ಲ ಮುಗುರಿ, ಗಲ್ಲಸ್ಥಳಂ, ತೆಳ್ಗಲ್ಲ.

ಮಲ್ಲಿ—ಮಲ್ಲಗಾಳಿಗ (ಮಲ್ಲಗಾಳಗ), ಮಲ್ಲ ಮುರಾಂತಕ, ಮಲ್ಲವಾತು.

ತಳಕ್ಕೆ–ಕರ ತಳ, ಕೆಂದಳ, ತಟ್ಟ ತಳ, ತಳ ಹಗ್ಗ, ಧರಣೀ ತಳ–ಎಂಬಂತೆ.

**ಸೂತ್ರಂ** ॥ ಸಕ್ಕದಮಂ ಮಱಿಗೊಳ್ಳದೆ ।
ಚೊಕ್ಕಳಿಕೆಯಿನಚ್ಚಗನ್ನಡಂ ಪೇೞ್ವಿರ ಕ ॥
ಯ್ವೊಕ್ಕ ನಿಧಿಯೆನಿಸಪಭ್ರಂ ।
ಶಕ್ಕಂ ದೇಶೀಯ ಪದಕಮುಂಟು ಸಮಾಸಂ ॥ ೨೯ ॥

**ವೃತ್ತಿ.**—ಸಂಸ್ಕೃತಮಂ ಮಱಿಗೊಳ್ಳದೆ ನೆಱಿವಣೆಯಿಂದಚ್ಚಗನ್ನಡಮಂ ಪೇೞ್ವರ್ಗೀಯಪಭ್ರಂಶಪದಮುಂ ಇವಱ ಸಮಾಸಮುಂ ತತ್ಸಮದ ಸಮಾಸಮುಂ ಕಯ್ವೊಕ್ಕ ನಿಧಾನಮಿದಱೊಡನೆ ಕನ್ನಡದ ದೇಶೀಯ ಪದಮುಂ ಸಮಾಸಿಸಲಪ್ಪುದು.

**ಪ್ರಯೋಗಂ.**—ಅಪಭ್ರಂಶಕ್ಕಂ ದೇಶೀಯ ಪದಕ್ಕಂ ಸಮಾಸಂ—ರಾಯಗೋಟೆ, ಸಿಂಗವೇಂಟೆ, ಸೆಜ್ಜೆವನೆ.

ಅಪಭ್ರಂಶ ಸಮಾಸಕ್ಕಂ ದೇಶೀಯ ಪದಕ್ಕಂ ಸಮಾಸಂ—ಜವಳಿವಟ್ಟೆ ದೊಂಗಲ್; ಜೊನ್ನವಕ್ಕಿಗಣ್ಗಳ್; ತಾಣದೀವಿಗೆ ವೆಳಗು.

ತತ್ಸಮ ಸಮಾಸಕ್ಕಂ ದೇಶೀಯ ಪದಕ್ಕಂ ಸಮಾಸಂ—ಕಟ್ಟಂಕದಲ್ಲಣಂ; ಪೂಮಾಲೆದುಱುಂಬು; ಸಬಳಗದ್ಯಾಣದೆಱೆ.

ಇದು ಸಮಸ್ತ ಶಾಬ್ದಿಕಜನ ಮನೋಜನಿತ ಶಬ್ದ ಸಂದೇಹಶಲ್ಯ
ಚಾರು ಚುಂಬಕಾಯಮಾನಾನೂನ ಕರ್ಣಾಟಕ ಲಕ್ಷಣ
ಶಿಕ್ಷಾಚಾರ್ಯ ಸುಕವಿ ಕೇಶಿರಾಜ ವಿರಚಿತ
ಮಪ್ಪ ಶಬ್ದ ಮಣಿದರ್ಪಣದೊಳ್
ಅಪಭ್ರಂಶ ಪ್ರಪಂಚಲಕ್ಷಣ ಮೆಂಬ
ಸಪ್ತಮಮಪ್ಪ ಸಂಧಿ
ಸಮಾಪ್ತಂ.

## ಎಂಟನೆಯ ಸಂಧಿ

---

## ಅವ್ಯಯ ಪ್ರಕರಣಂ

**ಸೂತ್ರಂ** ॥ ಅನುಕೃತಿ ಪದವೊದವೆಯುಮದು ।
ವನೆಯೆಂಬೆರಡುಂ ಪದಾಂತ್ಯದೊಳ್ ಬರೆಯುಂ ನೆ ॥
ಟ್ಟನೆ ತಾವವ್ಯಯಮಪ್ಪುವು ।
ವನೆಯ ನಕಾರಂ ವಿಕಲ್ಪದಿಂದೆ ಗಕಾರಂ ॥ ೩೦೦ ॥

**ವೃತ್ತಿ.**—ಧಿಗಿಲನೆ, ಭುಗಿಲನೆ, ಭೋರನೆ ಎಂಬನುಕರಣ ಪದಂಗಳ್ ಬರೆಯುಂ, ಅದು ಅನೆ ಎಂಬಿವು ಪದಾಂತಂಗಳೊಳಿರೆಯುಂ, ಅವ್ಯಯ ಪದಂಗಳಪ್ಪುವು.

**ಪ್ರಯೋಗಂ.**—ಅದುಗೆ—ನೂಂಕದು (ನೂಕದು), ನೂಳದು, ತೆತ್ತದು[1] (ತೆಕ್ಕದು).

ಅನೆಗೆ—ಕಂಮನೆ, ಇಂಮನೆ, ಸಿಯ್ಯನೆ, ಮೆಲ್ಲನೆ.

ನಕಾರಕ್ಕೆ ವಿಕಲ್ಪದಿಂ ಗಕಾರಂ—ನೆಟ್ಟನೆ, ನೆಟ್ಟಗೆ; ಸುಮ್ಮನೆ, ಸುಮ್ಮಗೆ; ಕಮ್ಮನೆ, ಕಮ್ಮಗೆ; ಬಿನ್ನನೆ, ಬಿನ್ನಗೆ.

**ಸೂತ್ರಂ** ॥ ಸೊಲ್ಲೊಳ್ ಕ್ರಿಯಾತ್ಮಕಾವ್ಯಯ ।
ಮಿಲ್ಲೆಂಬುದು ಕೇಱಿದೆಂಬುದಾಕೀರ್ಣಾರ್ಥಂ ॥
ಬಲ್ಲರ್ಗೆ ನಿರ್ನಿಮಿತ್ತಾ ।
ರ್ಥೋಲ್ಲಸಿತಂ ನಿರ್ನಿರೆಂ[2]ಬುದುಂ ನಿರ್ನೆರಮುಂ ॥ ೩೦೧ ॥

* **ವೃತ್ತಿ.**—ವಾಕ್ಯದೊಳ್ ಇಲ್ಲ ಎಂಬುದು(ಪ್ರತಿಷೇಧ)ಕ್ರಿಯಾತ್ಮಕಾವ್ಯಯಮೆನಿಸುಗುಂ. ಕೇಱಿದೆಂಬುದು ತುಱುಗಿದರ್ಥದೊಳಂ, ನಿರ್ನಿರ್, ನಿರ್ನೆರಂ ಎಂಬಿವು ನಿರ್ನಿಮಿತ್ತಾರ್ಥದೊಳಂ ವರ್ತಿಸುಗುಂ.

---

1. ತೆತ್ತದು=ತೀರದು. 2. ನೆರ್ನೆರ್. ಕ. ೩.

* ಈ ಪ್ರಕರಣದಲ್ಲಿ ನಕ್ಷತ್ರಚಿಹ್ನೆ ಹಾಕಿರುವ ವೃತ್ತಿಗಳು ಕ. ಸಾ. ಪ. ನ ಸಂಪಾದಕರು ಬರೆದುವು.

ಸೂತ್ರಂ ॥ ನೆಗಟ್ಟಿಂ ಮೌನಾರ್ಥಂ ಸುಂ ।
ಮಗೆ ಸುಂಮನೆಯುಸಿಕನೆಂದು ನುಡಿವವ್ಯಯದೊಳ್ ॥
ಪುಗುಗುಂ ಗುಜುಗುಂಮಗೆ ಬಿಂ ।
ನಗೆ ಬಿಂನನೆಯೆನಲೊಡಂ ಕ್ರಿಯಾಶೂನ್ಯಾರ್ಥಂ ॥ ೩೦೨ ॥

* ವೃತ್ತಿ.—ಮೌನಾರ್ಥದೊಳ್ ಸುಂಮಗೆ, ಸುಂಮನೆ, ಉಸಿಕಂ ಎಂಬವ್ಯಯಮಂ ಪೇೞಲಕ್ಕುಂ; ಕ್ರಿಯಾಶೂನ್ಯಾರ್ಥದೊಳ್ ಗುಜುಗುಂಮಗೆ, ಬಿಂನಗೆ, ಬಿಂನನೆ ಎಂಬವ್ಯಯಮಂ ಪೇೞಲಕ್ಕುಂ.

ಸೂತ್ರಂ ॥ ಆನುಮೆನಿಪ್ಪವ್ಯಯಮಂ ।
ಸ್ಥಾನ ದಿಶಾ ಕಾಲ ಸಂಖ್ಯೆಗಳೊಳುಸಿರ್ವರ್ ಮ ॥
ತ್ತೇನುಮೆನಿಪ್ಪರ್ಥಮನಿರ ।
ದಾನಿಪರಣಮಾಣಮೆಂದು ನುಡಿವವ್ಯಯದೊಳ್ ॥ ೩೦೩ ॥

* ವೃತ್ತಿ.—ಸ್ಥಾನ ದೆಸೆ ಕಾಲ ಸಂಖ್ಯೆಗಳಲ್ಲಿ ಆನುಂ ಎಂಬವ್ಯಯಮಂ ಪೇೞಲಕ್ಕುಂ; ಏನುಮೆಂಬರ್ಥದೊಳ್ ಅಣಂ ಆಣಂ ಎಂಬವ್ಯಯಮಂ ಪೇೞಲಕ್ಕುಂ.

ಪ್ರಯೋಗಂ.—ಸ್ಥಾನಕ್ಕೆ—ಎಲ್ಲಿಯಾನುಂ.

ದೆಸೆಗೆ—ಎತ್ತಾನುಂ.

ಕಾಲಕ್ಕೆ—ಎಂದಾನುಂ.

ಸಂಖ್ಯೆಗೆ—ಒಂದಾನುಂ, ಎರಡಾನುಂ, ಪತ್ತಾನುಂ, ನೂಱಾನುಂ.

ಅಣಕ್ಕೆ—ಕಾರ್ಯಮಣಮಿಲ್ಲ.

ಆಣಕ್ಕೆ—ಗುಣಮಾಣಮಿಲ್ಲ (=ಏನುಮಿಲ್ಲೆಂಬರ್ಥಂ).

ಸೂತ್ರಂ ॥ ನಾಡೆಯೆಡೆಯಾವಗಂ ನೆಱೆ ।
ನೀಡುಂ ಕರಮಾದಮೆಯ್ದೆ ನೂಳದು ಪಿರಿದುಂ ॥
ನೀಡು ಮಿಗೆ ಕೆಂನಮೆಲ್ಲಂ ।
ರೂಢಿಯನುಳ್ಳುದುಮಿವವ್ಯಯದೊಳಧಿಕಾರ್ಥಂ ॥ ೩೦೪ ॥

* ವೃತ್ತಿ.—ನಾಡೆ, ಎಡೆ, ಆವಗಂ, ನೆಱೆ, ನೀಡುಂ, ಕರಂ, ಆದಂ, ಎಯ್ದೆ, ನೂಳದು, ಪಿರಿದುಂ, ನೀಡು, ಮಿಗೆ, ಕೆಂನಂ—ಇವು ಅಧಿಕಾರ್ಥಬೋಧಕಾವ್ಯಯಂಗಳ್.

**ಸೂತ್ರಂ** ॥ ಭೋಂಕನೆ ಚೆಕ್ಕನೆ ಭೋರನೆ।
ಭೋಂಕಲ್ ಚಡುಪುಡನೆ ಗಿಱ್ರತಿಱ್ರನೆಯುಂ ಮ ॥
ತ್ತಂ ಕಡು ಜಿಚ್ಚರ ಬೆಚ್ಚರ।
ಮುಂ ಕೂಡಿರೆ ತಂಮೊಳೊದವುಗುಂ ಶೀಘ್ರಾರ್ಥಂ ॥ ೩೦೫ ॥

* **ವೃತ್ತಿ.**—ಭೋಂಕನೆ, ಚೆಕ್ಕನೆ, ಭೋರನೆ, ಭೋಂಕಲ್, ಚಡುಪುಡನೆ, ಗಿಱ್ರತಿಱ್ರನೆ, ಕಡು, ಜಿಚ್ಚರಂ, ಬೆಚ್ಚರಂ—ಈ ಅವ್ಯಯಂಗಳ್ ಶೀಘ್ರಾರ್ಥ ಬೋಧಕಂಗಳ್

**ಸೂತ್ರಂ** ॥ ಏಗಂ ವಲಂ ವೆಱಂ ದಲ್ ।
ತಾಗುಗುಮತಿನಿಶ್ಚಯಾರ್ಥಮಂ ತಾನಿತರಾ ।
ರ್ಥಾಗತಮದು ಮತ್ತಿನ ನುಡಿ ।
ಯೋಗೆಯ್ದುಂ ಬೇಱೆ ಬೇಱೆಯೆನೆ ಪೃಥಗರ್ಥಂ ॥ ೩೦೬ ॥

* **ವೃತ್ತಿ.**— ಏಗಂ, ವಲಂ, ವೆಱಂ, ದಲ್—ಎಂಬವ್ಯಯಂಗಳತಿ ನಿಶ್ಚಯಾರ್ಥಮಂ ನುಡಿಗುಂ; ಮತ್ತಿನ ಎಂಬುದು ಅನ್ಯಾರ್ಥದೊಳಂ, ಬೇಱೆ ಬೇಱೆ ಎಂಬುದು ಪೃಥಗರ್ಥದೊಳಂ ವರ್ತಿಸುಗುಂ.

**ಸೂತ್ರಂ** ॥ ಅನುತಿಱ್ರನೆ ತಿಟ್ಟನೆ ಬ ।
ಟ್ಟನೆಯೆಂಬಿವಱೊಳ್ ಭ್ರಮಾರ್ಥಮೊಯ್ಕನೆಯೆನೆ ನೆ ॥
ಟ್ಟನೆಯೆನೆ ನೆಟ್ಟಗೆಯೆನೆ ಬಂ ।
ದು ನಿಲ್ಕುಮಿವಱೊಳ್ ಪರಿಸ್ಫುಟಾರ್ಥ ವಿಧಾನಂ ॥ ೩೦೭ ॥

* **ವೃತ್ತಿ.**—ತಿಱ್ರನೆ, ತಿಟ್ಟನೆ, ಬಟ್ಟನೆ-ಎಂಬಿವು ಭ್ರಮಣಾರ್ಥಂಗಳಪ್ಪುವು; ಒಯ್ಕನೆ, ನೆಟ್ಟನೆ, ನೆಟ್ಟಗೆ—ಎಂಬವ್ಯಯಂಗಳ್ ಪರಿಸ್ಫುಟಾರ್ಥಮಂ ಪೇೞ್ಗುಂ.

**ಸೂತ್ರಂ** ॥ ವೇದನೆಯೊಳಹಹಮೆಂಬುದು ।
ಖೇದದೊಳಚ್ಚರಿಯೊಳಕ್ಕಟಾ ಎಂಬುದು ತತ್ ॥
ಖೇದ ವಿಡಂಬನ ಕರುಣಾ ।
ನಾದದೊಳಯ್ಯೋ ಎನಿಪ್ಪುದವತರಿಸಿರ್ಕುಂ ॥ ೩೦೮ ॥

* **ವೃತ್ತಿ.**—ಅಹಹಂ ಎಂಬವ್ಯಯಂ ನೋವಂ ಸೂಚಿಸಲ್ಲಿ ಪೇೞಲ್ಪಡುಗುಂ; ಅಕ್ಕಟಾ ಎಂಬುದು ದುಃಖದಲ್ಲಿಯುಂ ಆಶ್ಚರ್ಯಮಂ ಸೂಚಿಸಲ್ಲಿಯುಂ ವರ್ತಿಸುಗುಂ; ಅಯ್ಯೋ ಎಂಬವ್ಯಯಮುಂ ದುಃಖದ, ವಿಡಂಬನದ, ಕರುಣದ ಧ್ವನಿಯಲ್ಲಿ ಪೇೞಲಕ್ಕುಂ.

ಸೂತ್ರಂ ॥ ಸವನಿಪುದೋಹೋ ಹೋ ಎನೆ ।
ನಿವಾರಣಾರ್ಥಂ ಸಹಾರ್ಥಮೊಡನೆನೆ ಹಸನ ॥
ವ್ಯವಹೃತಿ ಗಹ ಗಹಮೆನೆ ಪಿರಿ।
ದುವೆಂಬಭಿಪ್ರಾಯದಲ್ಲಿ ಸೋಡಂಬಾಡಂ ॥ ೩೮೯ ॥

* ವೃತ್ತಿ.—ಓಹೋ, ಹೋ ಎಂಬವ್ಯಯಮಂ ತಡೆವರ್ಥದೊಳಂ, ಒಡನೆ ಎಂಬುದಂ ಸಹಾರ್ಥದೊಳಂ, ಗಹಗಹಮೆಂಬುದಂ ಹಸನಾರ್ಥದೊಳಂ, ಸೋಡಂಬಾಡಂ ಎಂಬವ್ಯಯಮಂ ಪಿರಿದೆಂಬರ್ಥದೊಳಂ ಪೇೞಲಕ್ಕುಂ.

ಸೂತ್ರಂ ॥ ಪರಿವಿಡಿಯಿಂದಾಃ ಅಃ ಎಂ।
ಬೆರಡುಂ ವಿಸ್ಮಯ [1]ವಿಡಂಬನ ವ್ಯಥನಂ ಸಂ ॥
ಸ್ಫುರಿತಾರ್ಥದೊಳುಃ ಎಂಬುದು।
ಪಿರಿದುಮಸಹ್ಯಾರ್ಥದೊಳ್ ಪ್ರಯೋಗಿಸೆಪಡುಗುಂ ॥ ೩೧೦ ॥

* ವೃತ್ತಿ.—ಆಃ, ಅಃ ಎಂಬೆರಡುಂ ಶಬ್ದಂಗಳ್ ಆಶ್ಚರ್ಯಮಂ ವಿಡಂಬನಮಂ ವ್ಯಥನಮಂ ಥಟ್ಟನೆ ಸ್ಫುರಿಸುವ ಭಾವಮಂ ಪೇೞ್ಗುಂ; ಉಃ ಎಂಬುದು ಅಸಹ್ಯಾರ್ಥದೊಳ್ ವರ್ತಿಸುಗುಂ.

ಸೂತ್ರಂ ॥ ಸ್ಮರಣ ವಿಚಾರಾಮಂತ್ರಣ ।
ಪರಿಗತವೆನಿಸಿರ್ಪುವೆಲೆಲೆ ಏ ಎಂಬಿವು ಸಂ ॥
ಚರಿಸುವುದನುಮತದೊಳ್ ಬ।
ಲ್ಲರಿನೇಕಾರಮದೆಕಾರಮವಧಾರಣೆಯೊಳ್ ॥ ೩೧೧ ॥

* ವೃತ್ತಿ.—ಎಲೆಲೆ, ಏ ಎಂಬಿವು ನೆನೆವಲ್ಲಿಯುಂ ವಿಚಾರದಲ್ಲಿಯುಂ ಸಂಬುದ್ಧಿಯಲ್ಲಿಯುಂ ವರ್ತಿಸುಗುಂ; ಎ ಏ ಎಂಬಿವಂ ಅವಧಾರಣಾರ್ಥದೊಳ್ ಪೇೞಲಕ್ಕುಂ.

ಸೂತ್ರಂ ॥ ಮತ್ತೆಂಬುದು ಪುನರರ್ಥದೊ।
ಳೆತ್ತಾನುಮದೆಲ್ಲಿಯಾನುಮೆಂಬರ್ಥದೊಳಾ ॥
ಯತ್ತಂಗಳರಮೆ ಅರೆಗಳ್ ।
ಸುತ್ತೇಂ ತರಲಾರ್ಥದಲ್ಲಿ ಬೆಳ್ಪಳಮಕ್ಕುಂ ॥ ೩೧೨ ॥

* ವೃತ್ತಿ.—ಮತ್ತೆ ಎಂಬುದು ಪುನರರ್ಥದೊಳ್ ಪೇೞಲ್ಪಡುಗುಂ; ಅರಮೆ, ಅರೆ—ಇವು ಎತ್ತಾನುಂ, ಎಲ್ಲಿಯಾನುಂ ಎಂಬರ್ಥದೊಳಂ, ಬೆಳ್ಪಳಂ ಎಂಬುದು ಚಂಚಲಾರ್ಥದೊಳಂ ವರ್ತಿಸುಗುಂ.

---

1. ವಿಡಂಬನಂ ವ್ಯಸನ ಸುಖ (ಅಚ್ಚಿನಪುಸ್ತಕ)

ಸೂತ್ರಂ ॥ ಸಲೆಯೆಂಬುದು ನಿತ್ಯಾರ್ಥಾ।
ವಲಂಬಿ [1]ಹುಂ ಎನೆಯುಂ ಅಲ್ತೆಯಲ್ತೆಯೆನೆಯುಂ ॥
ಫಲಿಯಿಸುಗುಂ ಪ್ರಶ್ನಾರ್ಥೋ।
ಜ್ಜ್ವಲಾನುಮಾನಾರ್ಥ ಯುಗಳಮವು ಶಾಬ್ದಿಕರಿಂ ॥ ೩೧೩ ॥

* ವೃತ್ತಿ.—ಸಲೆಯೆಂಬುದು ನಿತ್ಯಾರ್ಥದೊಳಂ, ಹುಂ ಎಂಬುದುಂ ಅಲ್ತೆ ಯಲ್ತೆಯೆಂಬುದುಂ ಪ್ರಶ್ನಾರ್ಥದೊಳಂ ಅನುಮಾನಾರ್ಥದೊಳಂ ವರ್ತಿಸುಗುಂ.

ಸೂತ್ರಂ ॥ ಅಮುಮೆಂಬಿವೆರಡುಮುಪುರ್ಗುಂ।
ಸಮುಚ್ಚಯಾರ್ಥದೊಳೆ ಏ ಒ ಓ ಎಂಬಿವು ಶ ॥
ಬ್ದಮನಪ್ಪಿ ವಿಶಂಕಾ ಪ್ರ।
ಶ್ನ ಮಂಡಲಾಕ್ಷೇಪಕಾರ್ಥದೊಳ್ ವರ್ತಿಸುಗುಂ ॥ ೩೧೪ ॥

* ವೃತ್ತಿ.—ಅಂ ಉಂ ಎಂಬಿವೆರಡುಂ ಸಮುಚ್ಚಯಾರ್ಥಮಂ ಪೇಟ್ಗುಂ; ಎ ಏ ಒ ಓ ಎಂಬಿವು ಪದಾಂತದೊಳಿರ್ದು ವಿಶಂಕೆ, ಪ್ರಶ್ನೆ, ಆಕ್ಷೇಪ— ಈ ಯರ್ಥಂಗಳೊಳ್ ವರ್ತಿಸುಗುಂ.

ಸೂತ್ರಂ ॥ ಬಟಿಕೆ ಬಟಿಕ್ಕಂ ಬಟಿಕಂ।
ಬಟಿಕ್ಕೆ ಬಟಿಯಂ ಪ್ರಸಿದ್ಧ ಪಶ್ಚಾದರ್ಥಂ ॥
ಘಟಿಯಿಪುದು ವಿಕಲ್ಪಾರ್ಥಂ।
ಕಟಿಲದೆ ಮೇಣೆಂಬ ಶಬ್ದದೊಳ್ ಶಾಬ್ದಿಕರಿಂ ॥ ೩೧೫ ॥

* ವೃತ್ತಿ.—ಬಟಿಕೆ, ಬಟಿಕ್ಕಂ, ಬಟಿಕಂ, ಬಟಿಕ್ಕೆ, ಬಟಿಯಂ—ಎಂಬಿವು ಪಶ್ಚಾದರ್ಥಂಗಳ್; ಮೇಣೆಂಬವ್ಯಯಮುಂ ವಿಕಲ್ಪಾರ್ಥದೊಳ್ ಪೇಟಲಕ್ಕುಂ.

ಸೂತ್ರಂ ॥ ಉಪಮಾನಾರ್ಥದೊಳಿವು ಪ।
ರ್ತಿಪುವಂತಿರೆ ಯಂತೆ ಯಂತೆವೋಲ್ವೋಲ್ಗಳ್ ರಂ ॥
ಜಿಪುವು ಗಡ ಗಳ ಗಡಂಗಳ।
ವುಪಚಿತ ವಾರ್ತೆಯೊಳಮುಚಿತ ಸಂಭಾಷಣೆಯೊಳ್ ॥ ೩೧೬ ॥

* ವೃತ್ತಿ.—ಅಂತಿರೆ, ಅಂತೆ, ಅಂತೆವೋಲ್, ವೋಲ್— ಇವು ಉಪಮಾನಾರ್ಥದೊಳ್ ವರ್ತಿಪುವು; ಗಳ, ಗಡ—ಎಂಬಿವು ಉಪಚಾರೋಕ್ತಿಯೊಳಂ ಉಚಿತ ಸಂಭಾಷಣೆಯೊಳಂ ಪೇಟಲ್ಪಡುಗುಂ.

---

1. ಹೂಂ, ಹೂಮ್ (?)

ಸೂತ್ರಂ ॥ ಮೆಱೆಗುಂ ಸುಂಮನೆ ಸುಂಮಗೆ ।
ಬಱಿದಲ್ಲವಱೆಂಬ ಮಾತಕಾರಣದೊಳ್ [1]ಪೊ ॥
ಚ್ಚಱುಗುಂ ತೃತೀಯೆ ಬಂದಂ ।
ತಱೆನೆಂಬ ಪದಕ್ಕಮಾ ಎಕಾರಕ್ಕಿತರಂ ॥ ೩೧೭ ॥

ವೃತ್ತಿ.—ಸುಂಮನೆ, ಸುಂಮಗೆ, ಬಱಿದೆ, ಅಲ್ಲವಱ್—ಇವು ಕಾರಣ ವಿಲ್ಲೆಂಬರ್ಥದಲ್ಲಿ ಬರ್ಪುವು; ಅಂತಱೆನೆಂಬ ಪದಕ್ಕೆ ಎಕಾರಕ್ಕನ್ಯಮಾದ ಇಂ, ಇಂದಂ, ಇಂದೆ ಎಂಬ ತೃತೀಯಾ ವಿಭಕ್ತಿಪ್ರತ್ಯಯಂ ಪತ್ತುಗುಂ.

ಸೂತ್ರಂ ॥ ಹೌವನೆಯಾಕಸ್ಮಿಕ ಭಯ ।
ಭಾವಿತವಂತಿಂತುಗಳ್ ಪದಾಪೂರಣದೊಳ್ ॥
ಕೋವುವು ಚಿಃ ಇಸ್ಸೀಗಳ್ ।
ತಾವೊಗೆದು ಜುಗುಪ್ಸನಾರ್ಥದೊಳ್ ವರ್ತಿಸುಗುಂ ॥ ೩೧೮ ॥

* ವೃತ್ತಿ.—ಹೌವನೆ ಎಂಬವ್ಯಯಮಂ ಆಕಸ್ಮಿಕ ಭಯಾರ್ಥಂಗಳೊಳ್ ಪೇೞಲಕ್ಕುಂ; ಅಂತು, ಇಂತು ಎಂಬಿವಂ ಪಾದಪೂರಣದೊಳ್ ಪೇೞಲಕ್ಕುಂ; ಚಿಃ, ಇಸ್ಸೀ ಎಂಬಿವಂ ಜುಗುಪ್ಸಾರ್ಥದೊಳ್ ಪೇೞಲಕ್ಕುಂ.

ಸೂತ್ರಂ ॥ ಮತ್ತೆಂಬರ್ಥದೊಳುಸಿರ್ವರ್ ।
[2]ಬಿತ್ತಿಗರಾ ಬಲ್ಲೆ ಬೞಗಳಂ ಕಾಲಾರ್ಥಂ ॥
ಪತ್ತುವುದಂದಿಂದುಂದೆಂ ।
ದೆತ್ತಂ ನುಡಿವವ್ಯಯಂಗಳೊಳ್ ವಾಗ್ಮಿದರಿಂ ॥ ೩೧೯ ॥

ವೃತ್ತಿ.—ಬಲ್ಲೆ, ಬೞ—ಎಂಬವ್ಯಯಮಂ ಮತ್ತೆಂಬರ್ಥದೊಳ್ ಪೇೞಲಕ್ಕುಂ; ಅಂದು, ಇಂದು, ಉಂದು, ಎಂದು—ಎಂಬವ್ಯಯಂಗಳ್ ಕಾಲಾರ್ಥಮಂ ಪೇೞ್ಗುಂ.

ಸೂತ್ರಂ ॥ ಭ್ರಾಂತಿಯ[3]ನುೞದಂತಿಂತುಂ ।
ತೆಂತೆಂಬಿವು ತಾಂ ಪ್ರಕಾರ[4]ಕಾಲ್ಯಾರ್ಥಂಗಳ್ ॥
ಮುಂತೆ ಚತುರ್ಥೀ ಷಷ್ಠೀ ।
ಕಾಂತಂಗಳವೆಂದು ತಿಳಿಗೆ ಪೇೞ್ವವ್ಯಯಮಂ ॥ ೩೨೦ ॥

---

1. ಪೊಚ್ಚಱುಗುಂ=ಪೊರ್ದುಗೆಯಪ್ಪುದು; 2. ಬಿತ್ತಿಗರ್=ಬಲ್ಲವರ್; 3. ನುಡಿಯುಂ. ಗ. ಖ. 4. ಕಾಲಾರ್ಥಂ. (ಅಚ್ಚಿನಪುಸ್ತಕ.)

* ವೃತ್ತಿ.—ಅಂತು, ಇಂತು, ಉಂತು, ಎಂತು—ಎಂಬಿವು ಪ್ರಕಾರಾರ್ಥಮಂ ಪೇೞ್ಬವು. ಕಾಲಭೇದಮನಱಿಪುವ ಮುಂದಣವ್ಯಯಂಗಳೊಳ್ ಚತುರ್ಥೀಷಷ್ಠಿಗಳ್ ಪರಿಣಮಿಸಿರ್ಪುವೆಂದಱಿವುದು.

ಸೂತ್ರಂ ॥ ತಳೆಗುಂ ಕಾಲಾರ್ಥಮನಾ ।
ಗಳೀಗಳೆಂಬಾಗಡೀಗಡೆಂಬಿವು ಬಿಂದೂ ॥
ಜ್ಜ್ವಳಮುಮಿವುದಯಮನುಸಿರ್ಪುವು ।
ತಿಳಿ ಸವಳದೆ ಪೊೞ್ತಡೆನೆ ಸವಳ್ತಡೆಯೆನೆಯುಂ ॥ ೩೨೧ ॥

ಸವಸಂದ ಕಾಲವಾಚಕ ।
ಮಿವು ನಾಡಿದು ನಾಳೆ ನಿಂನೆ ಮೊಂನೆಗಳಾದಂ ॥
ವಿವರಿಪುವೀವಱು ಮೊನೆಯೇ ।
ಡವು ಕಿಂಚಿದ್ಭೂತ ಭೂತಕಾಲ ದ್ವಯದೊಳ್ ॥ ೩೨೨ ॥

ವೃತ್ತಿ.—ಇವಱೊಳ್ ಚತುರ್ಥಿ ಷಷ್ಠಿಗಳ್ ಪತ್ತುವಂದಮಂ ಉದಾಹರಿಪೆಂ.—ಆಗಳಿಂಗೆ, ಈಗಳಿಂಗೆ, ಆಗಡಿಂಗೆ, ಈಗಡಿಂಗೆ; ಆಗಳಿನ, ಈಗಳಿನ, ಆಗಡಿನ, ಈಗಡಿನ; ಸವಳ್ತಡಿಂಗೆ, ಪೊೞ್ತಡಿಂಗೆ; ಸವಳ್ತಡಿನ, ಪೊೞ್ತಡಿನ. ಸವಳದೆಗೆ ಆಗದು.—ನಾಳಿಂಗೆ, ನಾಡಿದಿಂಗೆ, ನಿಂನಿಂಗೆ, ಮೊಂನಿಂಗೆ; ನಾಳಿನ, ನಾಡಿದಿನ, ನಿಂನಿನ, ಮೊಂನಿನ; ಈವಱಿಂಗೆ, ಮೊನೆಯೇಡಿಂಗೆ; ಈವಱಿನ, ಮೊನೆಯೇಡಿನ. ಈವಱೆಂಬುದು ಈಷದ್ಭೂತಕಾಲಂ; ಮೊನೆಯೇಡೆಂದು ಭೂತ ಕಾಲಂ; ಇವು ವರ್ಷವಾಚಕಂಗಳಾಗಿ ಕಾಲೋಪಯುಕ್ತಂಗಳ್.

ಇದು ಸಮಸ್ತ ಶಾಬ್ದಿಕಜನ ಮನೋಜನಿತ ಶಬ್ದ ಸಂದೇಹಶಲ್ಯ
ಚಾರು ಚುಂಬಕಾಯಮಾನಾನೂನ ಕರ್ಣಾಟಕ ಲಕ್ಷಣ
ಶಿಕ್ಷಾಚಾರ್ಯ ಸುಕವಿ ಕೇಶಿರಾಜ ವಿರಚಿತ
ಮಪ್ಪ ಶಬ್ದ ಮಣಿದರ್ಪಣದೊಳ್
ಅವ್ಯಯಾರ್ಥ ವಿವರಣಮೆಂಬ
ಅಷ್ಟಮಮಪ್ಪ ಸಂಧಿ
ಸಂಪೂರ್ಣಂ.

## ಸಮಾಪ್ತಿ ವಾಕ್ಯಂಗಳ್

---

ಕಂ॥ ನಡೆದುದೆ ಮಾರ್ಗಂ ಪದವಿಡ।
ಲೊಡರಿಸಿದುದೆ ಭಂಗಿ ಕೇಶವಂಗಿದಿರುಂಟೇ॥
ತೊಡಗಿದ ಕೃತಿಗಳೊಳಾನೆಯ।
ನಡು ಬಡವೆ ತಾನೆ ಲೋಕದೊಳ್ ಲಾಕ್ಷಣಿಕಂ॥೧॥

ದೊರೆವಡೆದ ಚೋಟಿಪಾಲಕ।
ಚರಿತಂ ಶ್ರೀ ಚಿತ್ರಮಾಲೆಯಂತೆ ಸುಭದ್ರಾ॥
ಹರಣಂ ಪ್ರಬೋಧಚಂದ್ರಂ।
ಕಿರಾತಮಿವು ಕೇಶಿರಾಜ ಕವಿ ರಚಿತಂಗಳ್॥೨॥

ಸಿರಿಗೀಕ್ಷಿಪ ರಸಚಿತ್ರಂ।
ಸರಸತಿಗೆರಡನೆಯ ಬೀಣೆಯೆನೆ ಸೌಭಾಗ್ಯಂ॥
ಕರವಾದುದೆಂದು ಬುಧರಾ।
ದರಿಪರ್ ಮೆಚ್ಚೆಂದೆ ಶಬ್ದಮಣಿದರ್ಪಣಮಂ॥೩॥

ಆರ್ಯ್ಯನ ಯಾದವ ಕಟಕಾ।
ಚಾರ್ಯ್ಯನ ಕೇಶವನ ಶಬ್ದಮಣಿದರ್ಪಣಮುಂ॥
ಸೂರ್ಯ್ಯೇಂದು ಮೇರು ವಾರಿಧಿ।
ಪರ್ಯ್ಯಂತಂ ಪರೆದು ನಿಲ್ಕನಾಕುಳದಿಂದಂ॥೪॥

ಚಂ॥ ಗಮಕ ಸಮಾಸದಿಂ ಱಟಿ ಕುಳ ಕ್ಷಳದಿಂ ಶ್ರುತಿ ಸಹ್ಯ ಸಂಧಿಯಿಂ।
ಸಮುಚಿತಮಾಗಿ ಬರ್ಪ ಸತಿಸಪ್ತಮಿಯಿಂ ಸಮಸಂಸ್ಕೃತೋಕ್ತಿಯಿಂ॥
ವ ಮ ಹ ಪ ಭೇದದಿಂ ವಿರಹಿತಾವ್ಯಯ ಸಂಸ್ಕೃತ ಲಿಂಗದಿಂ ಪದೋ।
ತ್ತಮ ಶಿಥಿಲತ್ವದಿಂ ಯತಿ ವಿಲಂಘನದಿಂದರಿದಲ್ತೆ ಕನ್ನಡಂ॥೫॥

---

## ಪರಿಶಿಷ್ಟ ೧

### ಸಹಜ ಱೞಂಗಳ್

೧ ಅಗೞ್ತೆ=ಖನನಂ.

೨ ಅಗ್ಗೞಕೆ=ಲಾೞವಿಂಡಿಗೆ, ಆವುಜದ ಮುಟ್ಟು(ಆವುಜ=ಸಂಗೀತವಾದ್ಯ).

೩ ಅಗುೞ್ದಂ=ನೀರ್ನೆಲೆದಪ್ಪಿದಂ (ಮುಳುಗಿದಂ).

೪ ಅದವೞಲ್ (ಅದವಱಲ್)= ಮರುಕಂ.

೫ ಅವಗೞಯಂ=ಉರವಣೆಕಾರ್ತನಂ.

೬ ಅಸಕೞದಂ=ಕೈಮಾಱದಂ.

೭ ಅೞ್ಕರ್ತಂ=ಪ್ರೀತಿವಟ್ಟಂ.

೮ ಅೞ್ಕಮೆ=ಆಜಮೆ.

೯ ಅೞ್ದಂ=ನೀರೊಳ್ ಮುಳುಗಿದಂ; ಕೆಟ್ಟಂ.

೧೦ ಅೞ=ಬಳ್ಳಿದೞ; ವಿಧಿಕ್ರಿಯೆ; (ತುಂಬಿಯುಂ ಪೇೞ್ವಲ್ಲಿ ಕ್ಷಳಂ)

೧೧ ಅೞದಂ=ಸತ್ತಂ; ಕೆಟ್ಟಂ (ಸತ್ತವಂ; ಕೆಟ್ಟವಂ); ಕಿಡಿಸಿದವಂ.

೧೨ ಅೞಪಂ=ಅೞಪುವಂ; ಅೞಪಿದವಂ.

೧೩ ಅೞ್ತಿ=ಪ್ರೀತಿ.

೧೪ ಅೞ್ಕೆ=ರೋದನಂ.

೧೫ ಅೞ್ದಂ=ಮುಳುಗಿದಂ.

೧೬ ಆೞಾೞಗಂ=ಒಂದು ಸಾಮಾನ್ಯ ಮಾಲಾಬಂಧಂ.

೧೭ ಆೞ=ವಂಚನೆ; ಏಕಗ್ರಾಹಿತ್ವಂ; (ಸಂಸ್ಕೃತದೊಳ್ ಸಖಿಯುಂ, ಸಾಲುಂ ಬರ್ಪೆಡೆ ಕ್ಷಳಂ).

೧೮ ಇಕ್ಕೞ್=ವ್ಯಾಧಿವಿಕಾರಂ; ಸಂದಂಶಂ; ತಾಂಡಸಂ.

೧೯ ಇೞದಂ=ಮೆಯ್ಗುಂದಿದಂ; ಕೆಳಗಣ್ಗೆ ವಂದಂ.

೨೦ ಈ ಸೂೞ್=ವರ್ತಮಾನ ಪರುಷಂ

೨೧ ಈೞ್ದಂ=ಸೆಳೆದಂ.

೨೨ ಉಂಬೞಿ=ಕೊಡಗೆ.

೨೩ ಉೞಕು (ಉಱಕು)–ಭಾವವಾಚಿ.

೨೪ ಉೞಗಂ=ಶಕುನದ ಹಕ್ಕಿ.

೨೫ ಉೞಗೆ=ಬೇಟಂ.

೨೬ ಉೞದುದು=ಬಿಟ್ಟುದು; ಬಿೞ್ದುದು; ಜೀವಿಸಿದುದು; ಲಾಭಮಾದುದು. ಅಡಂಗಿದುದು, ಬಡಿಗೆಯ ಮತ್ತು ಕಳ್ಳನ ಬೇಂಟೆಯ ಉಳಿ— ಇವುಗಳೊಳ್ ಕುಳಂ. ಸ್ಥಾನವ್ಯಕ್ತಿಯುಂ ಪೇೞ್ವೊಡೆ — ಉೞ, ಪೞವುೞ ಎಂಬವ್ಯಯಂ ಱೞಂ.

೨೭ ಉೞವು(ಉಱವು)—ಭಾವವಾಚಿ.

೨೮ ಉೞಸಿದಂ=ಒಲ್ದಂ.

೨೯ ಉೞ್ಕೆ=ಉೞ್ವ ಭಾವಂ.

೩೦ ಎೞಲ್ದಂ=ಜೋಲ್ದಂ; ಬೞಲ್ದಂ.

೩೧ ಎಱವಿದಂ=ನೀವಿದಂ.

೩೨ ಎೞ್ಚತ್ತಂ=ನಿದ್ರೆತಿಳಿದಂ; ಕತ್ತನೋ ಸರಿಸಿದಂ; ಮಱವೆ ಪಿಂಗಿದಂ.

೩೩ ಎೞ್ದಂ = ನೆಗೆದಂ; ನಿದ್ರೆತಿಳಿದಂ; ದೊರೆಕೊಂಡಂ.

೩೪ ಎೞ್ತು=ಗೂೞಿ; ಹೊರಸಿನ ನೆಯ್ಗೆ; ಊಕೆಯ ನುಲಿ.

೩೫ ಎಱೆ= ನೂಲೆಱೆ; ಬರೆಸೆಱೆವುದು. (ಭೂವ್ಯರ್ಥದೊಳ್ ಕುಳಂ).

೩೬ ಏೞು=ಸಂಖ್ಯಾವಾಚಿ.

೩೭ ಒೞ್ಕು=ನದೀ ಪ್ರವಾಹಂ

೩೮ ಕಚ್ಚೞಿ=ಒತ್ತಿ ಚಪ್ಪಟೆಯಾದುದು.

೩೯ ಕೞಕುೞಂ = ಸ್ಥಾನ ವ್ಯಾಕುಲತೆ. (ಕೞಕೞಿಸಿದನರ್ಕಂ)

೪೦ ಕಱಿಲ್ = ಮಜ್ಜಿಗೆ; ಅಂದುಗೆ; ತನುತ್ವಂ.

೪೧ ಕೞಲ್ದಂ=ಬಡವಾದಂ; ಮನಮಿಕ್ಕಂ.

೪೨ ಕೞಲೆ = ಮುಳ್ಳುವೆರಸಿದ ಗುಜ್ಜ ಗೊಂಬು.

೪೩ ಕೞ್ಕನೆ=ಆಕಸ್ಮಿಕಂ.

೪೪ ಕೞ್ತಲೆ=ಮರ್ವು (ಮರುವು).

೪೫ ಕೞಿದಂ=ಸತ್ತಂ; ಪೊರಂಬೋದಂ; ಕಯ್ಮಾರಿದಂ

೪೬ ಕೞಿಲೆ=ಬಿದಿರ ಕುಡಿ.

೪೭ ಕೞಿವು—ಭಾವವಾಚಿ.

೪೮ ಕೞ್ತೆ=ಗರ್ದಭಂ.

೪೯ ಕಿಮುೞ್ದುೞಿದಂ=ಸಣ್ಣನಾಗಿ ತುೞಿದಂ.

೫೦ ಕಿೞ್ತಂ=ನಿರ್ಮೂಲಿಸಿದಂ.

೫೧ ಕಿೞ್ಗಿದಂ=ಗುಜ್ಜಂ.

೫೨ ಕೀೞ್=ದೊರೆಯಿಲ್ಲದ(ಬಣ್ಣಕಡಿಮೆಯಾದ) ಭಂಗಾರಂ; ತುರಗಮುಖದ ಲೋಹಂ; ಕ್ಷೀಣಕುಲಂ; ಕೆಳಗು.

೫೩ ಕುಱಂ (ಗುಱಂ) = ನೇಗಿಲ್ವಾಯ ಕರ್ಬುನಂ.

೫೪ ಕುೞಿ=ಅಗುೞ್ದಿಡೆ.

೫೫ ಕೂಱಂ=ಎಗ್ಗಂ.

೫೬ ಕೆಱವಂ=ಮುದುಕಂ.

೫೭ ಕೇೞಿ=ಪಂಕ್ತಿ;(ಕ್ರೀಡೆಯೊಳ್ಕ್ಷಳಂ)

೫೮ ಕೊತ್ತೞಿ=ಕಾಗೆಯ ಮೊತ್ತಂ; ಬೆಸದವರ ನೆರವಿ.

೫೯ ಕೊಱಲ್= ವೇಣುವಾದ್ಯಂ; (ಕೊಳಲೆಂಬ ಕ್ರಿಯೆಯೊಳ್ ಕುಳಂ).

೬೦ ಕೊೞೆತುದು = ಜೀರ್ಣಿಸಿದುದು; ಮಲಮೇೞಿದುದು; ಮನಮಿಕ್ಕಿದುದು.

೬೧ ಕೌಂಕುೞ್=ಕಕ್ಷಮೂಲಂ.

೬೨ ಖೞಿಲ್ಲನೆ (ಖೞಿಲೆನೆ), ಛೞಿಲ್ಲನೆ, ಝೞಿಲ್ಲನೆ, ಘುೞಿಮ್ಮನೆ (ಘುೞಮ್ಮನೆ), ಧಱಮ್ಮನೆ, ಫೞಿಲ್ಲನೆ—ಇವು ಮೊದಲಾದ ಮಹಾಪ್ರಾಣಾನುಕರಣಂಗಳ್ ನಿತ್ಯ ಱೞಂಗಳ್.

೬೩ ಗೞಗೞನೆ=ಬೇಗಂ.

೬೪ ಗಱಪಂ=ಸೊರಹುವಂ.

೬೫ ಗೞೆ = ಕಡೆಗೋಲ್; ಕೊಲ್ಲಟಗರಾಡುವ ಗಣೆ.

೬೬ ಗುೞಂ (ಗೞಂ)—ಆನೆ ಕುದುರೆಗಳ ಪಕ್ಕೞಿಕೆ.

೬೭ ಗುೞುಗುೞು ಗೞಗೞಯೆನುತುಂ

ಪರಿವ ಪರಿವೊನಲ್ ಸೊಗಯಿಸು ಗುಂ—(ಸೂ. ೫೪). ಇವು ಮೊದಲಾದುವು ಅಲ್ಪಪ್ರಾಣಾನುಕರಣಂಗಳ್; ಱಟಿನುಂ ಕುಳನುಮುಪ್ಪುವು.

೬೮ ಗೇಱಸು=ಗೆಡ್ಡೆ.

೬೯ ಗೋೞಟ್ಟಂ, ಗೀೞಟ್ಟಂ, ಗಟಗಟನೆ.

೭೦ ಘುಟಯಂ=ಸಮುಕಟ್ಟು.

೭೧ ಚಾಟಿಱ್=ರಾಹು.

೭೨ ಜಗುಟ್ಟಂ=ಜಾಱದಂ.

೭೩ ಜೀರ್ಕೊಟವೆ=ಜಲಯಂತ್ರಂ.

೭೪ ತಲ್ಲಟಂ=ಭಯಂ.

೭೫ ತಟತಟಗುದಿ, ತಟ್ಟಟಗುದಿ—ಎಂಬಿವು ಕಾಸುವ ರಸದ್ರವ್ಯಾನುಕರಣಂಗಳ್

೭೬ ತಟತಟನೆ ನೇಸವರ್ಮೂಡಿದುದು. (ಸೂ. ೧೯೩)

೭೭ ತಟಲ್=ಮುತ್ತ ಕಾಯ್.

೭೮ ತಱ=ಸ್ಥೂಲದಾರು; (ಸತ್ರಾರ್ಥದೊಳ್ ಕುಳಂ).

೭೯ ತಟ್ಗಿದಂ=ಕುಸಿದಂ.

೮೦ ತಟಿ=ಆತಪತ್ರಂ; ತಳೆಯೆಂಬ ಕ್ರಿಯೆಯೊಳಂ, ಪಶುವಿನ ತಳೆಯೊಳಂ ಕುಳಂ).

೮೧ ತಾಟಿಱ್=ಒಂದುಮರಂ; ಅಗುಱ; ಸೂರಣದ ದಂಟು.

೮೨ ತಿಪ್ಪುಟಿಱ್=ಪಕ್ಕಿಯ ಗರಿ.

೮೩ ತುಪ್ಪುಟಿಱ್=ಪಕ್ಕಿಯ ರೋಮಂ.

೮೪ ತುಱಕಲ್ (ತಱಕಲ್, ತಟಕಲ್)= ಸೊಪ್ಪಾದುದು.

೮೫ ತುಱದಂ=ಕಾಲೊಳ್ ಮರ್ದಿಸಿದಂ; ಘಾಸಿಮಾಡಿದಂ; ಬಡವಾದಂ; ಅಗಲ್ದಂ.

೮೬ ತುಱಲ್=ಪೊಡವಡಿಕೆ; ವೀರಂ.

೮೭ ತುಱಲ್ಸಂದಂ=ವೀರಂ; ಪಂಚಮಂ.

೮೮ ತೆಗಟ್ದಂ=ಪಱದಂ.

೮೯ ತೇಟಿಱ್=ವೃಶ್ಚಿಕಂ.

೯೦ ತೊಟಲ್ದಂ=ಭ್ರಮೆಗೊಂಡಂ; ಉಂಗರವಟ್ಟಿಗೆ ವಂದಂ.

೯೧ ತೊಟಕಲ್=ತೊಟಲ್ವುದು

೯೨ ತೊಟ್ಟಱ (ತೊಟ್ಟಱ)=ಸೊಪ್ಪಾದುದು.

೯೩ ತೊಟ್ತು=ದಾಸಂ; ದಾಸಿ.

೯೪ ದಂಡುಟಗಂ=ದಂಡದೊಳ್ ಪಡೆದವಂ.

೯೫ ದಟದುಟಂ(ದಟವುಟಂ)=ಬಲ್ಲೂಱ.

೯೬ ದಟಂ=ತುರಂಗ ಬಲಂ; ಸಾಮಾನ್ಯ ಬಲಂ.

೯೭ ದಟ್ದಱ=ಸಂಕಲೆ.

೯೮ ನಾಟವಾಸಗೆ=ಕಳ್ಳವಾಸಗೆ; (ಸಂಸ್ಕೃತದೊಳ್ 'ನಾಳಂ' ಕ್ಷಳಂ)

೯೯ ನೆಗಟಿಱ್=ಪ್ರಸಿದ್ಧಿ; ಚರಿತ್ರಂ; ಜಲಗ್ರಾಹಂ.

೧೦೦ ನೆಟಲ್=ಆತಪತ್ರಾದಿ ಛಾಯೆ; ಜಳದರ್ಪಣ ಪ್ರತಿಬಿಂಬಂ; ಒಂದು ಮರಂ.

೧೦೧ ನೆಱಲ್ಲೆನೆ (ನೆಱಲೆನೆ), ನೆಟ್ಟನೆಯೆ ಮುಱದುದು—ಇವು ಅನುಕರಣಂಗಳ್.

೧೦೨ ಪಱಗಂ=ಒಣಗಿದೆಲೆ.

೧೦೩ ಪೞದು=ಜೀರ್ಣಂ.

೧೦೪ ಪೞಪಱನೆ,ಪೞ್ಪಱನೆ—ವಿರಲಾರ್ಥಂ

೧೦೫ ಪೞಪು (ಪೞವು) = ನರೆಗಿಕ್ಕುವ ಕರ್ಪೂರ.

೧೦೬ ಪೞವಿಗೆ (ಪೞಯಿಗೆ)=ಕೇತನಂ.

೧೦೭ ಪೞಹಂ = ಬೇಂಟೆಯ ತೆರೆ; ವಾದ್ಯ ವಿಶೇಷಂ.

೧೦೮ ಪೞ=ವಸ್ತ್ರವಿಶೇಷಂ ; ದೂಷಣಂ ; ನಾಯ ಸೋವುವುದು; ಲೋಹದ ಘುಟ್ಟ.

೧೦೯ ಪೞ್ತಿ=ಕಾರ್ಪಾಸಂ.

೧೧೦ ಪೞ=ಅಡವಿ.

೧೧೧ ಪೞ್ಕೆ=ಶಯನಂ; ಶಯನಸ್ಥಾನಂ.

೧೧೨ ಪೞ್ಕೆ ತಱ್ಕೈಸಿದಂ= ತಡಕಯ್ಯಂ ಮಾಡಿದಂ.

೧೧೩ ಪಾಱ್=ಶೂನ್ಯ ಸ್ಥಾನಂ.

೧೧೪ ಪಾೞ=ಕ್ರಮಂ.

೧೧೫ ಪುಚ್ಚೞ=ಕೇಡು.

೧೧೬ ಪುೞ್ಗು=ಉರ್ದು, ತೊವರಿ, ಹೆಸರು ಮೊದಲಾದುವನಿಕ್ಕಿ ಅಟ್ಟ ಕೂಱ್.

೧೧೭ ಪುೞ=ಕೀಟಕಂ.

೧೧೮ ಪೆಱಕು=ಜಗಳಂ.

೧೧೯ ಪೆೞವಂ=ಕಾಲಿಲ್ಲದವಂ.

೧೨೦ ಪೇೞ್ದಂ=ನಿರೂಪಿಸಿದಂ.

೧೨೧ ಪೊಕ್ಕುಱ್=ನಾಭಿ.

೧೨೨ ಪೊಗೞ್ತೆ=ಕೀರ್ತನಂ.

೧೨೩ ಪೊಂಪುೞ=ಪೆರ್ಚುಗೆ.

೧೨೪ ಪೊೞಕು=ಸಾಮಾನ್ಯಾಕೃತಿ.

೧೨೫ ಪೊೞಲ್=ಮರದ ಪೊಟ್ಟೆ ; ಪುರಂ.

೧೨೬ ಪೊೞ್ತಿಡೆ (ಪೊೞ್ತುೞ)= ಉದಯ ಕಾಲಂ.

೧೨೭ ಪೊೞ್ತು=ಸಾಮಾನ್ಯಕಾಲಂ ; ಪ್ರಸವ ಕಾಲಂ ; ನೇಸಱ್.

೧೨೮ ಪೊಱೆ=ಬಟ್ಟೆ ; ತೊರೆ (ಹೊಳೆ).

೧೨೯ ಪೋಱ್=ಸೀೞ್ದ ಭಾಗಂ.

೧೩೦ ಬಱ್ದಂ (ಬಾಱ್ದಂ)= ಜೀವಿಸಿದಂ ; ಒಕ್ಕಲಾದಂ.

೧೩೧ ಬೞ=ಬಟ್ಟೆ ; ವಂಶಂ ; ಕರೆವಂ; ಲೇಪಿಸುವುದು; ಪಿಂಗಲಿಯ ಬೞಗೊರಲ್; ಮುತ್ತೆ.

೧೩೨ ಬೞಯಂ=ವಿಧೇಯಂ.

೧೩೩ ಬೞಯಂ, ಬೞಕಂ, ಬೞಕ್ಕಂ, ಬಱಕೆ, ಬಱಕ್ಕೆ—ಇವು ಪಶ್ಚಾದರ್ಥಂಗಳ್.

೧೩೪ ಬಱಲ್ದಂ=ಜಗುಱ್ದಂ.

೧೩೫ ಬಱವೞ (ಬಱವಱ)= ಕೊಟ್ಟ ವಸ್ತುವಿನ ಬೞಯೊಳ್ ಕುಡುವುದು.

೧೩೬ ಬಱ್ದುಂಕಿದಂ=ಜೀವಿಸಿದಂ ; ಬಿಡಲ್ಪಟ್ಟಂ.

೧೩೭ ಬಾಸುಱ್=ಪೊಯ್ದ ಬೞ.

೧೩೮ ಬಾಱ್=ಜೀವನಾರ್ಥಂ; (ನಾವಿದ ವಾಳ್, ಕೂರ್ವಾಳ್, ಹರಗು ವಾಳ್—ಎಂಬಲ್ಲಿ ಕುಳಂ).

೧೪೯ ಬಾಱುಕಂ— ಸೀಱಿಕ್ಕೊಣಗಿ ಬಾಱ್ದಿ ಶಾಕಂ.

೧೫೦ ಬಾಱ್ತಿ=ಪ್ರಯೋಜನಂ.

೧೫೧ ಬಿಱಿಲ್=ಮರದ ಜಡೆ.

೧೫೨ ಬಿಱ್ದದು=ಪಳಸಿದುದು; ಸತ್ತುದು; ಕೈ ಜೋಲ್ದದು.

೧೫೩ ಬಿಱ್ಕಿ=ಒಂದು ಮರಂ.

೧೫೪ ಬೀಱ್=ಮಾಡದ ಕೆಯ್; ಪತನ ಕ್ರಿಯೆ.

೧೫೫ ಬೆಂಬಱ=ಪಿಂದೆ ಬರ್ಪುದು.

೧೫೬ ಬೆಱಿಲ್=ಒಂದು ಮರಂ.

೧೫೭ ಬೋಱಂ= ಖುಱ್ತು; ಮುಂಡಂ; ಒಂದೌಷಧಂ.

೧೫೮ ಬೋಱಿ=ಒಂದಂಬಿನ ಭೇದಂ.

೧೫೯ ಮಣ್ಮಱ=ರೂಪಱದ ಸಾವು.

೧೬೦ ಮಲ್ಲಱ = ಶರೀರ ವ್ಯಾಕುಲತೆ; ಸುತ್ತಿಬರ್ಪುದು.

೧೬೧ ಮಱಿಲ್ದದು (ಕಱಿಲ್ದದು), ಮಱಿ ಮಱಿಸಿತ್ತು=ಕಣ್ಕದಡಿದ ಭಾವಂ.

೧೬೨ ಮಱಿ=ವೃಷ್ಟಿ.

೧೬೩ ಮುಱ್ತು=ಒಂದು ಮರಂ.

೧೬೪ ಮುಱ್ತಗ (ಮುಱ್ತಗ)=ಒಂದು ಮರಂ.

೧೬೫ ಮೂಱ=ಕಿವಿಯಿಲ್ಲದವಳ್; ಕರಗದ ನಾಳಿ (ಜೂಳಿ?)

೧೬೬ ಮೊಱಿಕಾಲ್=ಒಳ್ಳೊಡೆಯ ಸಂದು

೧೬೭ ಮೊಱಿಗು = ಮುಗಿಲ ದನಿ; ಒಂದು ಮರದ ಪೆಸರ್; ವಾದನ ವಿಧಿ; ವಾದ್ಯಂ.

೧೬೮ ಮೊಱಿಂ=ಅರತ್ನಿ.

೧೬೯ ಸಾಱಗೆ (ಜಾಱಗೆ)=ಉಡುಗೆ.

೧೭೦ ಸುಱ=ಕೆಲಸಗಳ್ಪಂ; ಸಸಿಯ ಸುಱ; ಸುಱುವಭಾವಂ; ಜಲಾವರ್ತಂ. (ಸೂಳಿಯೆಂದೀಶ್ವರನ ಪೇಱ್ವಲ್ಲಿ ಕ್ಷಳಂ).

೧೭೧ ಸುಱಿದಂ=ಸಂಚಲಿಸಿದಂ; ಬಳಿಗೆ ವಂದಂ.

೧೭೨ ಸೂಱ್=ಬಾಣ.

೧೭೩ ಸೂಱಾಯ್ತಂ=ಸೂಱ್ಗಿಱಿದಂ.

೧೭೪ ಹಱ್ಗ=ದೂವೆಯೊಳ್ ತಳಲಂ ಪೊಳ್ದ ಕ್ರಿಯೆ.

೧೭೫ ಹಾಱ್ಮನೆಹಾಱಂ = ತುಡುಗುಣಿ ನಾಯ್.

೧೭೬ ಹಿಱುದುದು = ರಸಮಂ ಹಿಂಡಿದುದು (ಬಿರಿದುದೆಂಬಲ್ಲಿ ಕುಳಂ).

## ಪರಿಶಿಷ್ಟ ೨

### ಪ್ರಯೋಗಸಾರಮೆಂಬ ಶಬ್ದಾರ್ಥ ನಿರ್ಣಯಂ

ಕಂ॥ ಅಪರಿಮಿತ ವಿದ್ಯರೆನಿಸಿ ।
ರ್ದ ಪುರಾಣ ಕವೀಂದ್ರರಖಿಳ ಕಾವ್ಯಂಗಳ ಗೂ ॥
ಢ ಪದ ಪ್ರಯೋಗಮಂ ನೆರೆ ।
ಪಿ ಪದಾರ್ಥಂಗಳನಣಂ ಮನಂಬುಗೆ ಪೇೞ್ವೆಂ ॥

---

೧ ಅಗುಂದಲೆ=ಪಿರಿದು.

೨ ಅಜ್ಜಂ=ಸಾವಾಸಿ (ಪೊಸವಾಸಿ)

೩ ಅಡಬಳಂ=ಬಾಣಸಿಗಂ.

೪ ಅಡೆವಣಿಗೆ=ಕೆಸಱೊಳಾದ ಪಜ್ಜೆ.

೫ ಅಣಿಯರಂ=ಪಿರಿದು.

೬ ಅತ್ತಪರಂ=ಕಾಳೆಗವಲಗೆ.

೭ ಅತುರ್ದು=ಅಱತುದು.

೮ ಆದುವದು=ವಿಚಾರಿಸುಹಂ.

೯ ಆರ್ಬಿ=ನಿರ್ಝರಂ.

೧೦ ಆಂಮುಂಗೊಡಲಿ=ಹೆಗ್ಗಟ್ಟವತ್ತಿಗೆ.

೧೧ ಆಱುಲ್=ನಕ್ಷತ್ರಂ.

೧೨ ಆಲವರ್ಕ್ಕಿ=ತುಂಬಿ.

೧೩ ಅಲ್ಲಣಿಗೆ=ಮೋಳಂ.

೧೪ ಆವುತೆ (ಅವುಸೆ)=ಕವಚಂ.

೧೫ ಆಸಕಱುಹಂ=ಕೈಮಿಱುಹಂ.

೧೬ ಅಸಿದಂ=ಈಡಾಡಿದಂ.

೧೭ ಅೞ್ಕರ್ತಂ=ಪ್ರೀತಿವಟ್ಟಂ.

೧೮ ಆಳಕಂ=ಆಲೇಖಂ.

೧೯ ಅಳಸು=ಸುರತ ಧ್ವನಿ.

೨೦ ಅಳ್ಕು=ಭಯಂ.

೨೧ ಆಜಡಿ=ತುಂಬಿ.

೨೨ ಆವೆಯಾದೊಡಂ=ಆರಾದೊಡಂ.

೨೩ ಆಸು=ಶೀಘ್ರಂ.

೨೪ ಇಂಗೋಲ್ವಿಲ್ಲಂ=ಕಾಮಂ.

೨೫ ಇಱಿಸಿಲ್=ಮಿಗಮುಂ ಕೆಡಪುವ ಗುಱಿ.

೨೬ ಇಜಿವು (ಇಱುವು)=ಸಂದಣಿ.

೨೭ ಉಕ್ಕಿವಂ (ಉಕ್ಕೆವಂ)=ಠಕ್ಕು.

೨೮ ಉಗಿಪದಂ=ಸುಲಿಹಂ.

೨೯ ಉರ್ಗಿವಳದೆಣ್ಣೆ=ಉರಿವೆಣ್ಣೆ.

೩೦ ಉಂಣವಳಿಯದು=ಪಿರಿದು.

೩೧ ಉಬ್ಬಡಿಗಂ (ಉಬ್ಬರಿಗಂ)=ಪಿರಿದು.

೩೨ ಉರ್ಬಿನಂ=ಪಿರಿದು.

೩೩ ಉಮ್ಮಳಿಸಿತು=ಊಷ್ಮೆತೋಱುದುದು.

೩೪ ಉಱ್ಗಿ (ಉಗ್ಗಿ)=ಒಂದು ನೋಂಪಿ.

೩೫ ಉಱುಗಿದಂ=ಕೂರ್ತಂ.

೩೬ ಎಸವು=ಎನ್ನವರ್ತನಂ.

೩೭ ಎಂಬುಕೆಯ್ದಂ=ಎಂದುದಂ ಮಾಡಿದಂ.

೩೮ ಎವುಱ್ (ಎರೆ)=ಎಂಜಲವುಳು.

೩೯ ಏಪೂರ್ತುದು=ತಡಂಬೊಯ್ದುದು.

೪೦ ಒಡಂಬಿ=ಶರೀರಂ.

೪೧ ಒಜಲ್ದಂ=ಕೂರ್ತಂ.

೪೨ ಕಚ್ಚುೞ=ಬಿರುದಿನ ಬಳೆ.

೪೩ ಕಣ್ಣಲದುದು=ಪೊಡಕರಿಸಿತು.

೪೪ ಕಣ್ಮಲೆದುದು=ಪೊಡಕರಿಸಿತು.

೪೫ ಕತ್ತುಪೆನಂ=ಬೆಗಳಂ (ಜಗಳಂ).

೪೬ ಕನ್ನಡವಕ್ಕಿ=ಗಿಳಿ.

೪೭ ಕಮ್ಮಂಗಣೆಯಂ=ಕಾಮಂ.

೪೮ ಕಯ್ಕೋಲ್=ಕಡೆಗೋಲ್.

೪೯ ಕರಿ=ಆನೆ.

೫೦ ಕರೆದಂ=ಅಡಂಗಿದಂ.

೫೧ ಕಸವರಂ=ಪೊನ್ (ಮಿಸುನಿ).

೫೨ ಕಾದಲ್ಮೆ=ಸ್ನೇಹಂ.

೫೩ ಕಾಮುಕರಂ=ಗರ್ವಂ. (ತಾಮುಸಗೆ ತಾಗಿದ ಸುರನ ಕಾಮುಕರಂ ಕರಮು ಡಂಗಿ ಸುರ್ಗಪ್ಪಿನೆಗಂ)

೫೪ ಕಿಗ್ಗ=ಒಜಪು.

೫೫ ಕಿತ್ತಡಿ=ವ್ರತಿ.

೫೬ ಕಿಱುಗೆ=ಒಜಪು.

೫೭ ಕಿಸುಗಣ್ಣಿದಂ=ಕೋಪಿಸಿದಂ.

೫೮ ಕುಂಗರ್=ಬೆಸದವರ್.

೫೯ ಕುಯುಕಂ=ಕುಹಕಂ.

೬೦ ಕುಱು=ಕುಱುಪು (ಕುಜುಪು).

೬೧ ಕೆಕ್ಕೆ=ಕೆನ್ನೆ.

೬೨ ಕೆಂಗಣ್ಣಲರ್ವಕ್ಕಿ=ಕೋಗಿಲೆ.

೬೩ ಕೆಲಚು=ಸಹಾಯಂ.

೬೪ ಕೆಸಜಂಕರ್=ಮಲ್ಲರ್.

೬೫ ಕೇಱು=ಪಜ್ತು.

೬೬ ಕೈದವಂ=ಕೈತವಂ.

೬೭ ಕೊಟ್ಟಜಂ=ಕಪ್ಪಂ.

೬೮ ಕೊತ್ತಣಿ=ಕಾಗೆಗಳ ಮೊತ್ತಂ.

೬೯ ಕೊಂಬು=ಸಂಕೇತ ಸ್ಥಳಂ.

೭೦ ಕೊಜಿದುದು=ಗರವಟಸಿಡುವುದು.

೭೧ ಕೊಳಂ=ಸಂಕೇತ ಸ್ಥಳಂ.

೭೨ ಕೊಳವೇರ್=ಲಾಮುಂಜಂ.

೭೩ ಕೋಮಳೆ = ನೆಯ್ದಿಲ್ (ನೆಯ್ದಲ್)

೭೪ ಕೋವರ್=ಕುಂಬಜರ್ (ಕುಜುಂಬರ್).

೭೫ ಕಾವರಿ=ಸಂಭ್ರಮಂ.

೭೬ ಗರವಸಗೊಂಡುದು = ಗರವಟಸಿಡುವುದು.

೭೭ ಗಜುವೂ=ಕೇದಗೆಯ ಪೂ.

೭೮ ಗಾರಣಂ=ದೂಜು.

೭೯ ಗಾಳಿವಾತು=ಬೈಗುಳ್.

೮೦ ಗುಂಡು=ನೆರವಿ.

೮೧ ಗುಣಕಜುಗೊಂಡಂ=ಪ್ರೀತಿವಟ್ಟ ..

೮೨ ಗೊಂಕೆ=ಗೋಣ್.

೮೩ ಚಣಕಂ = ಚಲ್ಲಣಂ (ಅಘೋರ್ರುಕಂ).

೮೪ ಚತ್ರಾಣಂ=ಒಂದು ಕಾವ್ಯಂ.

೮೫ ಚಲ್ಲವೊತ್ತರ್=ನಂಬಿಸಿ ತಿಂಬವರ್.

೮೬ ಚೆಂನಪೊಂಗಂ=ವೀರಂ.

೮೭ ಚೆ(ಬೆ)ಲಂಕಿದಂ=ಈಡಾಡಿದಂ.

೮೮ ಜಜುಚು=ವ್ಯರ್ಥಾಳಾಪಂ.

೮೯ ಜೀವರಕ್ಕೆ=ಕವಚಂ.

೯೦ ಜೊನ್ನವಕ್ಕಿ=ಚಕೋರಂ.

೯೧ ಜೋಡಂ=ಸಿತಗಂ; ಪಾಣ್ಬಂ.

೯೨ ಜೋಡೆ=ಸ್ಕಿತಗೆ.

೯೩ ಡವಕೆ=ಕಾಳಾಂಜಿ.

೯೪ ಡಾಹಿಣಿ=ರಕ್ಕಸಿಯ ಕತ್ತಿಗೆ.

೯೫ ತಗದುರ್ದುದು=ತಗದುದು.

೯೬ ತಟ್ಟೆಮೆಡಱಿದಂ=ತಟ್ಟೆವೆಣದಂ.

೯೭ ತಡಗುಂಡಿ=ಜಳ ಪ್ರತ್ಯಯಂ.

೯೮ ತಡವಾಡಿದಂ=ತಳ್ಳಂಕಗೊಳಿಸಿದಂ.

೯೯ ತಂಮುಡಂ=ತಡದುದು.

೧೦೦ ತಱಿಸಲಂ=ನಿರ್ಣಯಂ.

೧೦೧ ತಳಮುಳಗು=ಬೆರಗಾಗುಹಂ.

೧೦೨ ತಾರಗೆವಟ್ಟೆ=ಆಗಸಂ.

೧೦೩ ತಿಟ್ಟು=ಬೈಗುಳ್.

೧೦೪ ತಿಬ್ಬಂ=ತೀವ್ರಂ.

೧೦೫ ತಿಱಿಕೊಱೆ=ಆಯ್ದುಕ್ಕಳಿ.

೧೦೬ ತಿಪ್ಪುಟಿಟ್=ಗಱಿ

೧೦೭ ತುಱುಲ್=ವೀರಂ; ಪೊಡವಡಿಕೆ.

೧೦೮ ತೆಗಳ್=ಪೆಗಲ್.

೧೦೯ ತೆಂಗುಹಂ=ಹಕ್ಕಿಯೆಱಗುಹಂ.

೧೧೦ ತೆರ್ಪತ್ತಂ=ಮೂರ್ಛೆ ತಿಳಿಪಂ.

೧೧೧ ತೆರೆಪೊಱೆ(ಡೆ)=ಮಡಿಲ್.

೧೧೨ ತೆಲ್ಲಂಟೆ=ನಿಬ್ಬಣಂ.

೧೧೩ ತೇನತೇನಂ=ಮೇಲೆಮೇಲೆ.

೧೧೪ ತೊದಳ್=ಪುಸಿ.

೧೧೫ ತೋರ್ಪು=ತೋರ್ಕೆ, (ತೋರ್ಪೆ).

೧೧೬ ದಡ್ಡಸ=ಡೊಂಬವಱೆ.

೧೧೭ ದಡ್ರುಂಚೆ=ಸಿತಗೆ (ದಡ್ರಂಚೆ).

೧೧೮ ದಳಿ=ಪತ್ರಂ.

೧೧೯ ದೊಡ್ಡವಾರ್ಗಂ=ಆನೆ ಕುದುರೆಗಳೊಳಾದ ಕಿಱುದೊಡೆಯು ಜಿಡ್ಡು (ಜಡ್ಡು, ದಡ್ಡು).

೧೨೦ ನನಸು=ದಿಟಂ.

೧೨೧ ನವಿರ್=ಕೂದಲು.

೧೨೨ ನಾಗಹಂ=ಗೋದಾವರಿಯೊಳೊಂದು ಮಡು.

೧೨೩ ನಾಳಿ=ನಾಡೆ; ಪಾಡಿ.

೧೨೪ ನಿಕ್ಕುವಂ=ನಿಶ್ಚಯಂ.

೧೨೫ ನಿಗ್ಗವಂ=ಗಜ ದಂತಂ.

೧೨೬ ನಿಗುಂಬಿತು=ಕುಪ್ಪಳಿಸಿತ್ತು.

೧೨೭ ನಿರ್ನೆರಂ, ನಿರ್ನೆರ್(ನೆರ್ನೆರ್, ನಿರ್ನರಂ)=ನಿರ್ನಿಮಿತ್ತಂ.

೧೨೮ ನಿರದಂ=ಕೊಂದಂ.

೧೨೯ ನಿಱುಗಂ=ಒಂದು ಮಾವು.

೧೩೦ ನಿಲುಂಬಿತು=ಕುಪ್ಪಳಿಸಿತ್ತು.

೧೩೧ ನಿಸ್ಸಂಕೆ=ಅವಜ್ಞೆ.

೧೩೨ ನೂಳದು=ಪಿರಿದು.

೧೩೩ ನೆಲಕಲಂ=ಲೋಭಿ.

೧೩೪ ನೇರ್ದಂ=ಅರಿದಂ.

೧೩೫ ನೋಳ್ಪಿದಂ=ಇದಿರ್ಚಿ ನಡೆದಂ.

೧೩೬ ಪಂಚಪಲ್ಲವದ ವಾಜಿಗಳ್ = ರಾಜವಾಹನಂಗಳ್.

೧೩೭ ಪಚ್ಚವಡತಿ=ಹಚ್ಚಡಿಸುವಾಕೆ.

೧೩೮ ಪಚ್ಚಾಯ್ಲ್ಲಂ=ಪಚ್ಚಗಾಜಂ.

೧೩೯ ಪಂಚೆಂ=ಅಪೂರ್ವಂ.

೧೪೦ ಪಡಿಯರವಕ್ಕಿ=ಕೋಗಿಲೆ.

೧೪೧ ಪಂಡಿತವಕ್ಕಿ=ಗಿಳಿ.

೧೪೨ ಪನ್ನತಿಕೆ=ಪರಾಕ್ರಮಂ.

೧೪೩ ಪನಂ=ಸಂಕೇತ ಸ್ಥಳಂ.

೧೪೪ ಪರ್ಪರಿಕೆ=ಕರ್ಕಶತೆ.

೧೪೫ ಪರಕಂ=ಪರೋಕ್ಷಂ.

೧೪೬ ಪಱವೆ=ತುಂಬಿ.

೧೪೭ ಪಲ್ಲಮುಱು=ಆನೆಯ ಮರಿ.

೧೪೮ ಪವಿತ್ರಂ=ಒಂದು ಕಿವಿದುಡುಗೆ.

೧೪೯ ಪಳಾಳಂ=ಠಕ್ಕು.

೧೫೦ ಪಳುಂಕಿದಂ=ನೂಂಕಿದಂ.

೧೫೧ ಪಾಗಲಂ=ಪ್ರಾಕಾರಂ.

೧೫೨ ಪಾಱು=ಬಹಿತ್ರ ಭೇದಂ.

೧೫೩ ಪಾಱತ್ತಿ (ಪಾಣ್ಬೆ)=ಸಿತಗೆ.

೧೫೪ ಪಾಱಿ=ಪಱ್ಕು.

೧೫೫ ಪಿಱುತಿನಿ=ಮರುಳ್.

೧೫೬ ಪುಗ್ಗಾಯ್ಲ್ಲಂ=ಗರ್ವಿತಂ.

೧೫೭ ಪುಚ್ಚಱಿ=ಕೇಡು.

೧೫೮ ಪುಚ್ಚವಣಂ=ಪರೀಕ್ಷೆ; ಅಣ್ಮು.

೧೫೯ ಪೂಜಾಗಜಂ=ಪಟ್ಟವರ್ಧನಂ.

೧೬೦ ಪೆಱಂ = ಎಡೆಯುಂ (ಸಡೆಯುಂ, ಸೆಡೆಯುಂ, ಪಱೆಯುಂ).

೧೬೧ ಪೆಟಿಕು=ಬೆಗಳಂ (ಜಗಳಂ).

೧೬೨ ಪೊರ್ಕ್ಕುಳಿವಕ್ಕಿ=ಕೋಗಿಲೆ.

೧೬೩ ಪೊಚ್ಚಱಿಸಿತು=ಪ್ರೊಡಕರಿಸಿತು.

೧೬೪ ಪೊಚ್ಚಂ=ಪೊಟಱ್.

೧೬೫ ಪೊಪ್ಪುಕಂ=ಸೊಪ್ಪುಗುಟ್ಟುಹಂ.

೧೬೬ ಪೊಱಮಾಱ್=ಬೆನ್ನೀಹಂ.

೧೬೭ ಬಂಡಣಂ=ಕಾಳೆಗಂ.

೧೬೮ ಬದಸು, ಬದಗು=ಕೌಟಿಲ್ಯಂ.

೧೬೯ ಬದ್ದವಣಂ=ಮಂಗಳವಱೆ.

೧೭೦ ಬದ್ದಂ=ಗಾಢಂ.

೧೭೧ ಬದ್ದಿಸಂ(ಬಡ್ಡಿಸಂ)=ಅವುಂಕುಹಂ.

೧೭೨ ಬದರ್=ಪ್ರೌಢಿ.

೧೭೩ ಬದರ್ಗೆ=ಸಾವು.

೧೭೪ ಬವಸು=ವ್ಯವಸಾಯಂ.

೧೭೫ ಬಳ್=ಕುದುರೆಯ ವಳೆಯಂ.

೧೭೬ ಬಳಮುದುರ್, ಬಲಮುದುರ್=ಅಂಕದೌಷಧಂ.

೧೭೭ ಬಾಗುಳ್=ವ್ಯಾಕುಳಂ.

೧೭೮ ಬಾನ್=ಗಗನಂ.

೧೭೯ ಬಾಂಬರ್=ಕುಂಬಱರ್, (ಕುಱುಂಬರ್).

೧೮೦ ಬಾಂಬಂ=ಕುಱುಂಬಂ.

೧೮೧ ಬಿಜ್ಜಲಬಿಟ್ಟೇಱ್=ಹಿರಿಯಬಿಟ್ಟೇಱು

೧೮೨ ಬಿತ್ತಗಂ=ತುತ್ತಿದಂ.

೧೮೩ ಬಿತ್ತಿಗಂ=ಪ್ರಾಥಂ.

೧೮೪ ಬಿಸವಂದಂ=ಕೌತುಕಂ.

೧೮೫ ಬಿಸುಗೆ=ಡೆಂಜೆಯಂ(ಡೆಂಚೆಯಂ)

೧೮೬ ಬೆಗಡು=ಭಯಂ.

೧೮೭ ಬೆಜ್ಜಂ=ವೈದ್ಯಂ.

೧೮೮ ಬೆಜ್ಜೆ=ಚಪ್ಪರಣೆ.

೧೮೯ ಬೆದಂಡೆ=ವೈದಂಡಿಕಂ.

೧೯೦ ಬೆಳ್ಪಳಂ=ಸಂಚಳಂ.

೧೯೧ ಬೆಳ್ಪಡಿ=ಗೊರವಂ.

೧೯೨ ಬೆಳ್ಪು=ನಿರ್ಮಳಿಕೆ.

೧೯೩ ಬೇಂಟೆ=ಸರವಿ ( ಮಳಲಬೇಂಟೆ ಯಂ ಮಾಡಿದವೋಲ್)

೧೯೪ ಬೊಂದಿ=ಶರೀರಂ.

೧೯೫ ಮಗಳ್ಮಾಯ್=ಗಂಡನ ಪತ್ತಿ ಬಿಡ ದಾಕೆ.

೧೯೬ ಮಚ್ಚಿ=ನೊಳಂ (ನೊಣಂ)

೧೯೭ ಮರಾಳಂ (ಮಳಾರಂ)=ಕುದುರೆ ಯ ಪಟ್ಟೆ.

೧೯೮ ಮಱುಗಿದಂ=ಕೂರ್ತಂ.

೧೯೯ ಮಾಳ್ಮಕಿ=ಗಂಡನಪತ್ತಿ ಬಿಡದಾಕೆ.

೨೦೦ ಮಾಂದಡೆ=ಮಾಣದು.

೨೦೧ ಮಾರ್ಮರ್=ಮಲೆವರ್.

೨೦೨ ಮೀನ್=ನಕ್ಷತ್ರಂ.

೨೦೩ ಮುಕ್ಕುಱು=ಮುಸುಱುಹಂ.

೨೦೪ ಮುಚ್ಚುತ್ತ್ರಂ = ಮೂರ್ಛೆವೋದಂ.

೨೦೫ ಮುನ್ನೀರ್=ಸಮುದ್ರಂ.

೨೦೬ ಮುಯ್ಯಾರಡಿ=ತುಂಬಿ.

೨೦೭ ಮುಂಮುರಿ=ಕಾಸಿದ ಮಳಲ್.

೨೦೮ ಮೂಡಿ=ಉದಯಂ.

೨೦೯ ಮೆಚ್ಚವಣಿಗೆ=ಮೆಚ್ಚನುಳ್ಳುದು.

೨೧೦ ಮೆಳ್ಪಡೆ (ಮೆಳ್ಪಡೆ)=ಮರುಳ್ತನಂ.

೨೧೧ ಮೇಳಂಬಂ=ತುಂಬಿ.

೨೧೨ ಮೊನೆ=ಕಾಳೆಗಂ.

೨೧೩ ರಾಜಾವರ್ತಂ=ಎಳೆ ನೀಲಂ.

೨೧೪ ಜಒಬ್ಬೆ (ಜಣಬ್ಬೆ)=ಪಟಿಕು.

೨೧೫ ವಸು=ಪೊನ್.

೨೧೬ ವಂಚಂ=ವಂಶಂ.

೨೧೭ ವಾಳೆ(ಲಾಳೆ)=ಲಿಂಗವತ್ತಿಗೆ.

೨೧೮ ಸಬ್ಬವಂ=ಮೇಳಂ.

೨೧೯ ಸಲಂ=ಪ್ರವೇಶಂ.

೨೨೦ ಸಲಂಡುಗೊಂಡುದು = ಆಕ್ರಮಿಸಿ ಕೊಂಡುದು.

೨೨೧ ಸಾರಿ=ಡೆಂಜೆಯಂ (ಡೆಂಚೆಯಂ).

೨೨೨ ಸಿತಗೆ=ಪಾಣ್ಬೆ.

೨೨೩ ಸಿರಿವಂತಿಗೆ=ಹುರಿಯೋಡು.

೨೨೪ (ಸೀಮುಟ್)=ಎಂಜಲವುಳು.

೨೨೫ ಸುತ್ತಿ=ಶುಕ್ತಿ.

೨೨೬ ಸುನ್ನಂ=ಶೂನ್ಯಂ.

೨೨೭ ಸುಸಿಲ್=ಸಂಭೋಗಂ; ಪ್ರಭಾತ ಕಾಲಂ.

೨೨೮ ಸೈದರ್=ನೇರಿದ್ದರ್.

೨೨೯ ಸೈಪು=ಪುಣ್ಯಂ.

೨೩೦ ಸೊಡಬಲಿ=ಮಸಣವಟ್ಟಗೆ.

೨೩೧ ಸೊಂಡಿ=ಸಿತಗಂ.

೨೩೨ ಸೋಡಂಬಾಡಂ=ಪಿರಿದು.

೨೩೩ ಸೌಸವಂ=ಕಂಪು.

೨೩೪ ಹರಳಿಗಂ=ಜಾರಂ.

೨೩೫ ಹರಿಮೋಖಲೆ=ಇಂದ್ರಜಾಲಂ.

೨೩೬ ಹೇದೆ=ಭೂತಂ.

೨೩೭ ಹೇರಿಗಂ=ಬೇಹಿನವಂ.

## ಸೂಚೀಪತ್ರ ೧

# ಸೂತ್ರಗಳ ವರ್ಣಾನುಕ್ರಮಣಿಕೆ

[ಪೀಠಿಕಾ ಪದ್ಯಗಳನ್ನೂ ಸಮಾಪ್ತಿ ಪದ್ಯಗಳನ್ನೂ ಸೇರಿಸಿದೆ.]

(ಈ ಕೆಳಗೆ ಕೊಟ್ಟಿರುವ ಸಂಖ್ಯೆಗಳು ಪುಟಗಳನ್ನು ತೋರಿಸುವುವು.)

## ಸೂಚೀಪತ್ರ ೨

# ಪ್ರಯೋಗಗಳಲ್ಲಿ ಕೊಟ್ಟಿರುವ ವಾಕ್ಯಗಳ ಮತ್ತು ವಾಕ್ಯಭಾಗಗಳ ವರ್ಣಾನುಕ್ರಮಣಿಕೆ

[ಇಲ್ಲಿ ಕೊಟ್ಟಿರುವ ಸಂಖ್ಯೆಗಳು ಪುಟಗಳನ್ನು ತೋರಿಸುವುವು]

## ಸೂಚೀಪತ್ರ ೨

## ಪ್ರಯೋಗಗಳಲ್ಲಿ ಕೊಟ್ಟಿರುವ ವಾಕ್ಯಗಳ ಮತ್ತು ವಾಕ್ಯಭಾಗಗಳ ವರ್ಣಾನುಕ್ರಮಣಿಕೆ

[ಇಲ್ಲಿ ಕೊಟ್ಟಿರುವ ಸಂಖ್ಯೆಗಳು ಪುಟಗಳನ್ನು ತೋರಿಸುತ್ತವೆ]

# ಶುದ್ಧಿಪತ್ರ

| ಪುಟ | ಪಙ್ಕ್ತಿ | ಅಶುದ್ಧ | ಶುದ್ಧ |
|---|---|---|---|
| ೧೨ | ೧೬ | ಪನ್ನೀರ್ವರೆ | ಪನ್ನಿರ್ವರೆ |
| ೨೧ | ೨೧ | ಎಸಗೆ | ಎಸಡಿಗೆ |
| ೩೧ | ೧೦ | ಳ್ ನಾರ್ಗಳ್ | ಳ್ನಾರ್ಗಳ್ |
| ೩೫ | ೫ | ಗೆಸೆವಮರ್ದುವಳ್ಳಿ | ಗೆಸೆವಮರ್ದಮರ್ದುವಳ್ಳಿ |
| ೩೫ | ೧೭ | ಒಪ್ಪುವ, ಅಮರ್ದುವಳ್ಳಿ | ಒಪ್ಪುವ, ಅಮರ್ದು, ಅಮರ್ದುವಳ್ಳಿ |
| ೪೪ | ೧೭ | ವಿಘುವಿಲ್ಲಪರುಳ್ | ವಿಘುವಿಲ್ಲದಿರುಳ್ |
| ೪೭ | ೨೬ | ದ್ವಿತಾ | ದ್ವಿತ್ವಾ |
| ೪೭ | ೨೮ | ಸಂಧ್ವಿ | ಸಂಧಿ |
| ೫೬ | ೬ | ಮೂವಾಜರ್ | ಮೂವಾಳ್ |
| ೬೦ | ೨ | ತಲೆ | ತೊಲೆ |
| ೬೬ | ೭ | ಅಕಿಂತ | ಅಂಕಿತ |
| ೮೬ | ೧೦ | ಕಾವ್ಯವಿದ್ದೆ | ಕಾವ್ಯವಿದ್ಯೆ |
| ೧೧೦ | ೨೨ | ನೀನಾರ | ನೀನಬಾರ |
| ೧೧೪ | ೯ | ಕೊಂಬ | ಕೊಳ್ವ |
| ೧೧೯ | ೪ | ಗೃಹ, ಗೃಹಂ | ಗ್ರಹ, ಗ್ರಹಂ |
| ೧೨೧ | ೧೭ | ಕಾರಕಮಂ ನಿಯತಾರ್ಥ | ಕಾರಕಮನಿಯತಾರ್ಥ |
| ೧೨೨ | ೫ | ಆನೆಗಳ್ಗೊಂಕಿದವು | ಆನೆಗಳ್ಗೊಂಕಿದುವು |
| ೧೩೮ | ೭ | ಅಂನಂ ಉಂನಂ ಇಂನಂ | ಅಂನಂ ಇಂನಂ ಉಂನಂ ಎಂನಂ |
| ೧೫೧ | ೫ | ಕಡಲಾನ್ತೊಂ | ಕಡಲಾನ್ತಾಂ |
| ೧೬೨ | ೧೩ | ಪಿರಿದು | ಪಿಱಿದು |
| ೧೬೮ | ೨೧ | ಪರಿನಿರ್ಪಿಪ | ಪರಿನಿರ್ವಿಪ |
| ೧೬೯ | ೧೮ | ಮಟಿವಳ್ಳಮಡಪ | ಮಡಿವಳ್ಳನಡಪ |
| ೧೮೬ | ೧೭ | ಉಕಾರಂ | ವುಕಾರಂ |
| ೧೮೯ | ೨೦ | ಬಜಕೆಗೆ | ಬಳಕೆಗೆ |
| ೧೯೪ | ೯ | ಕೆಡಿಕ್ಕೊಂ | ಕಿಡಿಕ್ಕೊಂ |
| ೨೪೦ | ೧೬ | (ಊ) | (ಊದು) |
| ೨೪೧ | ೨೦ | ಕಂಡೂತಿ ಕರ್ಷಣೇ | ಕಂಡೂತಿ ಕಷಣೇ |
| ೨೪೧ | ೨೪ | ತೀರ್ಯಕ್ಸಮೂಹ | ತಿರ್ಯಕ್ಸಮೂಹ |
| ೨೫೬ | ೧೫ | ಪಿಸುನ | ಪಿಶುನ |
| ೨೬೨ | ೨ | ಮೇಲಳ | ಮೇಲಣ |
| ೨೬೬ | ೨೫ | ಖಂಖರಿ | ಖಂಕರಿ |
| ೨೭೭ | ೨೦ | ವರ್ಣಶರ | ವರ್ಣಸರ |